## ಲೇಖಕರಿಗೆ ಸೂಚನೆಗಳು

೧. 'ಪ್ರಬುದ್ಧ ಕರ್ಣಾಟಕ'ದಲ್ಲಿ ಪ್ರಕಟನೆಗಾಗಿ ಎಲ್ಲ ಬಗೆಯ ಲೇಖನಗಳಿಗೂ ಸ್ವಾಗತವಿದೆ. ಲೇಖನಗಳು ಸ್ವತಂತ್ರವಾಗಿರಬಹುದು, ಇಲ್ಲವೆ ಅನುವಾದಗಳಾಗಿರಬಹುದು. ಅನುವಾದವಾಗಿದ್ದರೆ ಮೂಲಲೇಖಕರ ಹಾಗೂ ಲೇಖನದ ಹೆಸರನ್ನು ತಪ್ಪದೆ ಸೂಚಿಸಿದ್ದು, ಲೇಖನದ ಜೊತೆಯಲ್ಲಿಯೇ ಮೂಲಲೇಖಕರ ಅಥವಾ ಪ್ರಕಾಶಕರ ಸಮ್ಮತಿಯನ್ನು ಕಳುಹಿಸಬೇಕು.

೨. ಲೇಖನಗಳನ್ನು ಕಾಗದದ ಒಂದೇ ಮಗ್ಗುಲಿನಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಇಲ್ಲವೇ ಟೈಪ್ ಮಾಡಿರಬೇಕು. ಲೇಖನದೊಂದಿಗೆ ಲೇಖಕರ ಸಂಕ್ಷಿಪ್ತ ಪರಿಚಯವನ್ನು ಕಳುಹಿಸಿಕೊಡಬೇಕು. ಲೇಖಕರಿಗೆ ಕರಡನ್ನು ತಿದ್ದುವ ಅವಕಾಶವಿಲ್ಲದಿರುವುದರಿಂದ ಹಸ್ತಪ್ರತಿಗಳು ಯಾವ ರೀತಿಯಿಂದಲೂ ಅಸ್ಪಷ್ಟವಾಗಿರಬಾರದು; ಅಸಂಪೂರ್ಣವಾಗಿರಬಾರದು. ಲೇಖನಗಳು ಸಚಿತ್ರವಾಗಿದ್ದರೆ, ಲೇಖನದಲ್ಲಿ ಚಿತ್ರಗಳು ಇರಬೇಕಾದ ಜಾಗವನ್ನು ನಿರ್ದೇಶಿಸಿರಬೇಕು.

೩. ಲೇಖನಗಳಲ್ಲಿ, ಇಂಗ್ಲಿಷನ್ನುಳಿದ ಅನ್ಯಭಾಷೆಗಳ ಉದ್ಧರಿತ ಭಾಗಗಳು ಕನ್ನಡ ಲಿಪಿಯಲ್ಲೇ ಇರಬೇಕು. ಅಡಿ ಟಿಪ್ಪಣಿಗಳಲ್ಲಿ, ಲೇಖಕರ ಹೆಸರು, ಪುಸ್ತಕ, ಅಥವಾ ಲೇಖನಗಳ ಹೆಸರು, ಪ್ರಕಾಶಕರ ಹೆಸರು, ಸ್ಥಳ, ಪ್ರಕಟನೆಯ ವರ್ಷ ... ಇವುಗಳನ್ನು ಖಚಿತವಾಗಿ ನಮೂದಿಸಿರಬೇಕು.
...ಹರಣೆಗಳನ್ನು ಕೊಟ್ಟಿದೆ:

... ಕನ್ನಡ ಗ್ರಂಥಸಂಪಾದನೆ (ಶಾರದಾಮಂದಿರ, ...ಸೂರು), ೧೯೬೪, ಪು. ೧೬,

...A century and a half of Literary ...ctivity in Kannada,' Kannada Stu...ies, Vol. 1. No. 2 (Mysore 1965). p. 62.

...ಂಸ್ಕೃತ, ತೆಲುಗು ಮತ್ತು ಹಿಂದಿ ಭಾಷೆಗಳ ...ಿಸಲಾಗುತ್ತದೆ. ವಿಮರ್ಶೆಗಾಗಿ ಪುಸ್ತಕಗಳನ್ನು ...ನ್ನು ಕಳುಹಿಸಬೇಕು.

...ೇಖನಗಳ ೨೫ ಪ್ರತಿಗಳನ್ನು ಒದಗಿಸಲಾಗು...ನ್ನು ವಹಿಸಿದರೆ ಹೆಚ್ಚಿಗೆ ಪ್ರತಿಗಳನ್ನೂ ಒದಗಿಸ...ಇಲ್ಲವೇ ಎಂಬುದನ್ನು ತಿಳಿಯಬಯಸುವವರು, ... ಪಡೆಯಬಿಚ್ಛಿಸುವವರು ಸಾಕಷ್ಟು ಅಂಚೆ

...ರ್ಶೆಗಾಗಿ ಪುಸ್ತಕಗಳನ್ನು, ಸಂಪಾದಕರು, ...ಗ, ಮಾನಸಗಂಗೋತ್ರಿ, ಮೈಸೂರು-೬,

# ಪ್ರಬುದ್ಧ ಕರ್ಣಾಟಕ

ಸಂಪುಟ ೫೨  ಸಂಚಿಕೆ ೧

೨೦೩

ಸಾಧಾರಣ ಸಂವತ್ಸರ




ಚೈತ್ರ ಸಂಚಿಕೆ

ಮೈಸೂರು
ಮೈಸೂರು ವಿಶ್ವವಿದ್ಯಾನಿಲಯ
೧೯೭೦

PRABUDDHA KARNATAKA, Kannada Quarterly of the *University of Mysore*. Volume 52, Number 1, May 1970. Edited by C. P. Krishna Kumar and T. V. Venkatachala Sastry.





ಪ್ರಧಾನ ಸಂಪಾದಕರು
ಡಾ. ಎಚ್. ಮಾನಪ್ಪ ನಾಯಕ

ಸಂಪಾದಕರು
ಸಿ. ಪಿ. ಕೃಷ್ಣಕುಮಾರ್
ಟಿ. ವಿ. ವೆಂಕಟಾಚಲ ಶಾಸ್ತ್ರೀ

ಪ್ರಕಾಶಕರು
ಡಾ. ಪ್ರಭುಶಂಕರ
ಡೈರೆಕ್ಟರ್, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ



ಮುದ್ರಕರು
ಎಚ್. ನರಸಣ್ಣ
ಡೆಪ್ಯೂಟಿ ಡೈರೆಕ್ಟರ್, ಮೈಸೂರು ವಿಶ್ವವಿದ್ಯಾನಿಲಯ ಮುದ್ರಣಾಲಯ

## ವಿಷಯ ಸೂಚಿಕೆ

## ಈ ಸಂಚಿಕೆಯ ಲೇಖಕರು

ಶ್ರೀಯುತರಾದ

| | | | |
|---|---|---|---|
| ೧. | 'ಇಂ' | .... | ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಎಂ.ಎ. ಪದವೀಧರೆ ಕೆ. ಪಿ. ಇಂದುಕಲಾ |
| ೨. | ಎನ್. ಎಚ್. ನಾಗರಾಜ್ | .... | ತಿಪಟೂರು ಕಲ್ಪತರು ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು |
| ೩. | ಡಾ. ಎಂ. ಚಿದಾನಂದಮೂರ್ತಿ | .... | ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ರೀಡರ್ |
| ೪. | ಡಾ. ಎ. ವಿ. ನರಸಿಂಹಮೂರ್ತಿ | .... | ಮಾನಸಗಂಗೋತ್ರಿಯ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಶಾಖೆಯಲ್ಲಿ ರೀಡರ್ |
| ೫. | ಮಾ. ನಾ. ಶ್ರೀಧರ ಉಪ್ಪೂರ್ | .... | ಒಬ್ಬ ವಿದ್ಯಾರ್ಥಿ ಕವಿ |
| ೬. | ಭೀಮರಾವ್ ಚಿಟಗುಪ್ಪಿ | .... | ಹೆಸರಾದ ಲೇಖಕರು |
| ೭. | ಎಂ. ಆರ್. ನರಸಿಂಹನ್ | .... | ಬೆಂಗಳೂರಿನ ಒಬ್ಬ ಲೇಖಕರು |
| ೮. | ಸದಾಶಿವ ಎಣ್ಣೆಹೊಳೆ | .... | ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ದ್ವಿತೀಯ ಎಂ.ಎ. ವಿದ್ಯಾರ್ಥಿ |
| ೯. | ಸಿ. ಪಿ. ಕೆ. | .... | ಕನ್ನಡ ಅಧ್ಯಯನಸಂಸ್ಥೆಯಲ್ಲಿ ರೀಡರ್ ಆಗಿರುವ ಸಿ. ಪಿ. ಕೃಷ್ಣಕುಮಾರ್ |
| ೧೦. | ಆರ್. ಕೆ. ದಿವಾಕರ | .... | ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ತೃತೀಯ ಬಿ.ಎ. ವಿದ್ಯಾರ್ಥಿ |
| ೧೧. | ಡಾ. ಜಿ. ವರದರಾಜರಾವ್ | .... | ಕನ್ನಡ ಅಧ್ಯಯನಸಂಸ್ಥೆಯ ಹರಿದಾಸ ಸಾಹಿತ್ಯ ಸಂಪಾದನ ವಿಭಾಗದಲ್ಲಿ ರೀಡರ್ |
| ೧೨. | ಚೆನ್ನಣ್ಣ ವಾಲೀಕಾರ | .... | ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಎಂ.ಎ. ವಿದ್ಯಾರ್ಥಿ |
| ೧೩. | ಬಿ. ಎಸ್. ಸಣ್ಣಯ್ಯ | .... | ಕನ್ನಡ ಅಧ್ಯಾಯನಸಂಸ್ಥೆಯ ಸಂಪಾದನ ವಿಭಾಗದ ಉಪನಿರ್ದೇಶಕರು |
| ೧೪. | ಶಾಶ್ವತ ಮುಕ್ಕುಂದಿಮಠ | .... | ಕರ್ನಾಟಕ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದಲ್ಲಿ ಸಂಶೋಧಕರು |
| ೧೫. | ಕಾಳೇಗೌಡ ನಾಗವಾರ | .... | ಕನ್ನಡ ಅಧ್ಯಯನಸಂಸ್ಥೆಯಲ್ಲಿ ದ್ವಿತೀಯ ಎಂ.ಎ. ವಿದ್ಯಾರ್ಥಿ |

| | | |
|---|---|---|
| ೧೬. ಶ್ರೀನಿವಾಸ ಹಾವನೂರ | .... | ಮುಂಬಯಿನ 'ತಾತಾ ಇನ್‌ಸ್ಟಿಟ್ಯೂಟ್ ಆಫ್ ಫಂಡಮೆಂಟಲ್ ರಿಸರ್ಚ್'ನಲ್ಲಿ ಗ್ರಂಥಪಾಲಕರು |
| ೧೭. ಎಚ್. ಎಸ್. ಕಾತ್ಯಾಯಿನಿ | .... | ಮೈಸೂರಿನ ಮಹಾರಾಣಿ ಕಾಲೇಜಿನಲ್ಲಿ ಭೌತಶಾಸ್ತ್ರ ಪ್ರಾಧ್ಯಾಪಕರು |
| ೧೮. ಕೆ. ಕೆಂಪೇಗೌಡ | .... | ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಭಾಷಾಶಾಸ್ತ್ರದ ಅಧ್ಯಾಪಕರು |
| ೧೯. ಎಸ್. ಎನ್. ಕೃಷ್ಣಜೋಯಿಸ್ | .... | ಕನ್ನಡ ಅಧ್ಯಯನಸಂಸ್ಥೆಯ ಸಂಪಾದನ ವಿಭಾಗದಲ್ಲಿ ಸಂಶೋಧಕರು. |
| ೨೦. ಆರ್. ರಾಚಪ್ಪ | .... | ಬೆಂಗಳೂರಿನ ರೇಣುಕಾಚಾರ್ಯ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು |
| ೨೧. ಎಂ. ಎಸ್. ಕೃಷ್ಣಮೂರ್ತಿ | .... | ಮಾನಸಗಂಗೋತ್ರಿಯ ಹಿಂದಿ ವಿಭಾಗದಲ್ಲಿ ಅಧ್ಯಾಪಕರು |
| ೨೨. ಎನ್. ಬೋರಲಿಂಗಯ್ಯ | .... | ಮೈಸೂರಿನ ಯುವರಾಜಾ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು |
| ೨೩. ಎಂ. ರಾಮರಾವ್ | .... | ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್-ಕನ್ನಡ ನಿಘಂಟು ಪರಿಷ್ಕರಣ ಸಮಿತಿಯಲ್ಲಿ ಪ್ರಧಾನ ಸಂಪಾದಕರು |
| ೨೪. ಗುಂಡ್ಮಿ, ಚಂದ್ರಶೇಖರ ಐತಾಳ | .... | ಮಂಗಳೂರಿನ ಸ್ನಾತಕೋತ್ತರ ಅಧ್ಯಯನ ಕೇಂದ್ರದಲ್ಲಿ ಕನ್ನಡ ಅಧ್ಯಾಪಕರು |
| ೨೫. ಪಿ. ಕೆ. ರಾಜಶೇಖರ | .... | ಕನ್ನಡ ಅಧ್ಯಯನಸಂಸ್ಥೆಯಲ್ಲಿ ದ್ವಿತೀಯ ಎಂ.ಎ. ವಿದ್ಯಾರ್ಥಿ |
| ೨೬. ಕೆ. ಭೈರವಮೂರ್ತಿ | .... | ಮೈಸೂರು ವಿಶ್ವವಿದ್ಯಾನಿಲಯದ ಸಂಜೆ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು |
| ೨೭. ಟಿ. ವಿ. ಸುಬ್ರಹ್ಮಣ್ಯಂ | .... | ಮಾನಸಗಂಗೋತ್ರಿಯ ಗ್ರಂಥಾಲಯ ವಿಜ್ಞಾನ ವಿಭಾಗದಲ್ಲಿ ಅಧ್ಯಾಪಕರು |
| ೨೮. ಶ್ರೀಪಾದ ಜೋಶಿ | .... | ಸುಪ್ರಸಿದ್ಧ ಮರಾಠಿ ಲೇಖಕರು ಮತ್ತು ಗಾಂಧೀವಾದಿಗಳು |
| ೨೯. ಕುಸುಮಗೀತಾ | .... | ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಹಿಂದಿ ಅಧ್ಯಾಪಕರು |

ಕೆ. ಎಸ್. ರಾಮಸ್ವಾಮಿ ಶಾಸ್ತ್ರಿ

# ಸ್ವಾಮಿ ವಿವೇಕಾನಂದರ ಕೆಲವು ಸ್ಮೃತಿಗಳು

ಸ್ವಾಮಿ ವಿವೇಕಾನಂದರನ್ನು ಸಂಧಿಸುವ ಮತ್ತು ಅವರೊಂದಿಗೆ ಕೆಲವು ದಿವಸಗಳನ್ನು ಕಳೆಯುವ ಸುಯೋಗವು ನನಗೆ ಒದಗಿ ಬಂದಿತ್ತು: ೧೮೯೩ರ ಸೆಪ್ಟೆಂಬರಿನಲ್ಲಿ, ಅವರು ಚಿಕಾಗೋದಲ್ಲಿ ನಡೆದ ಸರ್ವಧರ್ಮ ಸಮ್ಮೇಳನದಲ್ಲಿ ಭಾರತದ ಪ್ರತಿನಿಧಿಯಾಗಿ ಭಾಗವಹಿಸುವ ಮುನ್ನ ಒಮ್ಮೆ, ಮತ್ತು ೧೮೯೭ನೆ ಜನವರಿ ಹದಿನೈದನೆ ತಾರೀಖಿನಂದು ಕೊಲಂಬೋದಲ್ಲಿ ಇಳಿದು, ಕೆಲವು ದಿವಸಗಳ ಮೇಲೆ ಮದ್ರಾಸನ್ನು ತಲಪಿದಾಗ ಮತ್ತೊಮ್ಮೆ. ಈ ಚಿರಸ್ಮರಣೀಯ ಪವಿತ್ರ ಸಂಗ ಸಾನ್ನಿಧ್ಯದಿಂದ ನನ್ನ ಸಮಸ್ತ ಜೀವನವೂ ಪರಿವರ್ತಿತವಾಗಿ ಹೋಯಿತು. ನನ್ನ ನೆನಪಿನ ಶಕ್ತಿಗೆ ಸಾಧ್ಯವಾದಷ್ಟೂ, ನನ್ನ ಮೇಲೆ ಮುದ್ರಿತವಾದ ಪ್ರಭಾವವನ್ನು ಇಲ್ಲಿ ನಿರೂಪಿಸುತ್ತೇನೆ.

ನಾನು ಮತ್ತು ನಮ್ಮ ತಂದೆಯುವರು ತಿರುವಾಂಕೂರಿನಲ್ಲಿದ್ದಾಗ ವಿವೇಕಾನಂದರು ಕೊಚ್ಚಿನ್ನಿಂದ ಅಲ್ಲಿಗೆ ಆಗಮಿಸಿದರು. ನಮ್ಮ ತಂದೆಯುವರಿಗೆ ಕೊಡುವುದಕ್ಕಾಗಿ ಅವರು ಕೊಚ್ಚಿನ್ನಿಂದ ತಮ್ಮೊಂದಿಗೆ ಪರಿಚಯ ಪತ್ರ ತಂದಿದ್ದರು. ಆಗ ನಮ್ಮ ತಂದೆಯುವರು ತಿರುವನಂತಪುರದಲ್ಲಿದ್ದ ಪ್ರಿನ್ಸ್ ಮಾರ್ತಾಂಡವರ್ಮ ಕಾಲೇಜಿನ ಪ್ರಾಧ್ಯಾಪಕರಾಗಿದ್ದರು. ಮದ್ರಾಸ್ ಸರ್ಕಾರದಿಂದ ತಿರುವಾಂಕೂರಿನ ಸರ್ಕಾರವು ನಮ್ಮ ತಂದೆಯುವರ ಸೇವೆಯನ್ನು ಎರವಲಾಗಿ ಪಡೆದಿತ್ತು. ನಾನು ೧೮೯೨ರಲ್ಲಿ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಪಾಸಾಗಿ, ಇಂಟರ್ ಮೀಡಿಯಟ್ ತರಗತಿಗಾಗಿ ತಿರುವಾಂಕೂರಿನ ಮಹಾರಾಜಾ ಕಾಲೇಜಿಗೆ ಸೇರಿದ್ದೆ. ಇಂತಹ ಸಂಧಿಕಾಲದಲ್ಲಿ ೧೮೯೨ರ ಕೊನೆಯಲ್ಲಿ ವಿಧಿ ನನ್ನನ್ನು ಸ್ವಾಮಿಜಿಯ ಪವಿತ್ರ ಸಂಗಕ್ಕೆ ಕರೆತಂದಿತ್ತು.

ಆಗ ಸ್ವಾಮಿಜಿ ಪ್ರಖ್ಯಾತರಾಗಿರಲಿಲ್ಲ; ಆದರೆ ಹಿಂದೂಧರ್ಮವನ್ನು ಮತ್ತು ಅಧ್ಯಾತ್ಮವನ್ನು ಜಗತ್ತಿನಾದ್ಯಂತ ಹರಡಲು ತುಂಬ ಆವೇಗಭರಿತರಾಗಿದ್ದರು. ಒಂದು ಬೆಳಗ್ಗೆ ನಾನು ಮನೆಯಲ್ಲಿದ್ದಾಗ ಅವರು ಅನಿರೀಕ್ಷಿತವಾಗಿ ಆಗಮಿಸಿದರು. ತೇಜಸ್ವಿಯಾದ ಮುಖ, ದೀರ್ಘದೇಹ, ಧೀರಗಂಭೀರಾಕೃತಿಯ ವ್ಯಕ್ತಿಯೊಬ್ಬನನ್ನು

ನಾನು ಕಂಡೆ. ಅವರು ಕಾವಿಬಣ್ಣದ ಪೇಟವನ್ನು ತಲೆಗೆ ಸುತ್ತಿದ್ದರು; ಅದೇ ಬಣ್ಣದ ತೊಟ್ಟಿದ್ದ ನಿಲುವಂಗಿ ಪಾದದವರೆಗೂ ಮುಟ್ಟುತ್ತಿತ್ತು; ಸೊಂಟಕ್ಕೆ ನಡುಪಟ್ಟಿ ಸುತ್ತಿದ್ದರು.

ಸ್ವಾಮಿಜಿ ಕೇಳಿದರು: "ಇಲ್ಲಿ ಪ್ರೊಫೆಸರ್ ಸುಂದರ್‌ರಾಮನ್ ಇರುವರೆ? ಅವರಿಗೆ ಕೊಡುವುದಕ್ಕಾಗಿ ನಾನು ಒಂದು ಪತ್ರ ತಂದಿದ್ದೇನೆ." ಅವರ ಧ್ವನಿ ಶ್ರೀಮಂತವಾಗಿ, ತುಂಬು ಮೊರೆತದಿಂದ ಘಂಟಾನಾದದಂತೆ ಹೊಮ್ಮಿತು— ರೊಮೆನ್ ರೋಲಾ (Romain Rolland) ಹೇಳಿರುವಂತೆ: "He had a beautiful voice like a violoncello, grave without violent contrasts, but with deep vibrations that filled both hall and hearts. Once his audience was held he could make it sink to an intense piano, piercing his hearers to the soul."

ನಾನು ತಲೆಎತ್ತಿ ಅವರನ್ನು ನೋಡಿದೆ: ನನ್ನ ಬಾಲಸದೃಶ ಮುಗ್ಧತೆಯಿಂದಲೊ ಏನೋ (ನಾನು ಆಗ ಕೇವಲ ೧೪ ವರ್ಷದ ಬಾಲಕನಾಗಿದ್ದೆ) ಅಂತೂ ಅವರು ಮಹಾರಾಜರು ಇರಬೇಕೆಂದೇ ಭಾವಿಸಿದೆ. ಅವರು ಕೊಟ್ಟ ಪತ್ರವನ್ನು ತೆಗೆದುಕೊಂಡು ಮಹಡಿಯ ಮೇಲಿದ್ದ ನಮ್ಮ ತಂದೆಯವರಲ್ಲಿಗೆ ಓಡಿಹೋಗಿ ಹೇಳಿದೆ: "ಮಹಾರಾಜರೊಬ್ಬರು ಬಂದಿದ್ದಾರೆ; ಕೆಳಗಡೆ ಕಾಯುತ್ತಿದ್ದಾರೆ; ನಿಮಗೆ ಕೊಡಬೇಕೆಂದು ಈ ಪತ್ರವನ್ನು ಕೊಟ್ಟರು." ನಮ್ಮ ತಂದೆ ನಕ್ಕು ಹೇಳಿದರು: "ರಾಮಸ್ವಾಮಿ! ಎಂತಹ ಸರಳ ಸ್ವಭಾವದ ಮುಗ್ಧ ಹುಡುಗನೊ ನೀನು! ನಮ್ಮಂತಹರ ಮನೆಗೆ ಮಹಾರಾಜರು ಬರುವುದಿಲ್ಲ." ನಾನು ಉತ್ತರಿಸಿದೆ: "ನೀವು ಬಂದು ನೋಡಿ. ಅವರು ಮಹಾರಾಜರೆ. ನನಗೆ ಚೆನ್ನಾಗಿ ಗೊತ್ತು." ನಮ್ಮ ತಂದೆ ಕೆಳಗಿಳಿದು ಬಂದು ಸ್ವಾಮಿಜಿಗೆ ನಮಸ್ಕರಿಸಿ ಮೇಲಕ್ಕೆ ಕರೆದುಕೊಂಡು ಹೋದರು. ಸ್ವಾಮಿಜಿಯೊಡನೆ ದೀರ್ಘಕಾಲ ಸ್ವಾರಸ್ಯಕರ ಸಂಭಾಷಣೆ ನಡೆಸಿದ ಅನಂತರ ನಮ್ಮ ತಂದೆ ಕೆಳಗಿಳಿದು ಬಂದು ಹೇಳಿದರು: "ನಿಸ್ಸಂಶಯವಾಗಿಯೂ ಅವರು ಮಹಾರಾಜರೇ. ಆದರೆ ಒಂದು ಸಣ್ಣ ಪ್ರದೇಶ ಅಥವಾ ರಾಜ್ಯಕ್ಕಲ್ಲ; ಪಾರವಿಲ್ಲದ ಆಧ್ಯಾತ್ಮ ಸಾಮ್ರಾಜ್ಯಕ್ಕೆ ಅವರು ರಾಜರು."

ಈ ಬಾರಿ ಸ್ವಾಮಿಜಿ ಒಂಬತ್ತು ದಿವಸಗಳು ನಮ್ಮ ಮನೆಯಲ್ಲಿ ತಂಗಿದ್ದರು. ನಮ್ಮ ತಂದೆಯವರು ಆ ಸಮಯದ ತಮ್ಮ ಭಾವನೆಗಳನ್ನು "ಸ್ವಾಮಿಜಿಯೊಂದಿಗೆ ನನ್ನ ಮೊದಲ ನವರಾತ್ರಿ" ಎಂಬ ಲೇಖನದಲ್ಲಿ ವರ್ಣಿಸಿದ್ದಾರೆ. ತಿರುವಾಂಕೂರಿನ ನಮ್ಮ ಮನೆಗೆ ಸ್ವಾಮಿಜಿಯವರ ಸ್ಮರಣೀಯ ಸಂದರ್ಶನವಾದ ಸಮಯದಲ್ಲಿನ ಅವರ ಮಾತು ಕತೆಗಳು ನನ್ನ ಮನದ ಮೇಲೆ ಬೀರಿದ ಚಿರಮುದ್ರಿತ ಭಾವನೆಗಳನ್ನು ನಾನು ಇಲ್ಲಿ ಸಂಗ್ರಹವಾಗಿ ಹೇಳುತ್ತೇನೆ.

ಒಂದು ಮುಂಜಾನೆ ನಾನು ನಮ್ಮ ಪಠ್ಯಪುಸ್ತಕವಾಗಿದ್ದ ಕಾಳಿದಾಸನ 'ಕುಮಾರ ಸಂಭವ'ವನ್ನು ಓದುತ್ತಿದ್ದಾಗ ಸ್ವಾಮಿಜಿ ಒಳಗೆ ಬಂದರು; ಅವರು

ಕೇಳಿದರು : "ಏನು ಪುಸ್ತಕ ಓದುತ್ತಿರುವೆ ?" "ಇದನ್ನು, ಕಾಳಿದಾಸನ ಕುಮಾರ ಸಂಭವದ ಮೊದಲನೆ ಸರ್ಗವನ್ನು." "ಆ ಮಹಾಕವಿಯ ಹಿಮಾಲಯದ ವರ್ಣನೆ ಯನ್ನು ಮತ್ತೊಮ್ಮೆ ಓದುವೆಯಾ ?" ನಾನು ದಕ್ಷಿಣ ಭಾರತದಲ್ಲಿ ಸಾಮಾನ್ಯ ವಾಗಿ ಪ್ರಚಾರದಲ್ಲಿರುವ ಸಂಗೀತದ ಶ್ರುತಿಯೊಂದಿಗೆ, ಕಾಳಿದಾಸನ ಸುಂದರವಾದ ಮಂಜುಳ ನಾದ ತರಂಗದ ಹಿಮಾಲಯ ವರ್ಣನೆಯ ಆ ಶ್ಲೋಕವನ್ನು ಪುನರಾ ವೃತ್ತಿಮಾಡಿದೆ. ಸ್ವಾಮಿಜಿ ಮುಗುಳ್ನಗುತ್ತಾ ಪ್ರಸನ್ನರಾದಂತೆ ತೋರುತ್ತಿದ್ದರು. "ನಾನು ಬಹುಕಾಲ ಹಿಮಾಲಯದಲ್ಲಿನ ಭವ್ಯದೃಶ್ಯಗಳ ಮಧ್ಯೆಯೆ ಇದ್ದನಂತರ ಇಲ್ಲಿಗೆ ಬರುತ್ತಿರುವೆನೆಂಬುದು ನಿನಗೆ ಗೊತ್ತೆ?" ಎಂದರು. ನಾನು ಸಂತೋಷ ದಿಂದ ಕುತೂಹಲಿತನಾದೆ. ಪ್ರಾರಂಭದ ಪದ್ಯವನ್ನು ಮತ್ತೊಮ್ಮೆ ಓದುವಂತೆ ಹೇಳಿದರು. ನಾನು ಹಾಗೆಯೆ ಮಾಡಿದೆ. "ಇದರ ಅರ್ಥ ನಿನಗೆ ಗೊತ್ತೆ? ನನಗೆ ಹೇಳುವೆಯಾ" ಎಂದರು. ನಾನು ಹಾಗೆ ಮಾಡಿದೆ. "ಅದೂ ಸರಿಯೆ ; ಆದರೆ ಅಷ್ಟೇ ಅಲ್ಲ?" ಎಂದು ಹೇಳಿ, ತಮ್ಮ ಅನುಪಮ ಶ್ರುತಿಯ ಗಂಭೀರ ಧ್ವನಿಯಲ್ಲಿ ಮತ್ತೆ ಆ ಪದ್ಯವನ್ನು ಪಠಿಸಿದರು :

"ಅಸ್ತ್ಯುತ್ತರಸ್ಯಾಂ ದಿಶಿ ದೇವತಾತ್ಮಾ
ಹಿಮಾಲಯೋ ನಾಮ ನಗಾಧಿರಾಜಃ
ಪೂರ್ವಾಪರೌ ತೋಯನಿಧೀವಗಾಹ್ಯ
ಸ್ಥಿತಃ ಪೃಥಿವ್ಯಾ ಇವ ಮಾನದಂಡಃ"

"ಈ ಶ್ಲೋಕದ ಪ್ರಮುಖ ಪದಗಳು ದೇವತಾತ್ಮಾ ಮತ್ತು ಮಾನದಂಡ. ಹಿಮಾಲಯವು ಕೇವಲ ಪ್ರಕೃತಿಯಿಂದ ಆಕಸ್ಮಿಕವಾಗಿ ರಚಿತವಾದ ಗೋಡೆ ಮಾತ್ರವಲ್ಲ ಎಂಬುದನ್ನು ಕವಿ ಸೂಚ್ಯವಾಗಿ ಧ್ವನಿಸುತ್ತಿದ್ದಾನೆ. ಉತ್ತರ ಧ್ರುವ ಪ್ರದೇಶಗಳಿಂದ ಬೀಸುವ ಶೀತಲ ಹಿಮ ಮಾರುತಗಳನ್ನು ತಡೆಯುವುದಲ್ಲದೆ, ಧಾಳಿ ಕಾರರ ಪ್ರಾಣಾಘಾತಕ ವಿನಾಶಕರ ಆಕ್ರಮಣಗಳಿಂದಲೂ ಭಾರತ ಮತ್ತು ಅದರ ಸಂಸ್ಕೃತಿಯನ್ನು ಕಾಪಿಡುವ ದೇವತಾತ್ಮವಾಗಿದೆ. ಇಷ್ಟೇ ಅಲ್ಲದೆ ಹಿಮವನ್ನು ಕರಗಿಸಿ ಮಹಾನದಿಗಳಾದ ಗಂಗಾ ಯಮುನಾ ಬ್ರಹ್ಮಪುತ್ರಗಳಿಗೆ ನಿರಂತರ ನೀರು ಹರಿಸಿ ಅಕಾಲಿಕವಾಗಿ ಬೀಸುವ ಮುಂಗಾರು ಮಾರುತಗಳಿಂದ ಭಾರತವನ್ನು ರಕ್ಷಿಸಿದೆ—ಹಿಮಾಲಯ. ಭೂತ ಭವಿಷ್ಯತ್ ವರ್ತಮಾನದ ಎಲ್ಲ ಸಂಸ್ಕೃತಿಗಳನ್ನು ಒರೆಗೆ ಹಚ್ಚಿದರೂ ಏಕಮಾತ್ರ ಸ್ಥಿರರೂಪದಲ್ಲಿರುವುದು, ಮಾನವ ಸಂಸ್ಕೃತಿ ಗಳಲ್ಲೆಲ್ಲಾ ಮಹೋನ್ನತವಾದದ್ದು ಭಾರತೀಯ ಸಂಸ್ಕೃತಿ ಎಂಬ ಕವಿಯ ದೃಢ ವಿಶ್ವಾಸವನ್ನೂ 'ಮಾನದಂಡ' ಸೂಚಿಸುತ್ತದೆ. ಕವಿಯ ದೇಶಭಕ್ತಿಯು ಕೆಚ್ಚು ಅಂತಹುದು." ಅವರ ಮಾತುಗಳನ್ನು ಆಲಿಸುತ್ತಿದ್ದಂತೆ ನನಗೆ ರೋಮಾಂಚನ ವಾಯಿತು. ಇಂದಿಗೂ ಕೂಡ ನಾನು ಆ ಅಮೂಲ್ಯನಿಧಿಯನ್ನು ರಕ್ಷಿಸಿಟ್ಟದ್ದೇನೆ.

ಈಗಲೂ ಸಹ ಸ್ವಲ್ಪವೂ ಅಳಿಯದ, ಮಸುಳದ ತೇಜಸ್ಸಿನಿಂದ ಅವು ನನ್ನ ಹೃದಯ ದಲ್ಲಿ ಬೆಳಗುತ್ತಿವೆ.

ಮತ್ತೊಂದು ದಿವಸ ಅವರು ನನಗೂ ನಮ್ಮ ತಂದೆಯವರಿಗೂ ಹೀಗೆ ಹೇಳಿದರು : "ದೇಶಭಕ್ತಿಯನ್ನು ಕಾರ್ಯತಃ ಆಚರಣೆಗೆ ತರುವುದೆಂದರೆ ಭಾವಮಯರಾಗುವುದು ಅಥವಾ ತಾಯ್ನಾಡಿನ ಮೇಲಿನ ಪ್ರೇಮಾಧಿಕ್ಯದಿಂದ ಭಾವೋದ್ರಿಕ್ತರಾಗುವುದಲ್ಲ ; ನಾಡಿನ ಸಹಜೀವಿಗಳ ಸೇವೆಯಲ್ಲಿ ಉದ್ಯುಕ್ತರಾಗು ವುದು. ನಾನು ಭಾರತದಾದ್ಯಂತ ಕಾಲ್ನಡಿಗೆಯಿಂದಲೆ ಸಂಚರಿಸಿ ನಮ್ಮ ಜನರ ಅಜ್ಞಾನ ದುಃಖ ದಾರಿದ್ರ್ಯ ಕೊಳಕನ್ನು ಕಣ್ಣಾರೆ ಕಂಡಿದ್ದೇನೆ. ನನ್ನ ಆತ್ಮವೆಲ್ಲಾ ಇದಕ್ಕಾಗಿ ಪರಿತಪಿಸುತ್ತಿದೆ. ಇಂತಹ ದುರ್ಗತಿಯನ್ನು ಪರಿವರ್ತಿಸಬೇಕೆಂಬ ತೀವ್ರ ಹಂಬಲದಿಂದ ಉರಿಯುತ್ತಿದ್ದೇನೆ. ಯಾರೂ ಕರ್ಮದ ಬಗ್ಗೆ ಮಾತನಾಡ ದಿರಲಿ. ದುಃಖಪಡುವುದು ಅವರ ಕರ್ಮವಾದರೆ, ಅವರನ್ನು ಆ ಸಂಕಟದಿಂದ ಮುಕ್ತರನ್ನಾಗಿ ಮಾಡುವುದು ನಮ್ಮ ಕರ್ಮ. ನೀವು ದೇವರನ್ನು ಕಾಣಲಾಶಿ ಸಿದರೆ ಮನುಷ್ಯರನ್ನು ಸೇವಿಸಿ. ನಾರಾಯಣನ ಬಳಿ ಸಾರಬೇಕಾದರೆ, ಹಸಿವಿನಿಂದ ಬಳಲುತ್ತಿರುವ ಭಾರತದ ಕೋಟ್ಯನುಕೋಟಿ ದರಿದ್ರನಾರಾಯಣರನ್ನು ಸೇವಿಸಲೇ ಬೇಕು." ಮುಂದೆ ರಾಮಕೃಷ್ಣ ಮಿಶನ್ ಮಹಾವೃಕ್ಷ ಬೆಳೆಯಲು ಇದೇ ಮೂಲ ವಾಯಿತು. ಅವರ ಮಾತುಗಳಿಂದ ನಮ್ಮ ಹೃದಯ ಕರಗಿಹೋಯಿತು, ಸಮಾಜ ಸೇವಾ ಜ್ವಾಲೆಯ ಕಿಡಿ ನಮ್ಮ ಆತ್ಮವನ್ನೂ ತಾಗಿತು. ಈ ಸೇವೆ ಅವರಿಗೆ ಅಧ್ಯಾತ್ಮದಷ್ಟೇ ಪ್ರಿಯವಾಗಿತ್ತು, ಮುಂದೆ ಅವರ ಜೀವನದ ಒಂದು ಸ್ಮರಣೀಯ ಪತ್ರದಲ್ಲಿ ಹೀಗೆ ಉದ್ಗರಿಸಿದ್ದಾರೆ: "ಪುನಃ ಪುನಃ ನಾನು ಜನ್ಮವೆತ್ತುವಂತಾಗಿ ಸಾವಿರಾರು ದುಃಖ ದುರಿತಗಳನ್ನು ಅನುಭವಿಸುವಂತಾಗಲಿ. ಏಕೆಂದರೆ ಇದ ರಿಂದಾಗಿ ನನ್ನ ಏಕಮಾತ್ರ ಶ್ರದ್ಧೆಯ ಸಮಷ್ಟಿ ಜೀವ ಸ್ವರೂಪನಾದ ಭಗವಂತನನ್ನು ಪೂಜಿಸುವಂತಾಗಲಿ. ಇದಕ್ಕಿಂತ ಮಿಗಿಲಾಗಿ ದುರುಳರೂಪಿಯಾದ ನನ್ನ ದೇವರನ್ನು, ದುಃಖಿ ರೂಪಿಯಾದ ನನ್ನ ದೇವರನ್ನು, ಎಲ್ಲ ಜನಾಂಗಗಳ ಎಲ್ಲ ಮತಗಳ ದೀನರೂಪಿಯಾದ ನನ್ನ ದೇವರನ್ನು ಪೂಜಿಸುವಂತಾಗಲಿ ಎಂಬುದೇ ನನ್ನ ಪ್ರಾರ್ಥನೆಯ ಪರಮ ಗುರಿ." ಈ ಭಾವಯುಕ್ತ ಮಾತುಗಳಲ್ಲಿ ಸ್ವತಃ ರಂತಿ ದೇವನ ಧ್ವನಿಯನ್ನೆ ಕಾಣುತ್ತೇವೆ.

ಮತ್ತೊಮ್ಮೆ ಸ್ವಾಮಿಜಿ ನನಗೆ ಹೇಳಿದರು : "ನೀನಿನ್ನೂ ಪುಟ್ಟಹುಡುಗ. ಇನ್ನು ಸ್ವಲ್ಪ ದಿವಸಗಳಲ್ಲಿಯೆ ನೀನು ಪ್ರಸ್ಥಾನ ತ್ರಯಗಳಾದ ಉಪನಿಷತ್, ಬ್ರಹ್ಮ ಸೂತ್ರ, ಭಗವದ್ ಗೀತೆಗಳನ್ನೂ, ಹಾಗೆಯೆ ಪುರಾಣ ಇತಿಹಾಸ ಆಗಮಗಳನ್ನೂ ಅಧ್ಯಯನ ಮಾಡುವೆ ಎಂದು ಭಾವಿಸುವೆ. ಹಾಗೇ ಆಗಲಿ ಎಂದು ಹಾರೈಸುತ್ತೇನೆ. ಪ್ರಪಂಚದ ಮತ್ತಾವ ಭಾಗದಲ್ಲಿಯಾಗಲಿ ನೀನು ಇದಕ್ಕೆ ಸರಿ ಸಮನಾದುದನ್ನು ಕಾಣಲಾರೆ. ಜೀವವರ್ಗದಲ್ಲೆಲ್ಲಾ ಮನುಷ್ಯನೊಬ್ಬನಿಗೆ ತಾನೆ,

'ತಾನು ಎಲ್ಲಿಂದ ಬಂದಿದ್ದೇನೆ? ಏನಾಗಿದ್ದೇನೆ? ಎಲ್ಲಿಗೆ ಹೋಗುತ್ತೇನೆ?' ಎಂಬ ಜ್ಞಾನವನ್ನು ಹೊಂದಬೇಕೆಂಬ ಹಂಬಲ. ಅಭಯ, ಅಹಿಂಸಾ, ಅಸಂಗ, ಆನಂದ ಇವು ನಾಲ್ಕೂ ನೀನು ನೆನಪಿನಲ್ಲಿಡಲೇಬೇಕಾದ ಕೀಲಿಕೈಸದೃಶ ಪದಗಳು. ಈ ಪದಗಳೇ ನಿಜವಾಗಿಯೂ ನಮ್ಮ ಎಲ್ಲ ಪವಿತ್ರಗ್ರಂಥಗಳ ಸಾರ ಸರ್ವಸ್ವ. ಅವನ್ನು ಮರೆಯದೆ ನೆನಪಿನಲ್ಲಿಡು. ಅವುಗಳ ಅರ್ಥ ಮುಂದೆ ನಿನಗೆ ಸ್ಪಷ್ಟವಾಗುತ್ತದೆ." ಆಗ ನಾನು ಆ ಭಾವನೆಗಳನ್ನೆಲ್ಲಾ ಪೂರ್ಣವಾಗಿ ಗ್ರಹಿಸಲಾರದಷ್ಟು ಸಣ್ಣ ಹುಡುಗನಾಗಿದ್ದೆ. ಆದರೆ ಆನಂದದಿಂದ ಆ ಬೋಧನೆಗಳನ್ನೆಲ್ಲಾ ನನ್ನ ಹೃದಯದಲ್ಲಿ ಭದ್ರವಾಗಿಟ್ಟುಕೊಂಡೆ. ಅಲ್ಲಿಂದ ಮುಂದಿನ ನನ್ನ ಜೀವಮಾನವೆಲ್ಲಾ ಅವುಗಳನ್ನು ಸಮಗ್ರ ಸ್ವರೂಪದಲ್ಲಿ ಅರಿಯಲು ಯತ್ನಶೀಲನಾಗಿದ್ದೇನೆ.

ಸ್ವಾಮಿಜಿ ನನ್ನನ್ನು ತುಂಬ ವಿಶ್ವಾಸದಿಂದ ಕಾಣುತ್ತಿದ್ದರಾದ್ದರಿಂದ, ಈ ಒಂಭತ್ತು ದಿವಸಗಳು (೧೮೯೨) ನಮ್ಮ ಮನೆಯಲ್ಲಿರುವಾಗ ನಾನು ಅವರ ನಿಕಟವರ್ತಿಯಾಗಿದ್ದೆ; ಅಲ್ಲದೆ ಸೂಜಿಗಲ್ಲಿನಂತೆ ಅವರಲ್ಲಿದ್ದ ಯಾವುದೊ ಒಂದು ಆಕರ್ಷಣೆ ನನ್ನನ್ನು ಅವರತ್ತ ಸೆಳೆಯುತ್ತಿತ್ತು. ನಮ್ಮ ತಂದೆಯವರು ಸ್ವಾಮಿಜಿಯ ಜೊತೆ ನನ್ನ ಗ್ರಹಣಶಕ್ತಿಗೆ ಮೀರಿದ ಧಾರ್ಮಿಕ ಮತ್ತು ತಾತ್ವಿಕವಾದ ಮಾರ್ಮಿಕ ಸಮಸ್ಯೆಗಳನ್ನು ಕುರಿತು ಚರ್ಚಿಸುತ್ತಿದ್ದರು. ಅವರ ಕಣ್ಣುಗಳು ದಯಾರ್ದ್ರವಾಗಿ ಪ್ರೇಮಪೂರ್ಣವಾಗಿದ್ದು, ತುಂಬ ಆಕರ್ಷಕವಾಗಿದ್ದವು; ಅವರ ಧ್ವನಿ ಮಧುರವಾಗಿದ್ದರೂ ಶಕ್ತಿಪೂರ್ಣವಾಗಿತ್ತು; ಆವೆರಡು ಗುಣಗಳೂ ಅವರ ಧ್ವನಿಯಲ್ಲಿ ಅಸಾಮಾನ್ಯ ರೀತಿಯಲ್ಲಿ ಸಂಗಮಿಸಿದ್ದುವು. ಅವರ ನಡಿಗೆಯಲ್ಲಿ ರಾಜಗಾಂಭೀರ್ಯವಿತ್ತು; ಅವರ ಮುಗುಳ್ನಗೆಯ ಹೊಂಬಿಸಿಲಿನಲ್ಲಿ ಬೆಚ್ಚಗಿರಲು, ಅವರ ಸಾನ್ನಿಧ್ಯದ ಸುಖದಲ್ಲಿರಲು ನನಗೆ ಮಹದಾನಂದವಾಗುತ್ತಿತ್ತು. ಆಗಾಗ ಅವರು ಇನ್ನೂ ಅನೇಕ ಸಂಗತಿಗಳನ್ನು ನನಗೆ ಸಂಕ್ಷೇಪವಾಗಿ ಹೇಳಿದ್ದಾರೆ. ಆದರೆ ಇಷ್ಟು ಕಾಲಾನಂತರದಲ್ಲಿ—ಆ ಘಟನೆಗಳು ಘಟಿಸಿ ೬೦ ವರ್ಷಗಳಾದ ಮೇಲೆ—ನನ್ನ ಭೂತಕಾಲದ ಸ್ಮೃತಿಚಿತ್ರಗಳಲ್ಲಿ ಮೇಲೆ ಹೇಳಿದ ಸ್ಮರಣೀಯ ಸಂಗತಿಗಳು ಪ್ರಧಾನವಾಗಿ ಎದ್ದು ನಿಂತಿವೆ....

............೧೮೯೭ ಫೆಬ್ರುವರಿ ಪ್ರಾರಂಭದಲ್ಲಿ ಸ್ವಾಮಿಜಿ ಮದ್ರಾಸನ್ನು ತಲಪಿದರು. ರೋಮೆನ್ ರೋಲೊ ಮಾಡಿರುವ, ಸ್ವಾಮಿಜಿಗೆ ಮದ್ರಾಸಿನಲ್ಲಿ ನೀಡಿದ ಅತ್ಯಂತ ವೈಭವೋಪೇತವಾದ ಸಾರ್ವಜನಿಕ ಸತ್ಕಾರ ಸಮಾರಂಭದ ವರ್ಣನೆಯು ಅಕ್ಷರಶಃ ಸತ್ಯವಾದದ್ದು. ಅದನ್ನು ಕಣ್ಣಾರೆ ಕಂಡ ನಾನೇ ಅದಕ್ಕೆ ಸಾಕ್ಷಿಯಾಗಿ ಸಮರ್ಥಿಸುತ್ತೇನೆ. ಅವರು ಹೇಳುತ್ತಾರೆ: "ಮದ್ರಾಸು ಒಂದು ವಾರದಿಂದ ಒಂದು ರೀತಿಯ ಕಾತರ ಉದ್ವಿಗ್ನತೆಯಿಂದ ಅವರನ್ನು ನಿರೀಕ್ಷಿಸುತ್ತಿತ್ತು. ಅವರಿಗಾಗಿ ಹದಿನೇಳು ವಿಜಯ ಕಮಾನುಗಳನ್ನು ಕಟ್ಟಲಾಗಿತ್ತು. ಭಾರತದ ವಿವಿಧ ಭಾಷೆಯ ಇಪ್ಪತ್ತುನಾಲ್ಕು ಅಭಿನಂದನಾ ಪತ್ರಗಳು ಸಿದ್ಧವಾಗಿದ್ದುವು.

ಅವರ ಬರುವಿಕೆಯ ಒಂಭತ್ತು ದಿನಗಳ ಸಂಭ್ರಮದ ಉತ್ಸವದಲ್ಲಿ, ಅಲ್ಲಿನ ಬೇ ಸಾರ್ವಜನಿಕ ಚಟುವಟಿಕೆಗಳೆಲ್ಲಾ ಸಂಪೂರ್ಣ ಸ್ತಬ್ಧಗೊಂಡಿದ್ದುವು

"ಉನ್ಮಾದಕಾತರರಾದ ಜನರಿಗೆ ತಮ್ಮ ಸಂದೇಶವನ್ನು ನೀಡಿದರು. ರಾಮನ, ಶಿವನ, ಕೃಷ್ಣನ ಭರತ ಭೂಮಿಯ ಪುನರುದ್ಧಾರಕ್ಕಾಗಿ, ಅಮೃತಾತ್ಮನ ಎಚ್ಚರಕ್ಕಾಗಿ ಕಂಕಣಬದ್ಧರಾಗುವಂತೆ, ತಮ್ಮ ಪಾಂಚಜನ್ಯಸದೃಶ ವಾಣಿಯನ್ನು ಮೊಳಗಿಸಿದರು, ಯೋಧನಂತೆ ಜನರನ್ನು ಸಾಮೂಹಿಕವಾಗಿ ಎಚ್ಚರಿಸುವಂತೆ ತಮ್ಮ 'ಸಮರ ನೀತಿಯನ್ನು' ವಿವರಿಸಿದರು."

ಸ್ವಾಮಿಜಿಯ ಪ್ರಶಂಸಕರಲ್ಲಿ, ಅವರ ವಾಣಿಯನ್ನು ಮೈಮರೆತು ಆಲಿಸುವವರಲ್ಲಿ ನಾನೂ ಒಬ್ಬನಾಗಿದ್ದೆ. ಆಗ ನಾನು ಕುಂಭಕೋಣಂ ಕಾಲೇಜಿನಲ್ಲಿ ಬಿ. ಎ. ಪರೀಕ್ಷೆಯನ್ನು ಪಾಸುಮಾಡಿ ಮದ್ರಾಸಿನ ಲಾ ಕಾಲೇಜಿಗೆ ಸೇರಿದ್ದೆ. ಆ ಕಾಲದಲ್ಲಿ ಲಾ ಕಾಲೇಜಿನ ಪಾಠಪ್ರವಚನಗಳು ಅಷ್ಟು ಹೊರೆಯಾಗಿರಲಿಲ್ಲ. ಪ್ರತಿಸಂಜೆ ೫ ರಿಂದ ೭ ರ ವರೆಗೆ ಎರಡು ಗಂಟೆಗಳು ಮಾತ್ರ ಮದ್ರಾಸಿನ ಪ್ರಸಿಡೆನ್ಸಿ ಕಾಲೇಜಿನ ಸುತ್ತುವಲಯದಲ್ಲಿ ತರಗತಿಗಳು ನಡೆಯುತ್ತಿದ್ದುವು. ಲಾ ಮತ್ತು ವೈದ್ಯಕೀಯ ವಿದ್ಯಾರ್ಥಿಗಳ ಗುಂಪು ಯಾವಾಗಲೂ ಚಟುವಟಿಕೆಯಿಂದ ಕೂಡಿದ ಮೇಧಾವಿಗಳ ತಂಡವಾಗಿರುತ್ತಿತ್ತು. ಸ್ವಾಮಿ ವಿವೇಕಾನಂದರು ಮದ್ರಾಸಿಗೆ ಬರುತ್ತಾರೆಂದು ಗೊತ್ತಾಗಿದ್ದ ದಿವಸ ನಾನು ಮತ್ತು ನನ್ನ ಸ್ನೇಹಿತರು ಎಗ್‌ಮೋರ್ ರೈಲ್ವೆ ನಿಲ್ದಾಣಕ್ಕೆ ಹೋದೆವು. ಎರಡು ಕುದುರೆಗಳನ್ನು ಕಟ್ಟಿದ್ದ ರಥ ಅಲ್ಲಿ ಅವರಿಗಾಗಿ ಕಾಯುತ್ತಿತ್ತು. ಸ್ವಾಮಿಜಿ ಮುಂದೆ ಒಂಭತ್ತು ದಿನಗಳು ತಂಗಿದ್ದ ಸಮುದ್ರ ತೀರದ ಕ್ಯಾಸ್ಲ್ ಕರ್ನನ್‌ಗೆ (Castle Kernan) ಅವರನ್ನು ಮೆರವಣಿಗೆಯಲ್ಲಿ ಕರೆದೊಯ್ಯಲು ನಿರ್ಧರಿಸಲಾಗಿತ್ತು. ರೈಲ್ವೆ ನಿಲ್ದಾಣದಲ್ಲಿ ಜನ ಸಮುದ್ರವೆ ಕಿಕ್ಕಿರಿದು ನೆರೆದಿತ್ತು. ಸ್ವಾಮಿಜಿಯನ್ನು ಹೊತ್ತು ತರುತ್ತಿದ್ದ ರೈಲು ದೃಷ್ಟಿಗೋಚರವಾದೊಡನೆಯೆ "ಜೈ" ಎಂಬ ಶಬ್ದ ದಿಗಂತವ್ಯಾಪಿಯಾಯಿತು. ಅವರು ರೈಲಿನಿಂದ ಇಳಿದು ನಿಧಾನವಾಗಿ ದಾರಿಮಾಡಿಕೊಂಡು ಬಂದು ರಥವನ್ನೇರಿದರು. ಮೆರವಣಿಗೆ ಸ್ವಲ್ಪದೂರ ದಾರಿಯಲ್ಲಿ ಸಾಗಿದ ಮೇಲೆ ನಾವು ಕೆಲವರು ಕುದುರೆಗಳನ್ನು ಕಳಚಿ ರಥವನ್ನು ನಾವೇ ಎಳೆಯುತ್ತೇವೆಂದು ಹಠ ಹಿಡಿದೆವು. ಕುದುರೆಗಳ ನೊಗ ಕಳಚಿ ನಾವೇ ರಥವನ್ನು ಎಳೆಯಲು ಪ್ರಾರಂಭಿಸಿದೆವು. ನಿಧಾನವಾಗಿ ಎಳೆಯುತ್ತ ತುಂಬದೂರ ಸುತ್ತಿದ ಮೇಲೆ ಗೊತ್ತಾದ ಸ್ಥಳ ತಲಪಿದೆವು. ನಮ್ಮ ಹೃದಯದ ಅಭೀಪ್ಸೆ ನೆರವೇರಿದ್ದಕ್ಕಾಗಿ ನಾವು ತುಂಬ ಸಂತುಷ್ಟರಾಗಿದ್ದೆವು.

ಸ್ವಾಮಿಜಿ ಮದ್ರಾಸಿನಲ್ಲಿದ್ದ ಒಂಬತ್ತು ದಿನಗಳೂ ನಾನು ಬಹುಕಾಲವನ್ನು ಅವರೊಂದಿಗೆ ಕಳೆಯುತ್ತಿದ್ದೆ. ನಿತ್ಯವೂ ಸಂದರ್ಶಕರು ಪ್ರವಾಹದೋಪಾದಿಯಲ್ಲಿ ಬರುತ್ತಿದ್ದರು. ಬಹುಜನರು ಮೌನವಾಗಿ ಅವರ ಬಳಿ ಕುಳಿತು ಅವರ ಮಾತು

ಕತೆಗಳನ್ನು ಆಲಿಸುತ್ತಿದ್ದರು. ಕೆಲವರು ಆ ಕಾಲದ ಜ್ವಲಂತ ಪ್ರಶ್ನೆಗಳನ್ನು ಕುರಿತು ಚರ್ಚಿಸುತ್ತಿದ್ದರು. ಹಲವರು ಆಪ್ತರು ಮಾತ್ರ—ಅವರಲ್ಲಿ ಸ್ವಾಮಿಜಿಯ ಮಿತ್ರರು ಪ್ರಶಂಸಕರೂ ಇರುತ್ತಿದ್ದರು—ದಕ್ಷಿಣ ಭಾರತದಲ್ಲಿ ಮುಂದೆ ಅವರು ಕೈಗೊಳ್ಳಬಹುದಾದ ವೇದಾಂತ ಯೋಜನೆಯ ಕೆಲಸ-ಕಾರ್ಯಗಳನ್ನು ಕುರಿತು ಚಿಂತನ ನಡೆಸುತ್ತಿದ್ದರು. ಸ್ವಾಮಿಜಿಯ ಜೊತೆಯಲ್ಲಿ ನಾನು ಯಾವಾಗಲೂ ಇರುತ್ತಿದ್ದೆ; ಅವರು ನನ್ನನ್ನು ಗುರುತಿಸಿದ್ದರು, ೧೮೯೨ ರಲ್ಲಿ ನಮ್ಮ ಮನೆಗೆ ಭೇಟಿ ಕೊಟ್ಟಿದ್ದನ್ನೂ ನೆನಪಿಟ್ಟುಕೊಂಡಿದ್ದರು. ಅವರ ಎದುರಿಗೆ ಕುಳಿತಿರುತ್ತಿದ್ದ ನನ್ನನ್ನು ಅವರು ನೋಡುತ್ತಿದ್ದಾಗಲೆಲ್ಲಾ, ದೈವಿಕ ಮುಗುಳ್ನಗೆಯಿಂದ ಪ್ರಕಾಶಿಸುತ್ತಿದ್ದ ಅವರ ಚಂಚಲ ತುಟಿಗಳನ್ನೂ ನವೀನ ತೇಜಸ್ಸಿನಿಂದ ಕಂಗೊಳಿಸುತ್ತಿದ್ದ ಅವರ ಕಣ್ಣುಗಳನ್ನೂ ನಾನು ಎಂದಿಗೂ ಮರೆಯಲಾರೆ. ಆಗ ನಮ್ಮ ತಂದೆಯವರು (ಪ್ರೊಫೆಸರ್ ಸುಂದರರಾಮ ಅಯ್ಯರ್) ಮದ್ರಾಸಿನಲ್ಲಿದ್ದರು. ಅವರು ಅನೇಕವೇಳೆ ಸ್ವಾಮಿಜಿಯನ್ನು ಸಂಧಿಸಿದ್ದರು.

೧೮೯೨ ರ ವಿವೇಕಾನಂದರಿಗೂ ೧೮೯೭ ರ ವಿವೇಕಾನಂದರಿಗೂ ಇದ್ದ ಪ್ರಧಾನ ವ್ಯತ್ಯಾಸವನ್ನು ನಾನು ಗುರುತಿಸಿದ್ದೇನೆ. ೧೮೯೨ ರಲ್ಲಿ ಅವರಿಗೆ ತಮ್ಮ ವಿಧಿ ನಿಯೋಜಿತ ಕೆಲಸದ ಅರಿವಿದ್ದರೂ, ಅದು ಎಲ್ಲಿ, ಹೇಗೆ, ಯಾವಾಗ ಗುರಿ ಮುಟ್ಟುತ್ತದೆ ಎಂಬುದು ಇನ್ನೂ ಅಸ್ಪಷ್ಟ ರೂಪದಲ್ಲಿ ಹುದುಗಿತ್ತು. ಆದರೆ ೧೮೯೭ ರಲ್ಲಿ ಅವರು ತಮ್ಮ ವಿಧಿಯುಕ್ತ ಕೆಲಸದ ಗುರಿಮುಟ್ಟಿದಂತೆ ಕಾಣುತ್ತಿದ್ದರು. ತಮ್ಮ ಮಿಶನ್ನಿನ ಜೀವನ ಮಹಾಧ್ಯೇಯದ ಬಗ್ಗೆ ಸ್ಪಷ್ಟವಾಗಿ ತಿಳಿದಿದ್ದರು; ಅದರ ನೆರವೇರಿಕೆಯಲ್ಲಿ ಸಂಪೂರ್ಣ ಆತ್ಮವಿಶ್ವಾಸ ಹೊಂದಿದ್ದರು. ಅವರು ತಮ್ಮ ಪೂರ್ವಯೋಜಿತ ದಾರಿಯಲ್ಲಿ, ಸ್ಥಿರವಾದ, ನಿರ್ದುಷ್ಟವಾದ ಹೆಜ್ಜೆಗಳನ್ನು ಹಾಕುತ್ತಾ, ಆಜ್ಞೆಗಳನ್ನು ವಿಧಿಸುತ್ತಾ, ಆಜ್ಞಾಧಾರಕರ ನಿಷ್ಠೆಯಲ್ಲಿ ಪೂರ್ಣ ಭರವಸೆಯನ್ನು ಹೊಂದಿ ಮುನ್ನಡೆದರು.

೧೮೯೭ರಲ್ಲಿ ನಾನು ಮತ್ತೂ ಒಂದು ಅನುಭವವನ್ನು ಪಡೆದೆ—ಅದು ವಿವೇಕಾನಂದರು ಹಾಡಿದ ಹಾಡುಗಳನ್ನು ಆಲಿಸಿದ್ದು. ೧೮೯೨ ರಲ್ಲೇ ನಾನು ಅವರ ಸುಮಧುರ ಧ್ವನಿಯ ಪರಿಚಯ ಪಡೆದಿದ್ದೆ. ಅವರ ಸಂಗೀತದ ಮಧುರತೆ ರಾಮಕೃಷ್ಣರನ್ನೂ ಸಮಾಧಿಗೆ ಕೊಂಡೊಯ್ಯುವಷ್ಟು ಶಕ್ತವಾಗಿತ್ತೆಂದು ಮುಂದೆ ನನಗೆ ತಿಳಿಯಿತು. ಕ್ಯಾಸಲ್ ಕರನನ್ (Castle Kernan)ನಲ್ಲಿ ಅವರು ತಂಗಿದ್ದ ಒಂಬತ್ತು ದಿವಸಗಳಲ್ಲಿ, ನಾವು ಜಯದೇವನಿಂದ ರಚಿತವಾದ 'ಗೀತ ಗೋವಿಂದ'ದ ಭಕ್ತಿಭಾವಪ್ರಧಾನವಾದ ಪ್ರಸಿದ್ಧ ಅಷ್ಟಪದಿಗಳನ್ನು ಅವರಿಂದ ಹಾಡಿಸಿ ಸವಿದೆವು. ಬಂಗಾಳದಲ್ಲಿ ಅವುಗಳನ್ನು ಹಾಡುವ ಧಾಟಿ ದಕ್ಷಿಣ ಭಾರತದಲ್ಲಿ ಹಾಡುವ ಧಾಟಿಯಿಂದ ಭಿನ್ನವಾಗಿದೆ. ವಿವೇಕಾನಂದರ ಮಧುರ ಧ್ವನಿ ನನ್ನ ಮನದ ಮೇಲೆ ಕೊನೆಯಿಲ್ಲದ ಪರಿಣಾಮವನ್ನು ಉಂಟುಮಾಡಿತು.

ಒಂದು ಸಂಜೆ ಕುತೂಹಲಕರವಾದ ಒಂದು ವಿಶೇಷ ಘಟನೆ ಸಂಭವಿಸಿತ್ತು. ಸಂದರ್ಶಕರ ಮಧ್ಯದಲ್ಲಿದ್ದ ಸಂಪ್ರದಾಯಸ್ಥ ಪಂಡಿತನೊಬ್ಬ ತಟಕ್ಕನೆ ಮೇಲೆದ್ದು ಅನಿರೀಕ್ಷಿತವಾಗಿ ನೇರವಾಗಿ ಸ್ವಾಮಿಜಿಯನ್ನು ಸಂಸ್ಕೃತದಲ್ಲಿ ಪ್ರಶ್ನಿಸಿದ: "ನೀವು ಬ್ರಾಹ್ಮಣರಲ್ಲವೆಂದು ನನಗೆ ತಿಳಿಯಿತು. ಶಾಸ್ತ್ರಗ್ರಂಥಗಳ ಪ್ರಕಾರ ಸಂನ್ಯಾಸ ಸ್ವೀಕರಿಸಲು ನಿಮಗೆ ಯಾವ ಅಧಿಕಾರವೂ ಇಲ್ಲ. ಅಂದಮೇಲೆ ಪವಿತ್ರವಾದ ಸಂನ್ಯಾಸಧರ್ಮದಲ್ಲಿ ಪ್ರವೇಶಿಸಲೂ ಕಾವಿಬಟ್ಟೆಯನ್ನು ಧರಿಸಲೂ ನಿಮಗೆ ಹೇಗೆ ಸಾಧ್ಯವಾಯಿತು?" ಅಂತಹ ವ್ಯಕ್ತಿಯೊಂದಿಗೆ ದೀರ್ಘಚರ್ಚೆಗೆ ತೊಡಗುವುದು ಅಷ್ಟೇನೂ ಜಾಣ್ಮೆಯಾಗಿರಲಿಲ್ಲ. ಸ್ವಾಮಿಜಿ ಪಂಡಿತನ ವಾದವನ್ನು ಅಷ್ಟಕ್ಕೆ ಮಿತಗೊಳಿಸಿ ನೇರವಾಗಿ ಹೇಳಿದರು: "ಪ್ರತಿಯೊಬ್ಬ ಬ್ರಾಹ್ಮಣನೂ ಸಂಧ್ಯಾವಂದನೆ ಮಾಡುವಾಗ ಪ್ರಾರ್ಥನೆ ಸಲ್ಲಿಸುವ ಚಿತ್ರಗುಪ್ತನ ವಂಶದಿಂದ ನಾನು ಬಂದಿದ್ದೇನೆ. ಆದ್ದರಿಂದ ಬ್ರಾಹ್ಮಣರು ಸಂನ್ಯಾಸಕ್ಕೆ ಯೋಗ್ಯರಾದಮೇಲೆ, ನಾನು ಮತ್ತೂ ಹೆಚ್ಚು ಅರ್ಹನಾಗುತ್ತೇನೆ." ಸ್ವಾಮಿಜಿ ಮತ್ತೆ ವಿಷಯವನ್ನು ಪ್ರಶ್ನಕನತ್ತ ತಿರುಗಿಸಿ ಹೇಳಿದರು: "ನೀನು ನಿನ್ನ ಸಂಸ್ಕೃತ ಪ್ರಶ್ನೆಯಲ್ಲಿ ಅಕ್ಷಮ್ಯ ತಪ್ಪು ಉಚ್ಚಾರಣೆ ಮಾಡಿದ್ದೀಯೆ. ಪಾಣಿನಿ ಅಂತಹ ತಪ್ಪು ಉಚ್ಚಾರಣೆಯನ್ನು ಖಂಡಿಸಿದ್ದಾನೆ. 'ನ ಮ್ಲೇಚ್ಛಿತಂ ವೈ, ನಾಪಭಾಷಿತಂ ವೈ.' ಆದ್ದರಿಂದ ನೀನು ಈ ಚರ್ಚೆಯಲ್ಲಿ ಭಾಗವಹಿಸಲು ಅನರ್ಹ." ಪಂಡಿತ ತಬ್ಬಿಬ್ಬಾದ; ಅದರಲ್ಲೂ, ಪ್ರೇಕ್ಷಕರು ಸ್ವಾಮಿಜಿಯನ್ನು ತುಂಬ ಗೌರವಿಸುತ್ತಾರೆ, ತನ್ನ ಈ ಅಸಂಬದ್ಧ ಪ್ರಶ್ನೆಯಿಂದ ಕೆರಳಿದ್ದಾರೆ ಎಂಬುದನ್ನು ಕಂಡುಕೊಂಡಾಗ ಎದ್ದು ಹೊರಟು ಹೋದ.

ಸ್ವಾಮಿ ವಿವೇಕಾನಂದರು ಮದ್ರಾಸಿನಲ್ಲಿ ಮಾಡಿದ 'ನನ್ನ ಸಮರ ನೀತಿ' (My plan of Campaign) ಎಂಬ ಮೊದಲನೆ ಸಾರ್ವತ್ರಿಕ ಉಪನ್ಯಾಸ ನನ್ನ ಮೇಲೆ ಗಾಢವಾದ ಚಿರಂತನ ಪ್ರಭಾವವನ್ನು ಉಂಟುಮಾಡಿತ್ತು. ಆ ಮಾತುಗಳನ್ನು ಆಲಿಸುತ್ತಿದ್ದಂತೆ ನನ್ನ ನರನರಗಳೂ ವಿಕಂಪಿಸುವಂತಾಯಿತು. ನನ್ನ ಕಣ್ಣುಗಳು ಹನಿಗೂಡಿ ತೇವವಾದುವು. ಇದನ್ನಾಲಿಸಿದ ಇನ್ನೂ ಕೆಲವರು ಇದೇ ರೀತಿ ಅನುತಪ್ತರಾಗಿದ್ದರು. ನಾವು ಕೆಲವರು ಅಲ್ಲಿ ಆ ಕ್ಷಣವೇ ಭಾರತೀಯರ ಅಜ್ಞಾನ ದುಃಖ ದಾರಿದ್ರ್ಯಗಳನ್ನು ಪ್ರತಿಯೊಬ್ಬರೂ ನಮ್ಮ ಕೈಯಲ್ಲಿ ಸಾಧ್ಯವಾದಷ್ಟು ಪರಿಹರಿಸುತ್ತೇವೆಂಬ ಪ್ರತಿಜ್ಞೆ ಕೈಕೊಂಡೆವು.

'ಭಾರತೀಯ ಬದುಕಿಗೆ ಅನ್ವಯಿಸಿದಂತೆ ವೇದಾಂತ' (Vedanta in its application to Indian life) ಎಂಬ ಉಪನ್ಯಾಸಕ್ಕೂ ನಾನು ಹಾಜರಾಗಿದ್ದೆ.

ಸ್ವಾಮಿಜಿಯ ಮತ್ತೊಂದು ಉಪನ್ಯಾಸವಾದ 'ಭಾರತದ ಸಂತರು' (Sages) ನನ್ನ ಮನದ ಮೇಲೆ ಆಳವಾದ ಪರಿಣಾಮವನ್ನುಂಟುಮಾಡಿತ್ತು.

ಕೊನೆಯದಾಗಿ ನಾನು ಗ್ಲೇಶಿರ ಮೇನಲ್ಲಿ ಹೊಂದಿದ ಅಸದೃಶ ಅನುಭವ

ವನ್ನು ಉಲ್ಲೇಖಿಸಲು ಆಶಿಸುತ್ತೇನೆ. ಆಗ ನಾನು ಉತ್ತರ ಇಂಡಿಯಾದ ಪವಿತ್ರ ಸ್ಥಳಗಳಿಗೆ ತೀರ್ಥಯಾತ್ರೆ ಕೈಗೊಂಡಿದ್ದೆ. ಕಲ್ಕತ್ತಾದ ಹತ್ತಿರವಿರುವ ಬೇಲೂರಿನ ಶ್ರೀ ರಾಮಕೃಷ್ಣ ಆಶ್ರಮದಲ್ಲಿ ಕೆಲವು ಗಂಟೆಗಳನ್ನು ಕಳೆಯುವ ಸುಯೋಗವು ನನಗೆ ಒದಗಿ ಬಂದದ್ದು ತುಂಬ ಸಂತೋಷದಾಯಕ ಸಂಗತಿಯಾಗಿದೆ. ನನ್ನನ್ನು ಬೇಲೂರು ಮಠದ ಸುತ್ತಲೂ ಕರೆದುಕೊಂಡು ಹೋದ ಸ್ವಾಮಿಗಳು, ಪ್ರಾಸಂಗಿಕ ವಾಗಿ, ಸ್ವಾಮಿ ವಿವೇಕಾನಂದರು ತಮ್ಮ ಕೊನೆಯ ದಿನಗಳನ್ನು ಕಳೆದ ಕೊಟಡಿಯ ಹತ್ತಿರವೂ ಕರೆದೊಯ್ದರು. ಸಾಮಾನ್ಯವಾಗಿ ಸಂದರ್ಶಕರಿಗೆ ಅದರೊಳಗೆ ಪ್ರವೇಶಿಸಲು ಅವಕಾಶ ಕೊಡುವುದಿಲ್ಲ. ಆದರೆ ನನ್ನನ್ನು ಅದರೊಳಗೆ ಕರೆದೊಯ್ದು ಸ್ವಾಮಿಗಳು ಹೇಳಿದರು: "ನಿಮ್ಮ ಜೀವನದ ಪ್ರಾರಂಭದ ದಿನಗಳಲ್ಲಿ ನೀವು ಸ್ವಾಮಿ ವಿವೇಕಾನಂದರ ಸಂಗಲಾಭವನ್ನು ಹೊಂದಿದ್ದೀರಿ. ಅಲ್ಲದೆ ನಿಮ್ಮ ತಂದೆ ಯವರಂತೆ ನೀವೂ ನಿಮ್ಮ ಜೀವನವೆಲ್ಲಾ ಶ್ರೀ ರಾಮಕೃಷ್ಣ ಮಠದ ಆರಾಧಕರೂ, ಅನುಯಾಯಿಗಳೂ ಆಗಿರುವಿರಿ. ನಿಮ್ಮ ವಿಚಾರವಲ್ಲಿ ಆ ನಿಯಮವನ್ನು ಸಂತೋಷದಿಂದ ಸಡಿಲಿಸುತ್ತೇವೆ!" ಉಸಿರೇ ಸ್ತಂಭಿತವಾದಂತೆ ಗಾಢಭಕ್ತಿ ಯಿಂದ ನಾನು ಆ ಪವಿತ್ರ ಮಂದಿರವನ್ನು ಪ್ರವೇಶಿಸಿದೆ. ಮುಂದುಗಡೆ ಗಂಗಾ ನದಿ ಕಾಣುತಿತ್ತು. ಪವಿತ್ರವಾದ ಪ್ರಶಾಂತವಾದ ಗಂಭೀರ ವಾತಾವರಣದಿಂದ ಆ ಕೋಣೆಯೆಲ್ಲ ಸ್ಪಂದಿತವಾಗುತ್ತಿತ್ತು. ಆ ಕೋಣೆಯಿಂದ ಎದುರಿನ ಶ್ರೀಮಂತ ದೃಶ್ಯದ ಸೊಬಗನ್ನು ನಾನು ಬಿಡುಗಣ್ಣಾಗಿ ಹೀರಿದೆ; ಆ ಸ್ಥಳದ ಪವಿತ್ರತೆಯನ್ನು ಗಾಢವಾಗಿ ಅನುಭವಿಸಿದೆ. ಸ್ವಾಮಿ ವಿವೇಕಾನಂದರು ಭಾರತಕ್ಕೆ, ಹಿಂದೂ ಧರ್ಮಕ್ಕೆ ಮತ್ತು ಜಗತ್ತಿನಾದ್ಯಂತ ಅಧ್ಯಾತ್ಮ ಪ್ರಸರಿಸುವುದಕ್ಕೆ ಸಲ್ಲಿಸಿದ ಅನುಪಮ ಸೇವೆಯನ್ನು ಆಲೋಚಿಸುತ್ತಾ, ನಾನು ಸ್ವಲ್ಪಕಾಲ ಅಲ್ಲಿ ಕುಳಿತು ಧ್ಯಾನಸ್ಥನಾದೆ. ಸ್ವಾಮಿ ವಿವೇಕಾನಂದರು ಒಮ್ಮೆ ಬಾಳುತ್ತಿದ್ದ ಆ ಕೋಣೆಯಲ್ಲಿ ಪ್ರಕಾಶಿಸುತ್ತಿದ್ದಂತೆ ಭಾಸವಾದ ಆತ್ಮಜ್ಞಾನದ ದಿವ್ಯಜ್ಯೋತಿ (ಗೀತೆಯಲ್ಲಿ ಶ್ರೀಕೃಷ್ಣ ಹೇಳಿರುವ 'ಜ್ಞಾನ-ದೀಪ') ನನ್ನ ಹೃದಯದಲ್ಲಿಯೂ ಬೆಳಗಿತು.

ಅನು: "ಇಂ"

ಎನ್. ಎಚ್. ನಾಗರಾಜ್

# ದ್ವಂದ್ವ

ಮುಟ್ಟು ನಿಲ್ಲುವ ಕಾಲ ಸಂದರೂ
ಮಗುವೊಂದು ಆಗಲಿಲ್ಲ
ಜಾರಿಹೋದ ಯೌವನವನು ಬಿಡಲಾರೆ
ಮಗು ಹಡೆದ ಮಾರನೆಯದಿನ
ಅನಿವಾರ್ಯದ ಲಿಪ್‌ಸ್ಟಿಕ್ ಮೂಲೆಗೊಗೆಯುವೆ
ವಯಸ್ಸಿಗನುಗುಣವಾಗಿ ವಿಜೃಂಭಿಸುವಾಸೆ
ಮೌಲ್ಯಗಳನೊಪ್ಪಲಾರದೆ ಸೋತು
ತಾಯಿಯಾಗುವಾಸೆಯಿಂದ
ನವಯುವತಿಯ ಕೃತಕ ಕೋಟೆಯಲಿ
ಮುದುಕಿಯಾಗುತಿರುವೆ

ಎಂ. ಚಿದಾನಂದ ಮೂರ್ತಿ

# ಯೂಪಸ್ತಂಭಗಳು

## ಅನುಬಂಧ: ಕನ್ನಡ 'ಜೂಬು' ಌ ಸಂಸ್ಕೃತ 'ಯೂಪ'[1]

ಯಾಗಗಳನ್ನು ಮಾಡುವಾಗ ಪಶುಗಳನ್ನು ಬಲಿಕೊಡುವ ಪದ್ಧತಿ ಪ್ರಾಚೀನ ಭಾರತದಲ್ಲಿದ್ದಿತೆಂಬ ಸಂಗತಿ ಸುಪ್ರಸಿದ್ಧವಾದುದಾಗಿದೆ.[2] ಸೋಮಯಾಗಗಳಲ್ಲಿ ಪಶುಬಲಿಯು ಒಂದು ಅಂಗವಾಗಿದ್ದರೆ, ಪ್ರಾಣಿಗಳನ್ನು ಬಲಿಕೊಡುವುದೇ ಪ್ರಮುಖವಾಗಿರುವ ಯಾಗವನ್ನು 'ನಿರೂಢ ಪಶುಬಂಧ'ವೆಂದು ಕರೆಯುತ್ತಾರೆ. ಬಲಿಕೊಡಲಿರುವ ಪಶುಗಳನ್ನು ಕಟ್ಟಿಹಾಕಲು ನೆಟ್ಟಿರುವ ಕಂಬವೇ ಯೂಪ. ಯೂಪದ ವರ್ಣನೆ ಬೇರೆ ಬೇರೆ ಶ್ರೌತಸೂತ್ರಗಳಲ್ಲಿ ದೊರಕುತ್ತದೆ. ಡಾ. ಪಿ. ವಿ. ಕಾಣೆಯವರು ಯೂಪದ ಬಗ್ಗೆ ಸಂಗ್ರಹಿಸಿ ಕೊಟ್ಟಿರುವ ಕೆಲವು ಸಂಗತಿಗಳ ಸಾರಾಂಶ ಹೀಗಿದೆ—"ಯೂಪವನ್ನು ಪಲಾಶ, ಖದಿರ, ಬಿಲ್ವ ಅಥವಾ ರೌಹಿತಕ ವೃಕ್ಷದಿಂದ ಮಾಡಬೇಕು. ಕೆಲವು ಸೋಮಯಾಗಗಳಲ್ಲಂತೂ ಸಾಧ್ಯವಾದರೆ ಖದಿರವೇ ಆಗಿರಬೇಕು. ಎತ್ತರ ಒಂದು ಅರತ್ನಿಯಿಂದ ಮೂವತ್ತಮೂರು ಅರತ್ನಿಯವರೆಗೆ (ಅರತ್ನಿ= ಮೊಳಕೈಯಿಂದ ಕಿರುಬೆರಳಿನ ತುದಿಯವರೆಗಿನ ಅಳತೆ); ಸಾಮಾನ್ಯವಾಗಿ ಎತ್ತರ ಮೂರರಿಂದ ನಾಲ್ಕು ಅರತ್ನಿ. ನೆಲದಲ್ಲಿ ಹೂಳುವ ಯೂಪದ ಭಾಗವೇ 'ಉಪರ'; ಇದನ್ನು ಕೆತ್ತಬಾರದು. ಉಳಿದ ಭಾಗವನ್ನು

---

1 ಌ ಈ ಚಿಹ್ನೆಯು ಸಂವಾದ ಪದ (Corresponding word) ಎಂಬುದನ್ನು ಸೂಚಿಸುತ್ತದೆ.

2 ಪ್ರಾಣಿಬಲಿಯು ಋಗ್ವೇದದಲ್ಲಿ ಆಪ್ರೀ ಸೂಕ್ತಗಳಲ್ಲಿ ಸೂಚಿತವಾಗಿದೆ. ಅಶ್ವವನ್ನು ಬಲಿಕೊಡುವ ಅಶ್ವಮೇಧ ಯಾಗದ ಪದ್ಧತಿ ಆ ಕಾಲದಲ್ಲಿತ್ತು. ಪುರುಷಸೂಕ್ತವು ಮನುಷ್ಯರನ್ನು ಬಲಿಯಾಗಿ ಕೊಡುತ್ತಿದ್ದ ಯಾಗವನ್ನು ವಿವರಿಸದಿದ್ದರೂ, ಇತಿಹಾಸಪೂರ್ವ ಕಾಲದಲ್ಲಿ ಪ್ರಚಲಿತವಾಗಿದ್ದ ಅಂತಹ ಪದ್ಧತಿಯ ನೆನಪನ್ನು ಉಳಿಸಿಕೊಂಡಿದೆ. ಐತರೇಯ ಬ್ರಾಹ್ಮಣದಲ್ಲಿ ಬರುವ ಶುನಶ್ಶೇಪನ ಕತೆ ಇತಿಹಾಸಪೂರ್ವದ ನರಬಲಿಯ ಪದ್ಧತಿಯನ್ನು ಸ್ಪಷ್ಟವಾಗಿ ಸೂಚಿಸುತ್ತದೆ.

—Gen. Editor–R. C. Majumdar : The Vedic Age. (Bharatiya Vidya Bhavan, Bombay, 1965), pp. 331–2

ಕೆಳಗಿಂದ ಮೇಲಕ್ಕೆ ಕ್ರಮೇಣ ಸಣ್ಣದಾಗಿರುವಂತೆ ಅಷ್ಟಕೋಣಾಕಾರವಾಗಿ[3] ಕೆತ್ತಬೇಕು. ಯೂಪವನ್ನು ಮಾಡಿದ ಮೇಲೆ ಕಂಬದ ತುದಿಯಲ್ಲಿ ಉಳಿಯುವ ಭಾಗದಲ್ಲಿ ಬಡಗಿಯು ಅಷ್ಟಕೋಣಾಕೃತಿಯ, ಸುಮಾರು ಅರ್ಧ ಅಡಿ ಆಳದ ಒರಲಿನಂತಹ ಟೊಳ್ಳು ಮಧ್ಯದಲ್ಲಿ ಇರುವ ಒಂದು ಶಿರೋವೇಷ್ಟನವನ್ನು ಮಾಡಬೇಕು. ಇದೇ 'ಚಷಾಲ'. ಚಷಾಲವು ಯೂಪದ ಮೇಲೆ ರುಮಾಲಿನಂತೆ ಸರಿಯಾಗಿ ಕುಳಿತುಕೊಂಡ ಮೇಲೆ, ಯೂಪದ ಮೇಲ್ಭಾಗದ ತುದಿಯು ಎರಡು ಮೂರು ಅಂಗುಲದಷ್ಟು ಮೇಲೆದ್ದು ಕಾಣುವಂತಿರಬೇಕು."[4]

ಯೂಪಸ್ತಂಭಗಳ ವರ್ಣನೆ ವಾಲ್ಮೀಕಿ ರಾಮಾಯಣ, ಮಹಾಭಾರತಗಳಲ್ಲಿ ಬಂದಿದೆ.

ರಾಮಾಯಣದಲ್ಲಿ ಹೀಗಿದೆ[5]—

> ಪ್ರಾಪ್ತೇ ಯೂಪೋಚ್ಛ್ರಯೇ ತಸ್ಮಿನ್ ಷಡ್ಬೈಲ್ವಾಃ ಖಾದಿರಾಸ್ತಥಾ ।
> ತಾವಂತೋ ಬಿಲ್ವಸಹಿತಾಃ ಪರ್ಣಿನಶ್ಚ ತಥಾಪರೇ ॥
>
> ಶ್ಲೇಷ್ಮಾತಕಮಯೋ ದಿಷ್ಟೋ ದೇವದಾರುಮಯಸ್ತಥಾ ।
> ದ್ವಾವೇವ ತತ್ರ ವಿಹಿತೌ ಬಾಹುವ್ಯಸ್ತಪರಿಗ್ರಹೌ ॥

---

[3] ಎಂಟು ಮೂಲೆ ಏಕೆ ಎಂಬುದಕ್ಕೆ ಶತಪಥ ಬ್ರಾಹ್ಮಣ ಹೀಗೆ ಹೇಳುತ್ತದೆ— "ಗಾಯತ್ರಿಯಲ್ಲಿ ಎಂಟು ಅಕ್ಷರಗಳು; ಗಾಯತ್ರಿ ಯಜ್ಞದ ಅಗ್ರಭಾಗ; ಯೂಪವೂ ಯಜ್ಞದ ಅಗ್ರಭಾಗ; ಆದ್ದರಿಂದ ಯೂಪಕ್ಕೆ ಎಂಟು ಮುಖಗಳು."

—(Śatapatha Bramhana. Tr. Julius Eggeling, Sacred Books of the East. part II, P. 167. Delhi, 1966)

[4] P. V. Kane: History of Dharmaśāstra (Poona 1941) II. ii, pp. 1110–12.

[5] ವಾಲ್ಮೀಕಿ ರಾಮಾಯಣ—ಬಾಲಕಾಂಡ. Ed. G. H. Bhatt (Baroda 1960) pp. 96–7. 'ಶ್ರೀ ಚಾಮರಾಜೋಕ್ತಿ ವಿಲಾಸ'ವೆಂಬ ಕನ್ನಡ ರಾಮಾಯಣದಲ್ಲಿ (ಬೆಂಗಳೂರು 1967. ಪು. 26) ಹೀಗಿದೆ:—"ಈ ಕ್ರಮದಲ್ಲಿ ಯಾಗವು ಪ್ರವರ್ತಿಸುತ್ತಿರಲು ಯಜ್ಞಕರ್ಮದಲ್ಲಿ ಕುಶಲರಾದ ಬ್ರಾಹ್ಮಣರ ಮಧ್ಯದಲ್ಲಿ ಅತ್ಯಂತ ಲಕ್ಷಣ ಲಕ್ಷಿತಗಳಾದ ಇಪ್ಪತ್ತೊಂದು ಯೂಪಸ್ತಂಭಗಳು ಶೋಭಾಯಮಾನವಾಗಿದ್ದುವು. ಆ ಯೂಪಸ್ತಂಭಗಳಲ್ಲಿ ಬೆಲ್ಲವತ್ತದ ಯೂಪಗಳ ಸ್ತಂಭಗಳು ಆರು. ಕಗ್ಗಲಿಯ ಯೂಪಸ್ತಂಭಗಳು ಆರು. ಮುತ್ತುಗದ ಯೂಪಸ್ತಂಭಗಳು ಆರು. ಚಳೆಯ ಯೂಪಸ್ತಂಭ ಒಂದು. ದೇವದಾರು ಯೂಪಸ್ತಂಭಗಳು ಎರಡು—ಈ ಇಪ್ಪತ್ತೊಂದು ಯೂಪಸ್ತಂಭಗಳೂ ಇಪ್ಪತ್ತೊಂದು ಅರತ್ನಿಗಳ ಉದ್ದವುಳ್ಳಂಥವು. ಎಲ್ಲಾ ಯೂಪಗಳೂ ಎಂಟೆಂಟು ಅರಗುಗಳಾಗಿ (ಅರಗು = ಅರುಗು—ಮೂಲೆ. —ಲೇಖಕ) ನಯವಾಗಿ ಶಿಲ್ಪಿಗಳಿಂದ ಕೆತ್ತಲ್ಪಟ್ಟಂಥವಾಗಿದ್ದುವು." ಜೊತೆಗೆ (Ralph T. H. Griffith ಅವರ ರಾಮಾಯಣದ ಇಂಗ್ಲಿಷ್ ಅನುವಾದವನ್ನು ನೋಡಿ (Vol. I, 1870. pp. 76–7)

ಕಾರಿತಾ: ಸರ್ವ ಏವೈತೇ ಶಾಸ್ತ್ರಜ್ಞೈರ್ಯಜ್ಞಕೋವಿದೈಃ ।
ಶೋಭಾರ್ಥಂ ತಸ್ಯ ಯಜ್ಞಸ್ಯ ಕಾಂಚನಾಲಂಕೃತಾ ಭವನ್ ॥

ವಿನ್ಯಸ್ತಾ ವಿಧಿವತ್ ಸರ್ವೇ ಶಿಲ್ಪಿಭಿಃ ಸುಕೃತಾ ದೃಢಾಃ ।
ಅಷ್ಟಾಶ್ರಯಃ ಸರ್ವ ಏವ ಶ್ಲಕ್ಷ್ಣರೂಪ ಸಮನ್ವಿತಾಃ ॥

ಮಹಾಭಾರತದಲ್ಲಿ ಹೀಗಿದೆ[6]—

ಭೀಷ್ಮೇಣ ಧರ್ಮತೋ ರಾಜನ್ ಸರ್ವತಃ ಪರಿರಕ್ಷಿತೇ ।
ಬಭೂವ ರಮಣೀಯಶ್ಚ ಚೈತ್ಯಯೂಪ ಶತಾಂಕಿತಃ ॥

ಕಾಳಿದಾಸನಲ್ಲಿ ಯೂಪದ ಉಲ್ಲೇಖವಿದೆ. ಶ್ರೋತ್ರಿಯರಿಗೆ ಬಿಟ್ಟುಕೊಟ್ಟ ಊರುಗಳು ಯೂಪಚಿಹ್ನಾಂಕಿತವಾಗಿದ್ದುವೆಂದು ವರ್ಣಿಸಿದ್ದಾನೆ.[7] ಅನೇಕ ಪುರಾಣಗಳಲ್ಲಿಯೂ ಇವುಗಳ ಹೆಸರಿದೆ.[8]

ಅನೇಕ ಕನ್ನಡ ಕಾವ್ಯ, ಶಾಸನಗಳಲ್ಲಿಯೂ ಇವುಗಳನ್ನು ಕಾಣಬಹುದಾಗಿದೆ. ಪ್ರಾಚೀನ ಕರ್ಣಾಟಕದಲ್ಲಿ ನಡೆಯುತ್ತಿದ್ದ ಅನೇಕ ಯಾಗಗಳಲ್ಲಿ ಪ್ರಾಣಿಬಲಿ ನಡೆಯುತ್ತಿದ್ದಿತೆಂಬುದಕ್ಕೆ ಆಧಾರಗಳಿವೆ. ಸುಮಾರು ಕ್ರಿ.ಶ. 450ರ ತಾಳಗುಂದ ಶಾಸನದಲ್ಲಿ ಮೊದಲು ಬ್ರಾಹ್ಮಣರಾಗಿದ್ದ ಕದಂಬವಂಶವನ್ನು ವರ್ಣಿಸುತ್ತ "....ಅಕೃಶ ಚಾತುರ್ಮಾಸ್ಯ ಹೋಮೇಷ್ಟಿ ಪಶುಪಾರ್ವಣ ಶ್ರಾದ್ಧ ಪೌಷ್ಟಿಕಂ" ಎಂದಿದೆ.[9] ಇಲ್ಲಿಯ 'ಪಶು' ಎಂಬುದು ಪಶುಬಲಿಯನ್ನೇ ಹೇಳುವುದೆಂಬುದರಲ್ಲಿ ಅನುಮಾನವಿಲ್ಲ. ದುರ್ಗಸಿಂಹ, ಬಸವಣ್ಣ ಮುಂತಾದವರ ಉಕ್ತಿಗಳೂ, ಅನೇಕ ಶಾಸನಗಳೂ, ಪಶುಬಲಿಯ ಸಂಪ್ರದಾಯದ ಅಸ್ತಿತ್ವವನ್ನು ಸಮರ್ಥಿಸುತ್ತವೆ.[10] ಜೊತೆಗೆ ಅನೇಕ ಕಡೆಗಳಲ್ಲಿ ಯೂಪಸ್ತಂಭದ ಪ್ರಸ್ತಾಪವೂ ಇದೆ. ಉದಾಹರಣೆಗೆ, ಪಂಪಭಾರತದಲ್ಲಿ ಚಿನ್ನದ ಯೂಪಸ್ತಂಭದ ಉಲ್ಲೇಖವಿದೆ.[11]

---

6 ಮಹಾಭಾರತ (ಪೂನ. 1929). 1. 109, 13

7 B. S. Upadhyaya : India in Kalidasa (1968) p. 324

8 ಉದಾಹರಣೆಗೆ, ಸ್ಕಾಂದಪುರಾಣದಲ್ಲಿ ಚೋಳದೊರೆ ಯಾಗಮಾಡಿದ ತಾಮ್ರಪರ್ಣೀ ನದಿಯ ದಡದುದ್ದಕ್ಕೂ ಚಿನ್ನದ ಯೂಪಸ್ತಂಭಗಳಿದ್ದುವೆಂಬ ವರ್ಣನೆ ಬಂದಿದೆ.

—(A. B. L. Awasthi : Studies in Skānda purāṇa, Lucknow. 1965. p. 206)

9 EC. VII SK. 176, c. 450 A.D.

10 ವಿವರಗಳಿಗೆ, ನೋಡಿ—ಎಂ. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಮೈಸೂರು, 1966), ಪು. 435-6.

11 ಪಂಪಭಾರತ, 6. 35.

ಬಳಸಿ ಮುಗಿಲ್ಗಳ್ ಕನಕಾ। ಚಳಮಂ ಬಳಸುವವೊಲಿಕ್ಕಿದಾಹುತಿಗಳ ಗೊಂ।
ದಳದಿನೊಡನೊಗೆದ ಪೊಗೆಗಳ್। ಬಳಸಿದುವೆಡೆಬಿಡದೆ ಕನಕಯೂಪಮನಾಗಳ್ ॥

ಅದೇ ಕೃತಿಯಲ್ಲಿ ಇಡೀ ಯಾಗದ ಚಿತ್ರವು ಒಂದು ವರ್ಣನೆಯಲ್ಲಿ ಮೂಡಿ ಬಂದಿದೆ.[12] ವಿವೇಕ ಚಿಂತಾಮಣಿಯಲ್ಲಿ ಯಜ್ಞಪ್ರಕ್ರಿಯೆಯನ್ನು ವರ್ಣಿಸುವಾಗ ಯೂಪಸ್ತಂಭದ ಹೆಸರು ಬಂದಿದೆ.[13] ಧರ್ಮರಾಜನ ಅಶ್ವಮೇಧಯಾಗವನ್ನು ಲಕ್ಷ್ಮೀಶ ವರ್ಣಿಸುವಾಗ ಶ್ರೌತಗ್ರಂಥಗಳಲ್ಲಿ ಉಕ್ತವಾದ ರೀತಿಯಲ್ಲಿಯೇ ಯೂಪದ ವರ್ಣನೆಯನ್ನು ತಂದಿದ್ದಾನೆ.[14]

ಇಷ್ಟಕಾಚಯನದಿಂ ರಾಜಿಸಿತು ಬಳಸಿ ಪರಿ
ಶಿಷ್ಟದಿಂದೊಪ್ಪಿದುವು ಪಲವು ವೇದಿಗಳೆಸೆದು
ವಷ್ಟಕುಂಡದ ರಚನೆ ಪಾಲಾಶಮೇಳು ಖಾದಿರಮಾರು ಬಿಲ್ವಮೈದು ।
ಧೃಷ್ಟಮಾದುನ್ನತ ಶ್ಲೇಷ್ಮಾತಕಂ ಮೂರ
ಧಿಷ್ಠಿತದ ಯೂಪಮಿಂತೇಕವಿಂಶತಿಗಳು
ತ್ಕೃಷ್ಟ ತ್ರಿವೃತ್ಸೂತ್ರ ಭೂಷಿತ ಚಷಾಲದಿಂ ಮೆರೆದುವಾ ಮಂಟಪದೊಳು ॥

ಅಲ್ಲೇ ಇನ್ನೂ ಎರಡು ಮೂರು ಕಡೆ ಯೂಪದ ಉಲ್ಲೇಖಗಳಿವೆ ("ಸುಮಂತ್ರಿತ ಯೂಪದೊಳ್ ಕಟ್ಟುತಧ್ವರ ಹಯವ"— 33. 15; "ಉಳಿದ ಯೂಪಂಗಳೊಳ್ ಕಟ್ಟಿರ್ದ ಪಶುಗಳಂ. . . ."—33. 32). ಅಶ್ವಮೇಧಾದಿ ಯಾಗಗಳನ್ನು ಮಾಡಿದ ರಾಜರ ಉಲ್ಲೇಖ ಅನೇಕ ಕಡೆ ಬಂದಿದೆ. ಬಾದಾಮಿ ಚಾಲುಕ್ಯರು ಅಶ್ವಮೇಧಯಾಗಗಳನ್ನು ಮಾಡಿದ ಸಂಗತಿ ಸುಪ್ರಸಿದ್ಧವಾದುದಾಗಿದೆ. ರಣವಿಕ್ರಮನೆಂಬ ದೊರೆಯನ್ನು "ಅಗ್ನಿಷ್ಟೋಮಾಗ್ನಿಚಯನ ವಾಜಪೇಯ ಬಹುಸುವರ್ಣ ಪುಂಡರೀಕಾಶ್ವಮೇಧಾವಭೃತಸ್ನಾನಪವಿತ್ರೀಕೃತ ಶರೀರಸ್ಯ" ಎಂದು ಒಂದು ಶಾಸನದಲ್ಲಿ ಕರೆದಿದೆ.[15] ಇಟ್ಟಗೆ ಎಂಬ ಅಗ್ರಹಾರದ

---

12 ಅದೇ, 4. 59.
ಮನಮಾರಾಧಿತ ಹೋಮಭೂಮಿ ಪಶುಗಳ್ ಕಾಮಾತುರರ್ ಬಂದ ಮಾ
ವನಿತುಂ ಸ್ಥಾಪಿತ ಯೂಪಕೋಟಿ ಬಳವತ್ಕಾಮಾಗ್ನಿ ಹೋಮಾಗ್ನಿ ಚಂ
ದನ ಕರ್ಪೂರ ಮೃಣಾಳನಾಳಮ ಪೊದಟಿದ್ಧಮಂಗಳಿಂತಾಗೆ ತಾ
ನಿನಿತುಂ ಕಾಮನ ಜೇಳ್ವೆಯೆಂದು ಸುಗಿದಳ್ ತನ್ನಂಗಿ ಬೆಳ್ದಿಂಗಳೊಳ್ ॥

13 ವಿವೇಕ ಚೂಡಾಮಣಿ (ಸಂ: ಜಿ. ಎಂ. ಉಮಾಪತಿಶಾಸ್ತ್ರಿ, ಹುಬ್ಬಳ್ಳಿ, 1969). ಪು. 121.
". . . . ವೇದಿಕೆ ಯೂಪಸ್ತಂಭಾದಿ ರಚನೆಗಳಂ ಮಾಡುತ್ತ. . . ."

14 ಜೈಮಿನಿ ಭಾರತ (ಸಂ. ಪಿ. ಆರ್. ಕರಿಬಸವಶಾಸ್ತ್ರೀ), 33. 37.

15 E.I. XXVIII p. 62, 578 A.D. ರಾಜನಿಗೆ ಜಯವನ್ನು ತರುವ ಯಜ್ಞಗಳೆಂದರೆ ಅಗ್ನಿಷ್ಟೋಮ, ವಾಜಪೇಯ, ರಾಜಸೂಯ ಮತ್ತು ಅಶ್ವಮೇಧ. ಎಲ್ಲೋರದ ಕೈಲಾಸ ದೇವಾಲಯದ ಒಂದು ಭಾಗದಲ್ಲಿ ಕೊರೆದಿರುವ ಯಜ್ಞಶಾಲೆಯು (8ನೆಯ ಶತಮಾನ) ಬಹುಶಃ ಅಗ್ನಿಷ್ಟೋಮ ಯಾಗವನ್ನು ನಡೆಸುವ ಶಾಲೆಯ ವರ್ಣನೆಗೆ ಅನುಗುಣವಾಗಿದೆ. ಅಗ್ನಿಷ್ಟೋಮ ಶಾಲೆಯ ಎಂಟು ಅಂಗಗಳು ಇವು—(1) ಯೂಪ, (2) ಉತ್ತರವೇದಿ, (3) ದಶಪದ,

ಬ್ರಾಹ್ಮಣರನ್ನು "ಅಶ್ವಮೇಧಾದ್ಯನೇಕ ಯಜ್ಞಾಗಮವಿಧಿ ಪಾರಾವಾರ ಪಾರಾಯಣರ್" ಎಂದು ಒಂದು ಶಾಸನದಲ್ಲಿ ವರ್ಣಿಸಿದೆ.[16] ಕದಂಬರ ಮಯೂರ ಶರ್ಮನು ತಾನು ಮಾಡಿದ ಹದಿನೆಂಟು ಅಶ್ವಮೇಧಯಾಗಗಳ ಸಮಯದಲ್ಲಿ ಬ್ರಾಹ್ಮಣರಿಗೆ ೧೪೪ ಗ್ರಾಮಗಳನ್ನು ದತ್ತಿಯಾಗಿ ಕೊಟ್ಟನೆಂದು ಈಚಿನ ತಾಳ ಗುಂದದ ಶಾಸನಗಳಲ್ಲಿ ಉಕ್ತವಾಗಿದೆ.[17] ಇವೆಲ್ಲವೂ ಆ ಕಾಲದಲ್ಲಿ ನಡೆಯುತ್ತಿದ್ದ ಅಶ್ವಮೇಧಯಾಗಗಳು, ಅಲ್ಲಿ ನಡೆಯುತ್ತಿದ್ದ ಪ್ರಾಣಿಬಲಿಗಳು–ಇವುಗಳಿಗೆ ನಿದರ್ಶನ ಗಳಾಗಿವೆ.

ಶ್ರೌತ ಸೂತ್ರಗಳಲ್ಲೆಲ್ಲಾ ಯೂಪಸ್ತಂಭವನ್ನು ನಿರ್ದಿಷ್ಟವಾದ ಮರ ಅಥವಾ ಮರಗಳಿಂದ ಮಾಡಬೇಕೆಂಬ ವಿಧಿಯನ್ನು ಹಾಕಿವೆಯೆಂಬ ಮಾತೇನೊ ನಿಜ. ಇದಕ್ಕೆ ಬಹುಶಃ ಕಾರಣ ಭಾರತದಲ್ಲಿ ವಾಸ್ತುನಿರ್ಮಾಣಗಳಿಗಾಗಿ ಮೊದಲು ಬಳಕೆಯಾಗುತ್ತಿದ್ದುದು ಮರವೇ. ಮನೆ, ದೇವಾಲಯ, ಕಂಬ, ವಿಗ್ರಹ ಮುಂತಾದು ವುಗಳಿಗಾಗಿ ಕಲ್ಲನ್ನು ಬಳಸಲಾರಂಭಿಸಿದ್ದು ಬಹುಶಃ ಈಚೆಗೆ.[18] ಹಿಂದೆ ನೋಡಿದಂತೆ ಸ್ಕಾಂದಪುರಾಣ, ಪಂಪಭಾರತಗಳಲ್ಲಿ ಬಂದಿರುವ ಚಿನ್ನದ ಯೂಪ ಸ್ತಂಭಗಳ ಮಾತನ್ನು ಗಮನಿಸಿದರೆ—ಅಲ್ಲಿ ಏನೇ ಉತ್ಪ್ರೇಕ್ಷೆ ಇರಲಿ—ಮರವಲ್ಲದೆ ಬೇರೆ ಸಾಮಗ್ರಿಗಳಿಂದ ಯೂಪಗಳನ್ನು ಮಾಡುವುದರ ಬಗ್ಗೆ ಅವರ ಕಾಲದಲ್ಲಿ ಆಕ್ಷೇಪಣೆಯೇನೂ ಇರಲಿಲ್ಲವೆಂಬುದು ಧ್ವನಿತವಾಗುತ್ತದೆ. ಪದೇ ಪದೇ ಮರದಿಂದ ಯೂಪಗಳನ್ನು ಮಾಡುವುದರ ಬದಲು, ಶಾಶ್ವತವಾಗಿ ಅದನ್ನು ಕಲ್ಲಿನಲ್ಲಿ ಮಾಡಿ ನಿಲ್ಲಿಸುವ ಪದ್ಧತಿ ಕ್ರಮೇಣ ಬೆಳೆದುಕೊಂಡು ಬಂದಂತೆ ಕಾಣುತ್ತದೆ. ಕಲ್ಲಿನ ಯೂಪಸ್ತಂಭವನ್ನು ನಿಲ್ಲಿಸಿ ಅದರ ಮೇಲೆ ಶಾಸನವನ್ನು ಕೊರೆಯಿಸಿರುವುದೂ ಉಂಟು.[19] ಕರ್ಣಾಟಕದಲ್ಲಿ ಚಿಕ್ಕಮಗಳೂರು ಜಿಲ್ಲೆಯ ಹಿರೇಮಗಳೂರಿನ ಯೂಪಸ್ತಂಭವು ಬಹು ಪ್ರಸಿದ್ಧವಾದುದಾಗಿದೆ. ಹಿರೇಮಗಳೂರು ಚಿಕ್ಕ

---

(4) ಹವಿರ್ಧಾನ, (5) ಸದಸ್, (6) ಅಗ್ನಿಹೋತ್ರಶಾಲಾ, (7) ಪ್ರಧಾನವೇದಿ, (8) ಪತ್ನೀ ಶಾಲಾ. ಇವುಗಳಲ್ಲಿ ಯೂಪ, ಉತ್ತರವೇದಿ ಮತ್ತು ಅಗ್ನಿಹೋತ್ರಶಾಲೆಗಳನ್ನು ಬಿಟ್ಟರೆ ಉಳಿದ ಐದು ಭಾಗಗಳನ್ನು ಕೈಲಾಸದ ಯಜ್ಞಶಾಲೆಯಲ್ಲಿ ಗುರುತಿಸಬಹುದು.

—C. R. Sengupta: "The Yajñaśālā of Kailasa at Ellora and Identification of some of its sculpture"—(Indian Historical Quarterly, xxxvi. pt. i, March, 1960).

16 EI. xiii. p. 41, 1112 A.D.

17 EC. vii. Sk. 178, 1092 A.D.

18 ಮುಂದೆ 27ನೇ ಅಡಿಟಿಪ್ಪಣಿ ನೋಡಿ.

19 D. C. Sircar: Indian Epigraphical Glossary (1966). p. 387.

ಮುಗಳೂರಿಗೆ ಒಂದು ಮೈಲಿ ದಕ್ಷಿಣ–ಪೂರ್ವಕ್ಕಿರುವ, ಶ್ರೀವೈಷ್ಣವ ಬ್ರಾಹ್ಮಣರೇ ಹೆಚ್ಚಾಗಿರುವ ಒಂದು ಗ್ರಾಮ. ಅಲ್ಲಿಯ ಸಿದ್ಧಪುಷ್ಕರಿಣಿ ಎಂಬ ಕೊಳದ ಹತ್ತಿರ ನವನಾಥರು ತಪಸ್ಸು ಮಾಡಿದರೆಂದೂ, ಮುಂದೆ ಜನಮೇಜಯನು ಆ ಊರಿನಲ್ಲಿ ಒಂದು ಸರ್ಪಯಾಗವನ್ನು ಮಾಡಿದನೆಂದೂ ಸ್ಥಲಪುರಾಣವಿದೆ.[20] ಆ ಸರ್ಪಯಾಗದ ಗುರುತಾಗಿ ಒಂದು ಯೂಪವನ್ನು ತೋರಿಸುತ್ತಾರೆ. ಜನಮೇಜಯ ನಿಲ್ಲಿಸಿದನೆಂದು ಹೇಳಲಾದ ಆ ಸ್ತಂಬವು ಒಂಭತ್ತು ಅಡಿಯ ಕಲ್ಲಿನ ಕಂಬವಾಗಿದ್ದು, ತುದಿಯಲ್ಲಿ ತ್ರಿಶೂಲ ಅಥವಾ ಭಲ್ಲೆಯದಂತೆ ಅಗ್ರಭಾಗವು ರೂಪಿತವಾಗಿದೆ. ಸಮೀಪದಲ್ಲೇ ಶಿವ ದೇವಸ್ಥಾನವಿದೆ.[21]

ಆ ಯೂಪಸ್ತಂಭದ ವರ್ಣನೆಯು ಗಮನಾರ್ಹವಾದುದು[22]—"The Yupa stambha has a high cubical base, then a short octogonal moulding and then again another cubical moulding overlaid by a square abacus bearing a long lotus bud. On the east and west sides of the bud, there are three incised lines suggestive of a trident." ಕಂಬವು ಅಷ್ಟಕೋಣಾಕೃತಿಯದು. ಮತ್ತು ಮೇಲ್ಭಾಗವು ಹಿಂದೆ ನಾವು ನೋಡಿರುವ ಯೂಪಸ್ತಂಭಗಳ ತುದಿಯ 'ಚಷಾಲ'ದಂತಹ ರಚನೆಯೆಂಬುದನ್ನು ಗುರುತಿಸಬಹುದು. ಇದು ಯೂಪಸ್ತಂಭವೇ ಆಗಿದೆಯೆಂಬುದನ್ನು ಸ್ಥಳಪುರಾಣವೂ ಅದರ ವಿನ್ಯಾಸವೂ ಸ್ಪಷ್ಟಪಡಿಸುವಂತೆ ಅದರ ಮೇಲೆ ಸಿಕ್ಕಿರುವ ಎರಡು ಶಾಸನಗಳೂ[23] ಅದನ್ನೇ ದೃಢಪಡಿಸುತ್ತವೆ. ಒಂದು, ಯೂಪಸ್ತಂಭದ ಪಶ್ಚಿಮ ಮುಖದ ಮೇಲಿನ ಶಾಸನ—

. . . . . . . ಗುಳವಮು . . . . . . . .

. . . . . . . . . . . . . . . . . ರ

. . . . . . . . ಹ. . . . . ಅಶ್ವಯೂಪ

ಶ. . . . . . . . . . . . . . . . ಮು

ಇದರ ಅಕ್ಷರಗಳು ಬಹುಶಃ ಕ್ರಿ.ಶ. ಎರಡನೆಯ ಶತಕಕ್ಕೆ ಸೇರಿದವು. ಇನ್ನೊಂದು ಅದೇ ಸ್ತಂಭದ ಪೂರ್ವಮುಖದ ಮೇಲೆ ಲಿಖಿತವಾಗಿದೆ.

---

20 Mysore Gazetteer (Ed. C. Hayavadana Rao, Bangalore, 1930) Vol. V, p. 1147

21 ಅದೇ. ಹಾವು ಕಚ್ಚಿದವರು ಬಂದು ಆ ಸ್ತಂಭವನ್ನು ಪ್ರದಕ್ಷಿಣೆ ಹಾಕಿ, ಸಿದ್ಧ ಪುಷ್ಕರಿಣಿಯಲ್ಲಿ ಸ್ನಾನ ಮಾಡಿದರೆ, ವಿಷದಿಂದ ಮುಕ್ತರಾಗುತ್ತಾರೆ ಎಂಬ ನಂಬಿಕೆಯೂ ಇದೆ. (ಅದೇ. ಪು. 1148)

22 MAR (1942), p. 47

23 MAR (1945), pp. 110–2

ಶ್ರೀ [ಅ]ಣ್ಣಯ್ಯ
ಡಿಸಿದ ಬಲಿ
ಲಕಿಗ

ಮೊದಲನೆಯುದು ಇದು 'ಅಶ್ವಯೂಪ'ವೆಂದು ಹೇಳಿದರೆ, ಎರಡನೆಯುದು ಬಲಿಗೆ ಸಂಬಂಧಿಸಿದ ಸಂಗತಿಯನ್ನು ಹೇಳುವಂತೆ ಕಾಣುತ್ತದೆ.

ಈಗ ಈ ಹಿನ್ನೆಲೆಯಲ್ಲಿ ತಾಳಗುಂದ ಸ್ತಂಭ ಶಾಸನವನ್ನು[24] ನೋಡಬಹುದು. ಕರ್ಣಾಟಕದಲ್ಲಿ ದೊರಕಿರುವ ಅತ್ಯಂತ ಪ್ರಖ್ಯಾತ ಶಾಸನಗಳಲ್ಲಿ ಇದೂ ಒಂದು.[25] ಶಿವಮೊಗ್ಗ ಜಿಲ್ಲೆಯ ತಾಳಗುಂದ ಕದಂಬರ ಮೂಲಪುರುಷನಾದ ಮಯೂರಶರ್ಮನ ಹುಟ್ಟೂರು. ಅವನ ವಂಶದವರು ವಾಸಿಸುತ್ತಿದ್ದ ಮನೆಯ ಬಳಿ ಕದಂಬವೃಕ್ಷವಿದ್ದುದರಿಂದ ಅವರಿಗೆ ಕದಂಬರೆಂಬ ಹೆಸರಾಯ್ತು. ಮೂಲತಃ ಬ್ರಾಹ್ಮಣರಾಗಿದ್ದ ಕದಂಬರು ಅನೇಕ ಯಜ್ಞಗಳನ್ನು ಮಾಡಿ ಅವಭೃಥ ಸ್ನಾನದಿಂದ ಒದ್ದೆಯಾದ ಕೂದಲುಳ್ಳವರಾಗಿದ್ದರು. ವೇದಗಳ ಅಧ್ಯಯನವನ್ನು ಮುಗಿಸಿ 'ಅವಗಾಹ'ವೆಂಬ ಸ್ನಾನವನ್ನು ಮಾಡಿದ್ದರು. ವಿಧಿವತ್ತಾಗಿ 'ಅಗ್ನಿ'ಯನ್ನು ಕಾಪಾಡುತ್ತಿದ್ದರು; ಸೋಮಪಾನವನ್ನು ಮಾಡಿದ್ದರು. ಚಾತುರ್ಮಾಸ್ಯ ಹೋಮಗಳು, ಪಶುಬಲಿ, ಶ್ರಾದ್ಧ ಇವುಗಳಿಂದ ಅವರು ಪುಷ್ಟರಾಗಿದ್ದರು. ಹೀಗೆ ಶುದ್ಧ ವೈದಿಕರಾಗಿದ್ದ ಈ ವಂಶದವರಲ್ಲಿ ಹುಟ್ಟಿದ ಮಯೂರಶರ್ಮ ಉನ್ನತ ವಿದ್ಯಾಭ್ಯಾಸಕ್ಕಾಗಿ ಕಂಚಿಗೆ ಹೋಗಿ, ಅಲ್ಲಿಯ ಘಟಿಕಾಸ್ಥಾನಗಳಲ್ಲಿ ಅಧ್ಯಯನ ಮಾಡಿದ. ಮುಂದೆ, ಕಂಚಿಯ ಪಲ್ಲವರು ತನಗೆ ಅವಮಾನಮಾಡಿದ್ದನ್ನು ಸಹಿಸದೆ, ತೀವ್ರರೋಷದಿಂದ, ಕೈಯಲ್ಲಿ ಕತ್ತಿಹಿಡಿದು, ಸೈನ್ಯ ಕಟ್ಟಿ ಪಲ್ಲವರನ್ನು ಸೋಲಿಸಿ, ಅವರಿಂದಲೇ ಅಭಿಷಿಕ್ತನಾದ. ಬ್ರಾಹ್ಮಣರಾಗಿದ್ದ ಕದಂಬರು ಕ್ಷತ್ರಿಯರಾದದ್ದು ಹೀಗೆ. ಮಯೂರಶರ್ಮನ ಬಳಿಕ ಬಂದ ದೊರೆಗಳೆಲ್ಲ 'ವರ್ಮ' ಎಂದು ಕೊನೆಯಾಗುವ ಹೆಸರಿಟ್ಟುಕೊಂಡರು.

ತಾಳಗುಂದದಲ್ಲಿ ಬಹು ಹಿಂದಿನಿಂದ ಪ್ರಸಿದ್ಧವಾಗಿದ್ದ ಈಶ್ವರದೇವಾಲಯದ ಉಪಯೋಗಕ್ಕಾಗಿ ಕಾಕುಸ್ಥವರ್ಮ ಕಟ್ಟಿಸಿದ ಕೆರೆಯ ವಿಷಯವನ್ನು ಹೇಳುವುದು ಈ ಶಾಸನದ ಉದ್ದೇಶ. ಶಾಸನವನ್ನು ಬರೆಯಿಸಿದವನು ಕಾಕುಸ್ಥವರ್ಮನ ಮಗ ಶಾಂತಿವರ್ಮ.

---

24 EC. VII SK. 176, c. 450 A.D.

25 "We next come to the Tālagunda·pillar (SK. 176) than which no more important or interesting inscription has been discovered in Mysore, whether we regard its content, its style, or its execution; and it has attracted much attention in Europe" (Ibid. Intro.) p. 7

ಕದಂಬವಂಶದ ಉತ್ಪತ್ತಿಯನ್ನು ಹೇಳುವ ಈ ತಾಳಗುಂದ ಶಾಸನದ ಕಂಬದ ರಚನೆಯು ಗಮನಾರ್ಹವಾದುದು.—"The pillar, which is of very hard dark grey granite, is standing in front of the ruined Praṇamēśvara temple. Its pedestal is 5 feet 4 inches high and 1 foot 4 inches square at the top, a little more at the base. *The shaft is octagonal, 6 feet 4 inches high, and each face being 7 inches wide, but tapering slightly towards the top, The finial is a pear-shaped ornament, 1 foot 11 inches high*, with a considerable piece split off lengthwise on one side, taking off a little bit from the end of line 10, but no letters are lost. The engraving is in artistically cut box-headed characters, and there are two lines on each face except the last, which has only half a line. *The invocation at the beginning is on the pedastal*, and runs up connecting with the first line. The inscription reads from the bottom upwards."

ಈ ವರ್ಣನೆಯಲ್ಲಿ ಗಮನಿಸಬೇಕಾದ ಕೆಲವು ಸಂಗತಿಗಳಿವೆ. ಸ್ತಂಭ ಅಷ್ಟಕೋಣಾಕಾರವಾಗಿ, ಮೇಲಕ್ಕೆ ಹೋಗುತ್ತ ಸಣ್ಣಕ್ಕಾಗಿದೆ. ಯೂಪವೂ ಹೀಗೆಯೇ ಇರಬೇಕೆಂಬುದನ್ನಾಗಲೇ ನೋಡಿದ್ದೇವೆ. ತುದಿಯಲ್ಲಿರುವ 'finial' ಅಥವಾ ಶಿಖರಭಾಗವು ಯೂಪಸ್ತಂಭದ 'ಚಷಾಲ'ದ ಪ್ರತಿನಿಧಿಯಂತಿದೆ. ಶಾಸನದ ಪಾಠವನ್ನು ವೇದಿಕೆಯ ಮೇಲಿನಿಂದ ಆರಂಭಿಸಿ ಕೆತ್ತಲಾಗಿದೆಯೆಂಬುದನ್ನು ಗಮನಿಸಿ. ಎಂದರೆ, ಸ್ತಂಭವನ್ನು ಶಾಸನವನ್ನು ಕೆತ್ತುವುದಕ್ಕಾಗಿಯೇ ನಿರ್ಮಿಸಿದ್ದರೆ, ಇಡೀ ಶಾಸನವನ್ನು ಸ್ತಂಭದ ಮೇಲೆಯೇ ಕೆತ್ತುತ್ತಿದ್ದರು. ವೇದಿಕೆಯ ಮೇಲೆ ಶಾಸನದ ಆರಂಭದ ಸ್ವಲ್ಪಭಾಗವನ್ನು ಕೆತ್ತಿರುವುದನ್ನು ನೋಡಿದರೆ, ಶಾಸನವನ್ನು ಬರೆಯಿಸುವ ಮೊದಲೇ ವೇದಿಕೆಯ ಮೇಲೆ ಸ್ತಂಭವಿದ್ದಿತೆಂದೂ, ಶಾಸನವನ್ನು ಹಾಕಿಸುವ ಯೋಚನೆ ಬಂದಾಗ, ಬೇರೆ ಕಂಬವನ್ನು ಅಥವಾ ಶಿಲಾಫಲಕವನ್ನು ನಿರ್ಮಿಸುವುದರ ಬದಲು ಆಗಲೇ ದೇವಸ್ಥಾನದ ಮುಂದೆ ನಿಂತಿದ್ದ ಆ ಕಂಬವನ್ನು ಶಾಸನವನ್ನು ಕೆತ್ತಲು ಬಳಸಿಕೊಂಡರೆಂದೂ ಊಹಿಸಬೇಕಾಗುತ್ತದೆ. ಈ ಊಹೆ ನಿಜವಾದರೆ—ಆ ಕಂಬವು

(1) ಮೂಲತಃ ಯೂಪಸ್ತಂಭವಾಗಿರಬೇಕು (ತಾಳಗುಂದವು ಒಂದು ಸುಪ್ರಸಿದ್ಧ ಅಗ್ರಹಾರವಾಗಿದ್ದಿತೆಂಬುದನ್ನು[26] ಇಲ್ಲಿ ನೆನೆಯಬಹುದು)

---

[26] ಇಲ್ಲಿ 32,000 ಬ್ರಾಹ್ಮಣರಿದ್ದರೆಂದೂ ಅವರನ್ನು ಮಯೂರಶರ್ಮನು ಉತ್ತರದ ಅಹಿಚ್ಛತ್ರ ನಗರದಿಂದ ತಂದು ತಾಳಗುಂದದಲ್ಲಿ ನಿಲ್ಲಿಸಿದನೆಂದೂ ಈಚಿನ ಅನೇಕ ಶಾಸನಗಳು ಹೇಳುತ್ತವೆ.

(2) ಅಥವಾ ಮಯೂರಶರ್ಮನು ತನ್ನ ವಿಜಯದ ಸ್ಮಾರಕವಾಗಿ ನಿಲ್ಲಿಸಿದ್ದ ವಿಜಯಸ್ತಂಭವಿರಬಹುದು. ಯೂಪವು ಪ್ರಾಣಿಗಳನ್ನು ಬಲಿಕೊಡುವ ಸ್ತಂಭವಾದದ್ದರಿಂದ, ವಿಜಯಸ್ತಂಭಗಳನ್ನು ಯೂಪಸ್ತಂಭಗಳ ಮಾದರಿಯಲ್ಲಿ ನಿರ್ಮಿಸಿರುವ ಸಾಧ್ಯತೆ ಇದೆ.

ಈ ಎರಡೂ ಊಹೆಗಳೇ. ಎರಡನೆಯ ಊಹೆಗಂತೂ ಯಾವ ಆಧಾರವೂ ಇಲ್ಲ; ಮೊದಲನೆಯ ಊಹೆಗೂ ಆಧಾರವಿಲ್ಲ, ನಿಜ. ಆದರೂ ಇದು ಎರಡನೆಯ ದರಷ್ಟು ದುರ್ಬಲ ಊಹೆಯಾಗಲಾರದು; ಊಹೆಗೆ ಬೆಂಬಲವಾಗಿ ಕೆಲವು ಆಧಾರ ಗಳನ್ನು ಆಗಲೇ ಸೂಚಿಸಿದ್ದೇನೆ.

ಶ್ರೌತಸೂತ್ರಗಳಲ್ಲಿ ಯೂಪನಿರ್ಮಾಣಕ್ಕೆ ಕೆಲವು ಜಾತಿಯ ಮರಗಳನ್ನು ಮಾತ್ರ ಹೇಳಿದೆಯೆಂಬುದನ್ನಾಗಲೇ ಹಿಂದೆ ನೋಡಿದ್ದೇವೆ. ಅದಕ್ಕೆ ಕಾರಣ ಪ್ರಾಚೀನ ಭಾರತದಲ್ಲಿ ವಾಸ್ತು ಕಾರಣಗಳಿಗಾಗಿ ಮರವನ್ನು ಬಳಸುತ್ತಿದ್ದುದು. ಶಿಲೆಯ ಬಳಕೆ ಈಚಿನದು.[27]

ಶಿಲೆಯ ಯೂಪಸ್ತಂಭಗಳು ಇನ್ನೂ ಹಲವಾರು ದೊರೆತಿವೆ.[28] ಕ್ರಿ.ಶ.

---

[27] "It may create a feeling of disappointment in some minds when they are told that there is no stone architecture in India older than two and a half centuries before the christian era. . . .it can be proved that they ( = Indians) possessed palaces and halls of assembly, perhaps even temples, of great magnificence and splendour, long anterior to Asoka's accession; but like the buildings of the Burmese of the present day, they were all in wood. Stone, in those days, seems to have been employed only for the foundations of buidlings, or in engineering works, such as city walls and gates, or bridges or embarkments; all else, as will appear in the sequel, were framed in carpentary"—James Furgusson: History of Indian and Eastern Architecture, Vol I (Munshiram Manoharlal, Delhi, 1967) p. 52.

[28] 'Stone Yūpa ascribed to Nṛga' ಎಂಬ ಒಂದು ಪುಟ್ಟ ಸ್ವಾರಸ್ಯ ಲೇಖನವನ್ನು B.CH.Chhabra ಪ್ರಕಟಿಸಿದ್ದಾರೆ. (Annals of the Bhandarkar Oriental Research Institute, 1968. Golden Jubilee Vol. pp. 95–7).

'ಶಾರ್ಙ್ಗಧರ ಪದ್ಧತಿ' ಎಂಬ ಹೆಸರಿನ ಸಂಸ್ಕೃತ ಸಂಕಲನವೊಂದರಲ್ಲಿ ಎರಡು ಪದ್ಯಗಳು ಉದ್ಧೃತವಾಗಿವೆ. ಇವೆರಡನ್ನೂ ನೃಗ ಮಹಾರಾಜನ ಪ್ರಶಸ್ತಿಯಿರುವ ಕಲ್ಲಿನ ಯೂಪ ಸ್ತಂಭದಿಂದ ತೆಗೆದುಕೊಂಡಿರುವುದಾಗಿ ಶಾರ್ಙ್ಗಧರ ಹೇಳಿಕೊಂಡಿದ್ದಾನೆ. ("ಏತೌ ನೃಗನೃಪತಿ

5ನೇ ಶತಮಾನದ ಶಾಸನಗಳಿರುವ ಯೂಪಸ್ತಂಭಗಳು ಬೋರ್ನಿಯೋ–ಸುಮಾತ್ರದಲ್ಲಿ ದೊರಕಿವೆ. ಅವುಗಳ ಮೇಲಿರುವ ಶಾಸನಗಳಲ್ಲಿ ಮೂಲವರ್ಮನ್ ಎಂಬಾತ ಮಾಡಿದ ಯಾಗಗಳು, 'ಬಹು ಸುವರ್ಣ' ಎಂಬ ಹೆಸರಿನ ಯಾಗದಲ್ಲಿ ಬಹುವಾಗಿ ಚಿನ್ನವನ್ನು ವ್ಯಯಿಸಿದ್ದು, ಇಪ್ಪತ್ತು ಸಾವಿರ ಹಸುಗಳನ್ನು ದಾನವಾಗಿ ಕೊಟ್ಟದ್ದು ಇತ್ಯಾದಿ ಸಂಗತಿಗಳ ವರ್ಣನೆಯಿದೆ.[29] (ದೂರ ಪ್ರಾಚ್ಯದ ದೇಶಗಳ ಮೇಲೆ ಆಗಿದ್ದ ಹಿಂದೂ ಧರ್ಮದ ಪ್ರಭಾವ ಅಪರಿಮಿತ). ಮಥುರಾನಗರದ ಸಮೀಪದ ಈಸಾಪುರದಲ್ಲಿ ಎರಡು ಯೂಪಸ್ತಂಭಗಳು ದೊರೆತಿವೆ.[30] ಯಮುನಾ ನದಿಯ ಪಾತ್ರದಲ್ಲಿ ಬಿದ್ದಿದ್ದ ಅವುಗಳನ್ನು ಪಂಡಿತ ರಾಧಾಕೃಷ್ಣ ಎಂಬುವರು ಗುರುತಿಸಿ, ಅವುಗಳನ್ನು ತಂದು ಮಥುರಾದ ವಸ್ತುಸಂಗ್ರಹಾಲಯದಲ್ಲಿ ಇರಿಸಿದರು. ಇವು ಯೂಪಸ್ತಂಭಗಳೆಂಬುದು ಅವುಗಳಲ್ಲಿ ಒಂದರ ಮೇಲಿರುವ ಶಾಸನದಿಂದ ಗೊತ್ತಾಗುತ್ತದೆ. ಇನ್ನೊಂದರ ಮೇಲೆ ಶಾಸನವಿಲ್ಲ. ಶಾಸನವಿರುವ ಕಂಬ 19′ 19″ ಎತ್ತರವಿದ್ದು, ಕೆಳಗಿನಿಂದ 8′ 7″ದವರೆಗೆ ಚೌಕವಾಗಿದ್ದು ಮೇಲೆ ಅಷ್ಟಕೋಣಾಕಾರವಾಗಿದೆ. ಚೌಕಪ್ರದೇಶದ ಮೇಲೆ, 5″ ಎತ್ತರದಲ್ಲಿ ಕಂಬವನ್ನು ಎರಡು ಬಾರಿ ಸುತ್ತುವರಿದ ಹಗ್ಗವನ್ನೂ, ಹಗ್ಗದ ತುದಿಯಲ್ಲಿ ಕುಣಿಕೆಯನ್ನೂ ಕೊರೆಯಲಾಗಿದೆ. (ಇದು ಪಶುವನ್ನು ಕಟ್ಟುವ ಹಗ್ಗವೆಂಬುದು ಸ್ಪಷ್ಟ). ಹಗ್ಗದ ಕೆಳಗೆ, ಚೌಕ ಪ್ರದೇಶದಲ್ಲಿ, ಶಾಸನವನ್ನು ಕೆತ್ತಲಾಗಿದೆ. ಕಂಬವನ್ನು ಹೂಳಿದ್ದಾಗ, ಬಹುಶಃ ಶಾಸನವು ಬುಡದಲ್ಲಿ ಕಾಣಿಸುವಂತಿತ್ತು; ಅದರ ಮೇಲೆ ಅಲ್ಲೇ ಕೊರೆದ ಹಗ್ಗವೂ ಕಾಣಿಸುತ್ತಿತ್ತು. ಪಶುಗಳನ್ನು ಕಟ್ಟಿಹಾಕಲು ಬಳಸುತ್ತಿದ್ದ

---

ಪಾಷಾಣ ಯಜ್ಞ ಯೂಪ ಪ್ರಶಸ್ತೀ॥"). ನೃಗ ಮಹಾಭಾರತದಲ್ಲಿ ಬರುವ ಒಬ್ಬ ಪೌರಾಣಿಕ ವ್ಯಕ್ತಿ. ಇವನ ಯೂಪಸ್ತಂಭ ಸಿಕ್ಕಿದರೆ ಅದೊಂದು ಅದ್ಭುತ ಸಂಗತಿಯೇ ಆಗುತ್ತಿತ್ತು. ವಾಸ್ತವವಾಗಿ ಆ ಪದ್ಯಗಳನ್ನು ತೆಗೆದುಕೊಂಡಿರುವುದು ಯೂಪಸ್ತಂಭದಿಂದ ಅಲ್ಲ, ಡೆಲ್ಲಿಯಲ್ಲಿರುವ ಅಶೋಕನ ಶಾಸನವಿರುವ ಸ್ತಂಭದಿಂದ. ಆದ್ದರಿಂದ ಶಾರ್ಙ್ಗಧರ ಕೊಟ್ಟಿರುವ ಆಕರದ ಹೆಸರು ಸ್ಪಷ್ಟವಾಗಿಯೇ ತಪ್ಪು. ಅವನು ಅಶೋಕನ ಸ್ತಂಭವನ್ನು ನೃಗನ ಯೂಪಸ್ತಂಭವೆಂದು ತಪ್ಪಾಗಿ ತಿಳಿದಿರಬೇಕು. ಅಥವಾ ಜನರು ತಪ್ಪು ಭಾವನೆಯನ್ನು ಉಂಟುಮಾಡಿರಬೇಕು.

ಅಶೋಕನ ಸ್ತಂಭದ ಮೇಲೆ ಇರುವ ಪ್ರಶಸ್ತಿಯು ಚೌಹಾನ್ ದೊರೆ ವೀಸಲ ಅಥವಾ ವಿಗ್ರಹರಾಜನದು (ಕ್ರಿ. ಶ. 12ನೇ ಶತಮಾನ). ಈಚಿನ ಶಾರ್ಙ್ಗಧರ ಪದ್ಧತಿಯ ಎರಡು ಪದ್ಯಗಳು ಈ ಪ್ರಶಸ್ತಿ ಶಾಸನದಲ್ಲಿವೆ. (ಈ ಪ್ರಶಸ್ತಿ ಶಾಸನ ಮತ್ತು ಇನ್ನಿತರ ಎರಡು ಶಾಸನಗಳನ್ನು ಕೀಲ್‌ಹಾರ್ನ್ ಅವರು I A. Vol. 19ರಲ್ಲಿ ಪ್ರಕಟಿಸಿದ್ದಾರೆ.

29 C. Shivaramamurthi: Indian Epigraphy and South Indian Scripts (Madras 1966). p. 8, 51

30 J. PH. Vogel: The Sacrificial posts at Isapur (Archaeological Survey of India Report, 1910–11) pp. 40–8

ಹಗ್ಗದ ಜಾಗವೂ ಅದೇ ಆಗಿರುತ್ತಿತ್ತು. ಸ್ತಂಭದ ತುದಿಯು ಬಲಗಡೆಗೆ ತಿರುಗಿದೆ. ಬಲತುದಿಯು ಮೂಲೆಯನ್ನು ಚಪ್ಪಟೆಯಾಗಿ ಕೆತ್ತಿದೆ. ಈ ಭಾಗ ಯೂಪಸ್ತಂಭದ ಮೇಲ್ಭಾಗದಲ್ಲಿನ 'ಚಷಾಲ'ವೆಂಬುದನ್ನು ಗುರುತಿಸಲು ಮಧ್ಯೆ ಚೌಕಾಕಾರದ ಪಟ್ಟಿಯಿದೆ. ಬಾಗಿದ ತುದಿಯಿಂದ ಒಂದು ಹಾರ ನೇಲುತ್ತಿದೆ. (ಇದು ಬಹುಶಃ ಪ್ರಾಣಿಗಳಿಗೆ ಹಾಕುತ್ತಿದ್ದ ಹಾರದ ಪ್ರತೀಕವಿರಬಹುದು) ಶಾಸನವಿರದ ಇನ್ನೊಂದು ಸ್ತಂಭವೂ ಒಂದೆರಡು ಸಣ್ಣ ವ್ಯತ್ಯಾಸಗಳನ್ನು ಬಿಟ್ಟರೆ ಬಹುತೇಕ ಹೀಗೆಯೇ ಇದೆ.

ಇಲ್ಲಿಯ ಸಂಸ್ಕೃತ ಶಾಸನವು ಸುಮಾರು ಕ್ರಿ.ಶ. ಒಂದನೆಯ ಶತಮಾನಕ್ಕೆ ಸೇರಿದ್ದು. ರುದ್ರಿಲನ ಮಗನಾದ ದ್ರೋಣಿಲ ಎಂಬ ಭರದ್ವಾಜ ಗೋತ್ರದ ಬ್ರಾಹ್ಮಣನು ಹನ್ನೆರಡು ರಾತ್ರಿಗಳು ಮಾಡಿದ ಯಾಗದ ಸಂದರ್ಭದಲ್ಲಿ ಈ ಯೂಪವನ್ನು ನಿಲ್ಲಿಸಲಾಯಿತೆಂದು ಶಾಸನದಲ್ಲಿ ಹೇಳಿದೆ—(". . . .ರುದ್ರಿಲ ಪುತ್ರೇಣ ದ್ರೋಣಿಲೇನ ಬ್ರಾಹ್ಮಣೇನ ಭಾರದ್ವಾಜ ಸಗೋತ್ರೇಣ ಮಾಣಛ್ಛಂದೋಗೇನ ಇಷ್ಟ್ವಾ ಸತ್ರೇನ ದ್ವಾದಶರಾತ್ರೇಣ ಯೂಪಃ ಪ್ರತಿಷ್ಠಾಪಿತಃ"). ಶಾಸನವು "ಪ್ರಿಯಂತಾಮ್ ಅಗ್ನಯಃ" (ಅಗ್ನಿಗಳು—ಗಾರ್ಹಪತ್ಯ, ದಕ್ಷಿಣಾಗ್ನಿ ಮತ್ತು ಆಹವನೀಯ—ಶುಭವೀಯಲಿ) ಎಂದು ಕೊನೆಯಾಗಿದೆ.

ಕಲ್ಲಿನಲ್ಲಿ ಕೊರೆದ ಇನ್ನೂ ಅನೇಕ ಯೂಪಸ್ತಂಭಗಳು ದೊರಕಿವೆ.[31]

# ಅನುಬಂಧ

## "ಜೂಬು" ಪದದ ನಿಷ್ಪತ್ತಿ

"ಜೂಬು" ಪದ ಅನೇಕ ಕೃತಿಗಳಲ್ಲಿ, ಶಾಸನಗಳಲ್ಲಿ ಗೋಚರವಾಗುತ್ತದೆ. ಆದರೆ ಆ ಪದದ ಅರ್ಥ ತೀರಾ ಅನಿಶ್ಚಿತವಾಗಿದೆ. ಬಸವಣ್ಣನವರ ವಚನದಲ್ಲಿ ಆ ಪದ ಹೀಗೆ ಕಾಣಿಸಿಕೊಂಡಿದೆ.

ಹರಿವ ಹಾವಿಂಗಂಜೆ ಉರಿಯ ನಾಲಗೆಗಂಜೆ
ಸುರಗಿಯ ಮೊನೆಗಂಜೆ,
ಒಂದಕ್ಕಂಜುವೆ, ಒಂದಕ್ಕಳುಕುವೆ :
ಪರಸ್ತ್ರೀ ಪರಧನವೆಂಬೀ ಜೂಬಿಗಂಜುವೆ.
ಮುನ್ನಂಜದ ರಾವಣನೇವಿಧಿಯಾದ
ಅಂಜುವೆನಯ್ಯಾ ಕೂಡಲಸಂಗಮದೇವಾ ||

---

31 ವಡಗಾಂವ — ಮಾಧವಪುರದಲ್ಲಿ ದೊರೆತಿರುವ ಒಂದು ಶಿಲಾಸ್ತಂಭದ ಮೇಲೆ 'ಕಸಪಗೋತ'ಕ್ಕೆ ಸೇರಿದ ವೈದಿಕನೊಬ್ಬ ವಾಜಪೇಯ ಯಾಗಗಳನ್ನು ಮಾಡಿದ ಸಂಗತಿಯಿದೆ. ಪ್ರಾಕೃತ ಭಾಷೆ, ಬ್ರಾಹ್ಮೀಲಿಪಿಯಲ್ಲಿರುವ ಈ ಶಾಸನ ಸುಮಾರು ಕ್ರಿ.ಪೂ. 1ನೇ ಶತಮಾನಕ್ಕೆ ಸೇರಿದ್ದು. ಇದನ್ನು ಶ್ರೀ ಆರ್. ಎಸ್. ಪಂಚಮುಖಿಯವರು 'ಯೂಪಸ್ತಂಭ'ವೆಂದು ಭಾವಿಸುತ್ತಾರೆ. (ಮುಂಬಯಿ ರಾಜ್ಯದಲ್ಲಿ ಕನ್ನಡ ಸಂಶೋಧನೆ. ಧಾರವಾಡ, 1953 ಪು. 5), ಆದರೆ ಈ ಸ್ತಂಭವು ಷಟ್ಕೋಣಾಕಾರವಾಗಿರುವುದನ್ನು ಗಮನಿಸಿದರೆ, ಅದು ಯೂಪವೆಂಬುದರಲ್ಲಿ ಪ್ರಬಲ ಸಂದೇಹವುಂಟಾಗುತ್ತದೆ.

ಸಂದರ್ಭದ ಮೇಲೆ ಆ ಪದಕ್ಕೆ 'ಭಯಂಕರವಾದ ಒಂದು ವಸ್ತು' ಎಂದು ಅರ್ಥ ಮಾಡಿದ್ದಾರೆ ಶ್ರೀ ಶಿ. ಶಿ. ಬಸವನಾಳರು.[32] ಅದೇ ಸಂದರ್ಭದಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದ ಪರಿಷ್ಕರಣದಲ್ಲಿ, "ಭಯಂಕರ, ಕೋರೀಹುಳ (?)" ಎಂಬರ್ಥ ಮಾಡಿದ್ದಾರೆ.[33] ಎರಡನೆಯ ಅರ್ಥಕ್ಕಂತೂ ಆಧಾರವೇ ಇಲ್ಲ. ಚನ್ನಬಸವಣ್ಣನವರ ವಚನದಲ್ಲಿ ಈ ಪದ ಕಾಣಿಸಿಕೊಂಡಿದೆ.[34]

. . . . . . . . . . . . . . . . . . . . . . . . . . . . . .
ಅಸುರರ ಶಿರೋಮಾಲೆಯ ಕೊರಳಲ್ಲಿ ಉರದಲ್ಲಿ
ಹಾರವಾಗಿ ಧರಿಸಿ, ಜಗಕ್ಕೆ ಜೂಬಾಗಿಪ್ಪಲ್ಲಿ
ಶಂಕೆಯಿಲ್ಲದೆ ನಿಶ್ಶಂಕನೆಂಬ ಗಣೇಶ್ವರನಾಗಿರ್ದನು
. . . . . . . . . . . . . . . . . . . . . . . . . . . . . .

ಇದಕ್ಕೆ ಕರ್ನಾಟಕ ವಿಶ್ವವಿದ್ಯಾಲಯದ ಆವೃತ್ತಿಯಲ್ಲಿ ಶ್ರೀ ಶಿ. ಶಿ. ಬಸವನಾಳರನ್ನು ಅನುಸರಿಸಿ "ಭಯೋತ್ಪಾದಕ ವಸ್ತು ಹಾಗೂ ಸ್ಥಿತಿ" ಎಂದಿದೆ. ಎಸ್. ಎಸ್. ಭೂಸನೂರಮಠರು ಇದೇ ಸಂದರ್ಭದ ಈ ಪದಕ್ಕೆ ಜೊಂಪು, ಮರವೆ, ಮಾಂದ್ಯ, ಜುಮ್ಮು ಎಂದು ನಾಲ್ಕು ಅರ್ಥ ಹೇಳಿದ್ದಾರೆ.[35] ನಾಲ್ಕೂ ಊಹೆಗಳೇ.

ಇವರು ಯಾರೂ ರಾ. ಬ. ಆರ್. ನರಸಿಂಹಾಚಾರ್ಯರು ಆ ಪದಕ್ಕೆ ಕೊಟ್ಟಿರುವ ಅರ್ಥವನ್ನು ಗಮನಿಸಿಲ್ಲವೆಂಬುದು ಸ್ಪಷ್ಟವಾಗಿದೆ. 1923ರಷ್ಟು ಹಿಂದೆಯೇ ಅವರು ಸಂಪಾದಿಸಿದ ಶಾಸನಪದ್ಯಮಂಜರಿಯಲ್ಲಿ ಶಾಸನವೊಂದರಲ್ಲಿ ಬರುವ ಈ ಪದಕ್ಕೆ 'ಯೂಪ' ಎಂಬರ್ಥವನ್ನು ಮಾತ್ರ ಹೇಳಿದ್ದಾರೆ.[36] ಆದರೆ ಯಾವ ವಿವರಣೆಯನ್ನೂ ಕೊಡಲು ಹೋಗಿಲ್ಲ. ಈ ಅರ್ಥವು ಬಹುಶಃ ಸರಿಯಾದುದೆಂದೂ, ಭಾಷಾಶಾಸ್ತ್ರದ ದೃಷ್ಟಿಯಿಂದಲೂ 'ಜೂಬು' ಎಂಬುದು 'ಯೂಪ'ದ ತದ್ಭವವೆಂದೂ ಸಮರ್ಥಿಸುವುದು ಈ ಅನುಬಂಧದ ಉದ್ದೇಶ.

ವಚನಗಳಲ್ಲಿ ಬಂದಿರುವ ಸಂದರ್ಭ ನೋಡಿದರೆ 'ಜೂಬು' ಎಂಬುದು

---

32 ಬಸವಣ್ಣನವರ ಷಟ್ಸ್ಥಲದ ವಚನಗಳು (ಸಂ. ಶಿ. ಶಿ. ಬಸವನಾಳ. ಧಾರವಾಡ. 1951). ಪು. 117. ಈಚೆಗೆ ಪ್ರಕಟವಾದ ಕಿಟ್ಟೆಲ್ ಕೋಶದ ಪರಿಷ್ಕೃತ ಪುನರ್ಮುದ್ರಣದಲ್ಲಿ (Vol. II, Madras, 1969. p. 695) 'ಜೂಬು'ಗೆ an evil spirit, a demon ಎಂಬರ್ಥ ಕೊಟ್ಟಿದೆ.

33 ಬಸವಣ್ಣನವರ ವಚನಗಳು (ಧಾರವಾಡ. 1968). ಪು. 631

34 ಚನ್ನಬಸವಣ್ಣನವರ ವಚನಗಳು (ಸಂ. ಆರ್. ಸಿ. ಹೀರೇಮಠ. ಧಾರವಾಡ 1965) ಪು. 9

35 ಸಿದ್ಧವೀರಣ್ಣೊಡೆಯನ ಶೂನ್ಯಸಂಪಾದನೆ (1958)—ಅರ್ಥಕೋಶ ನೋಡಿ.

36 ಶಾಸನ ಪದ್ಯಮಂಜರಿ (ಬೆಂಗಳೂರು. 1923) ಪು. 291

ಅಂಜಬೇಕಾದ ಭಯಂಕರ ವಸ್ತುವೆಂಬುದು ಸ್ಪಷ್ಟವಾಗಿದೆ. ಇದೇ ಅರ್ಥ ಛಾಯೆ ಜೈನಪುರಾಣಗಳಲ್ಲಿ, ಶಾಸನಗಳಲ್ಲಿ ಬಂದಿರುವ 'ಜೂಬು' ಪದಕ್ಕೂ ಹೊಂದಿಕೆಯಾಗುತ್ತದೆ. ವರ್ಧಮಾನ ಪುರಾಣದಲ್ಲಿ[37] ಆ ಪದ ಬಂದಿರುವ ಉಲ್ಲೇಖ ಹೀಗಿದೆ—"ಆತ್ಮ ಪರಿವೃಢಪ್ರತಾಪಮನತಿಶಯಿಸಿ ಜೂಬು ಮಾಣ್ಬ ಚರನಂ ಜ್ವಳನಜಟಿ ಕಟಾಕ್ಷಿಸಿ. . . ." ಅಶ್ವಗ್ರೀವನ ದೂತ ತನ್ನ ಯಜಮಾನನ ಶೌರ್ಯವನ್ನು ಬಹಳ ಹೊಗಳಿ, ಜ್ವಳನಜಟಿ ಮುಂತಾದವರನ್ನು ಹೆದರಿಸಲು ಪ್ರಯತ್ನಮಾಡುತ್ತಾನೆ. ಅದೇ ಅವನು 'ಜೂಬು ಮಾಡಿ'ದ್ದು. ಇಲ್ಲಿಯೂ 'ಜೂಬು' ಭಯಂಕರವಾದುದು ಎಂಬುದು ಸ್ಪಷ್ಟ. ಶಾಸನಗಳಲ್ಲಂತೂ ಇನ್ನೂ ಸ್ಪಷ್ಟವಾಗಿದೆ. ಆ ಉಲ್ಲೇಖಗಳನ್ನು ಕೆಳಗೆ ಕೊಡುತ್ತೇನೆ :

(1) "ಚೋಳನ ಜೂಬು ಮಾಳವನ ಗೋಳ್ಮುರಿ ಚೋಳನನಟ್ಟ
ತಿಂಬ ಮಾಕಾಳಿ ವರಾಳನಂ ತುಳಿವ ಗಂಧಗಜಂ ಖಚನಳ್ಳೆಯಂಬು
ನೇಪಾಳನ ಜೆನ್ನ ಚಮ್ಮಟಿಗೆಯಿಂ ನಡೆತಂದನೆ ವೀರವಿಷ್ಣು
ಭೂಪಾಲಕನೆಂಬ ಸಂಭ್ರಮವೊ ವೈರಿನೃಪಾಳರ ಮಂಡಳಂಗಳೊಳ್. . . .[38]

(2) "ಮಾಳವರಾಯ ರಾಜ್ಯಮಥನಂ ಮಲೆಯಾಳ ಮಹೀಸ ಜೂ
[ಬು] ಬಲ್ಲಾಳ ನೃಪಾಳ ಪುತ್ತಗಜಕೇಸರಿ. . . ."[39]

(3) "ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತಂ ಗಾಯಗೋವಳ ಗಂಡ
ಪೆಂಡಾರ ಮಂನೆಯ ಜೂಬು. . . .ಗೊಂಗೆಯ ದಣ್ನಾ
ಯಕರು"[40]

(4) "ಸ್ವಸ್ತಿ ಶ್ರೀಮನುಮಹಾಪ್ರಧಾನಂ ಗಾಯಿಗೋವಾಳ ಗಂಡಪೆಂ
ಡಾರ ಮಂಡಳಿಕ ಜೂಬು ಸೋವೆಯ ಕಣ್ನಾಯಕರಳಿಯ
ಹಿರಿಯ. . . . . . . . .ಕೇತಯ ದಣ್ನಾಯಕರು"[41]

ಮೊದಲ ಎರಡು ಶಾಸನಗಳಲ್ಲಂತೂ 'ಜೂಬು' ಮಾತಿಗೆ ಯೂಪ ಅಥವಾ ವಧಸ್ತಂಭ ಎಂಬ ಮಾತು ಬಹಳ ಉಚಿತವಾಗಿ ಹೊಂದುತ್ತದೆ. 'ಗೋಳ್ಮುರಿ', 'ಮಾಕಾಳಿ', 'ಗಂಧಗಜ' ಮುಂತಾದುವೆಲ್ಲ ವಿನಾಶಕಾರಿಗಳು. 'ಜೂಬು' ಕೂಡ ಅಂತಹುದೇ ವಿನಾಶಕಾರಿ. ಮುಂದಿನ ಎರಡು ಶಾಸನಗಳಲ್ಲೂ ಅದೇ ಅರ್ಥ ಹೊಂದಿಕೆಯಾಗುತ್ತದೆ.

---

37 ವರ್ಧಮಾನ ಪುರಾಣ (ಸಂ. ಎಂ. ಮರಿಯಪ್ಪಭಟ್ಟ ಮತ್ತು ಎಂ. ಗೋವಿಂದರಾವ್. ಮದ್ರಾಸು. 1953). 7. 57 ಗದ್ಯ.

38 EC. VI Chikkamagalur. 104, 1202 A.D.

39 KI. II No. 38, 1235 A.D.

40 EC. VI Tarikere. 80, 1280 A.D.

41 EC. XIV P. 72, 1261 A.D.

ಕೆಲವು ಶಾಸನಗಳಲ್ಲಿ 'ಜೂಬು' ಬದಲು 'ಜೂಜು' ಕಾಣಿಸಿಕೊಂಡಿದೆ.[42] ಮೂಲತಃ ಶಾಸನವನ್ನು ಕೆತ್ತಿರುವವರೇ ತಪ್ಪು ಮಾಡಿರಬಹುದು. ಅಥವಾ ಶಾಸನವನ್ನು ಓದುವಲ್ಲಿ ತಪ್ಪಾಗಿರಲೂ ಸಾಧ್ಯ. ಭಾಷಾಶಾಸ್ತ್ರದ ದೃಷ್ಟಿಯಿಂದಲೂ 'ಯೂಪ ೧ ಜೂಬು' ಎಂಬ ಸಮೀಕರಣವನ್ನು ಸಾಧಿಸಬಹುದು. ಸಂಸ್ಕೃತದ ಕೆಳಗಿನ ಪದಗಳಿಗೆ ಕನ್ನಡದಲ್ಲಿ ಸಂವಾದಿಯಾದ ಪದಗಳನ್ನು ಗಮನಿಸಿ.

ದ್ಯೂತ — ಜೂದು, ಜೂಜು
ರೂಪ — ರೂಪು
ಊನ — ಊನು
ಭೂತ — ಬೂತು (—ಮರುಳು, ಹುಚ್ಚ, ಮೂರ್ಖ, ಸೀಚ)

ಎಂದರೆ ಸಂಸ್ಕೃತ ಪದಗಳ ಮೊದಲ ಉಚ್ಚಾರಾಂಶದ ಸ್ಥಾನದಲ್ಲಿ 'ಊ' ಕಾರವಿದ್ದರೆ, ಅಕಾರಾಂತವಾದ ಅಂತಹ ಪದಗಳು ಕನ್ನಡದಲ್ಲಿ ಕೆಲವು ಸಾರಿ ಉಕಾರಾಂತವಾಗುತ್ತದೆ. ಅಂತಹ ಕಡೆ ಇಕಾರಾಂತವಾಗಿದ್ದಾಗಲೂ ಕೆಲವು ಸಾರಿ ಉಕಾರಾಂತವಾಗಿ ಪರಿಣಮಿಸಿರುವುದುಂಟು. ಉದಾಹರಣೆಗೆ—

ಧೂಲೀ — ದೂಳು
ಭೂತಿ — ಬೂದಿ, ಬೂದು (ನೋಡಿ 'ಬೂದುಬಣ್ಣ')

ಮೇಲೆ ಕೊಟ್ಟಿರುವ ಪದಗಳೆಲ್ಲ ಸಂಸ್ಕೃತದಿಂದಲೇ ಬಂದಿವೆಯೆಂದು ಹೇಳುವುದು ಕಷ್ಟ. ಎಲ್ಲಿಂದಲೇ ಬಂದಿರಲಿ, ಅಂತ್ಯಸ್ವರದ ಮಾರ್ಪಾಟಿನ ರೀತಿಯನ್ನು ತೋರಿಸುವುದಕ್ಕೆ ಮೇಲಿನ ಉದಾಹರಣೆಗಳನ್ನು ಸಂಕೋಚವಿಲ್ಲದೆ ಬಳಸಬಹುದು. ಆದ್ದರಿಂದ 'ಜೂಬು' ಎಂಬುದು 'ಯೂಪ"ದಿಂದಲೋ, ಅದಕ್ಕೆ ಸಂವಾದಿಯಾದ (cognate) ಪ್ರಾಕೃತದ ಇನ್ನಾವುದೋ ಪದದಿಂದಲೋ ಬಂದಿರಬಹುದೆಂಬ ಊಹೆ ಸಾಧಾರವಾದುದೆಂದು ಅನ್ನಿಸುತ್ತದೆ.

ಮೂಲತಃ 'ವಧಸ್ತಂಭ' 'ಬಲಿಸ್ತಂಭ' ಎಂಬರ್ಥವಿದ್ದ ಆ ಪದಕ್ಕೆ ಮುಂದೆ 'ಹಿಂಸೆ' 'ಭಯಾನಕ' 'ಭಯಂಕರ' ಎಂಬ ಅರ್ಥಗಳು ಪ್ರಾಪ್ತವಾಗಿರಬಹುದು. ಬಸವಣ್ಣನವರ ವಚನದಲ್ಲಿಯೂ ಪರಸ್ತ್ರೀ ಪರಧನಗಳು 'ವಧಸ್ತಂಭ' ಗಳು, ಎಂದರೆ ಮನುಷ್ಯನ ನಾಶಕ್ಕೆ ಕಾರಣವಾಗುವ ವಸ್ತುಗಳು ಎಂಬ ಮೂಲಾರ್ಥವನ್ನೇ ಗ್ರಹಿಸಿದರೂ ತಪ್ಪಾಗುವುದಿಲ್ಲ.

---

42 Karnatak Inscriptions. Vol. V (Dharwar 1969).
—"ಸರಣಾಗತವಜ್ರಪಂಜರಂ ವೈರಿದಿಕ್ಕುಂಜರಂ ಮೂವ[ಡಿ]ಗಣ್ಡರ ಜೂಜು ನಾಮಾದಿ ಸಮಸ್ತ ಪ್ರಸಸ್ತಿ ಸಹಿತಂ. . . ." (p. 20, p. 27).

ಎ. ವಿ. ನರಸಿಂಹಮೂರ್ತಿ

# ಕದಂಬರ ಬನವಾಸಿ ಶಾಸನ

ಮೈಸೂರು ವಿಶ್ವವಿದ್ಯಾನಿಲಯದ ಮಾನಸಗಂಗೋತ್ರಿಯ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಶಾಖೆಯವರು, ಡಾ. ಎಂ. ಶೇಷಾದ್ರಿಯವರ ನೇತೃತ್ವದಲ್ಲಿ 1970ನೆಯ ಮಾರ್ಚಿ ತಿಂಗಳಲ್ಲಿ ಬನವಾಸಿಯಲ್ಲಿ ನಡೆಸಿದ ಉತ್ಖನನ ಸಮಯದಲ್ಲಿ ಈ ಹೊಸ ಶಾಸನ ವನ್ನು ಪತ್ತೆಹಚ್ಚಲಾಯಿತು.[1] ಈ ಶಾಸನವು ಬನವಾಸಿ ಗ್ರಾಮದಲ್ಲಿ ಸಂಕಯ್ಯ ಎಂಬುವರ ಮನೆಯ ಹಿತ್ತಲಿನಲ್ಲಿ ಹೂತುಹೋಗಿದ್ದ ಒಂದು ಕಲ್ಲುಕಂಬದ ಮೇಲೆ ಕೆತ್ತಲ್ಪಟ್ಟಿದೆ. ಇದು ಬನವಾಸಿಯ ಒಳಕೋಟೆಗೆ ಸುಮಾರು ಐವತ್ತು ಗಜಗಳಷ್ಟು ದೂರದಲ್ಲಿದೆ. ಈ ಶಾಸನವು 21·5 ಅಂಗುಲವಿರುವ ಕಲ್ಲುಕಂಬದ ನಾಲ್ಕು ಮುಖಗಳಲ್ಲಿಯೂ ಕೆತ್ತಲ್ಪಟ್ಟಿದೆ. ಆದರೆ ದುರದೃಷ್ಟದಿಂದ ಶಾಸನವಿರುವ ಮೇಲ್ಭಾಗವು ಒಡೆದು ಹೋಗಿ ಶಾಸನದ ಬಹು ಭಾಗವು ನಮಗೆ ದೊರಕಿಲ್ಲ. ಈ ಕಲ್ಲನ್ನು ಭೂಮಿಯಿಂದ ಅಗೆಸುತ್ತಿದ್ದಾಗ, ಈ ಕಲ್ಲಿನ ಇತರ ಕೆಲವು ಭಾಗಗಳೂ ದೊರಕಿದವು. ಇವುಗಳಲ್ಲಿಯೂ ಅಕ್ಷರಗಳಿವೆ. ಇವೆಲ್ಲ ವನ್ನೂ ಒಟ್ಟಿಗೆ ಸೇರಿಸಿದಾಗ್ಯೂ ಶಾಸನದ ಪೂರ್ಣಪಾಠವು ದೊರೆಯದೇ ಇರುವುದು ನಿಜವಾಗಿಯೂ ಬಹು ವಿಷಾದಕರವಾದ ಸಂಗತಿ. ಶಾಸನದ ಮೇಲ್ಭಾಗದ ಐದು ಸಾಲು ಗಳಷ್ಟು ಮಾತ್ರ ನಮಗೆ ದೊರೆಕಿದೆ. ಇದರ ಮೇಲಿನ ಭಾಗಗಳು ಅಲ್ಲೇ ಸುತ್ತಮುತ್ತ ಲಲ್ಲಿ ಎಲ್ಲಿಯೋ ಹೂತು ಹೋಗಿರಬೇಕು. ಈ ಶಾಸನವು ದೊರಕಿದ ಸ್ಥಳದಲ್ಲಿ ಸುಮಾರು ಕದಂಬರ ಕಾಲಕ್ಕೆ ಸೇರಬಹುದಾದ ಈಶ್ವರಲಿಂಗವೊಂದು ದೊರಕಿದೆ. ಇದರ ಸಮೀಪದಲ್ಲಿಯೇ ದೇವಸ್ಥಾನದ ಮುಂಭಾಗದಲ್ಲಿ ಉಪಯೋಗಿಸಿದ್ದಿರಬಹುದಾದ ಒಂದು ದ್ವಾರದ ಭಾಗವೂ ದೊರಕಿದೆ. ಇದರ ಪಕ್ಕದಲ್ಲಿ ಭೂಮಿಯನ್ನು ಅಗೆಯುತ್ತಿದ್ದಾಗ ಶಾತವಾಹನ ಕಾಲಕ್ಕೆ ಸೇರಬಹುದಾದ ಮಣ್ಣಿನ ಕುದುರೆಯ ವಿಗ್ರಹವೊಂದು ದೊರಕಿದೆ.

---

1 ಈ ಶಾಸನವನ್ನು ಪತ್ತೆ ಹಚ್ಚುವುದರಲ್ಲಿ ಬನವಾಸಿಯ ಶ್ರೀ. ಎಂ. ಸಿ. ಒಡೆಯರ್ ರವರು ನಮಗೆ ಸೂಚನೆಯನ್ನು ಕೊಟ್ಟರು. ಬನವಾಸಿಯ ದ. ರಾ. ಭಟ್ಟರವರು ಇತರ ವಿಧಗಳಲ್ಲಿ ಸಹಾಯ ಮಾಡಿದರು. ಇವರಿಬ್ಬರಿಗೂ ನಮ್ಮ ಕೃತಜ್ಞತೆಗಳು. ಈ ಶಾಸನವನ್ನು ಪರಿಷ್ಕರಿಸುವುದರಲ್ಲಿ ಡಾ. ಕೆ. ವಿ. ರಮೇಶ್ ರವರು ಮತ್ತು ಡಾ. ಬಿ. ಕೆ. ಗುರುರಾಜರಾಯರು ಉಪಕಾರಮಾಡಿದ್ದಾರೆ. ಇವರಿಬ್ಬರಿಗೂ ಲೇಖಕನ ಕೃತಜ್ಞತೆಗಳು ಸಲ್ಲುತ್ತವೆ.

ಇವುಗಳೆಲ್ಲವೂ, ಶಾಸನವು ದೊರಕಿದ ಸ್ಥಳವು ಪ್ರಾಚೀನ ಸ್ಥಳವೆಂಬುದನ್ನು ಎತ್ತಿ ತೋರಿಸುತ್ತದೆ.

ಶಾಸನದ ಪಾಠ

1 ..............ಬದ್ಧ ಇವ ಪನ್ನಗೇನ್ದ್ರಃ........ಕುಲಾಢ್ಯೋಚೌರೇತಿ ದು........ .......

2 ........ಆಜನ್ಮತಸ್ಸಇಙ್ಕಿತದುಃಖ ಲಬ್ಧಾಂ ಜಯಶ್ರಿಯಮ್ಪಲ್ಲವ ಪಾರ್ತ್ಥಿವಸ್ಯ ಜಹಾರ ರಾಮಸ್ಯ ಯಥೈವ ರಾಮಃ|| ಪರಸ್ಪರ.........

3 ....ನ್ನರೇನ್ದ್ರಃ ಮೃಗೇಶ ಕವರ್ಮ್ಮಾರಿ ಮೃಗೇಷು ನಿತ್ಯಂ|| ಕಾಞ್ಚೀಶ್ವರಾಜ್ಞಾ ಜಯಸಾಧನಂಯೋಗಾದ್ಗಾಮ್ಬಲಂ ತುಂಗಮದಾವಲೇಪಂ ಅನೇಕ ಹಸ್ತ್ಯಶ್ವ ಪದಾತಿಯೋಧಂ ಶಸ್ತ್ರಾಂ..........

4 ಹಾರಿತ್ಯದಿತಾದಿ ಸರ್ಗ್ಗೇ ಕದಮ್ಬವಂಶೇ ನಭಸೀವ ಸೂರ್ಯಃ ಕಾಕುಸ್ಥವರ್ಮ್ಮೇತಿ ನೃಪೋ ಬಭೂವ ದ್ಯಾವಾಪೃಥವ್ಯೋಃ ಪ್ರಥಿತ ಪ್ರಭಾವಃ|| ತಸ್ಯಾಥ ಪುತ್ರೋಂಬುಜಪತ್ರನೇತ್ರಃ ಶ್ರೀ ಶಾನ್ತಿವರ್ಮ್ಮಾ ರಣಭೀಮ............

5 ಸಿದ್ಧಂ|| ಸ್ವಸ್ತಿಜಿತಂ ಭಗವತಾ ಜ್ಯೋತಿರ್ಮ್ಮಯಂ ಬ್ರಹ್ಮವಿದಾಂ ಶರಣ್ಯಮ್ ವಿಶ್ವಸ್ಯ ಕರ್ತಾರಮನೇಕ ರೂಪಮ್ ವಿಭುಮ್ಪತಿಂ ಸ್ಥಾವರಜಙ್ಗಮಾನಾಮ್ ವಿಷ್ಣುನ್ನಮಸ್ಯಾಮಿ ತದೇಕ ಚಿತ್ತಂ............ಮಂತ್ರ ಘೋಷಃ

ಒಡೆದು ಹೋಗಿರುವ ಕಲ್ಲಿನ ಭಾಗಗಳಲ್ಲಿ ಈ ಕೆಳಗೆ ಕಂಡ ಅಕ್ಷರಗಳು ಕಾಣುತ್ತವೆ.

ಭಾಗ 1 : ........ಪಿರಾಜ್ಯಾ........

........ ಸಾನಾಃ ಬುದ್ಧಿ ಪ್ರಕರ್ಷಾರ್ಜ್ಜಿತಮಾ........

.....................ಕೃತೋಜ್ಜ್ವರ್ನೇನೇವ ..............

ಭಾಗ 2 : ........ಯದ್ಬುದ್ಧಿ ಜವೋದ್ಯ ಲಗ್ನಾಃ ಪಾಶ........

........ಯಾನೇಕ ಸಾಮನ್ತ ವಿಭ....

ಭಾಗ 3 : ........ನ್ತ್ಯ........

....ಜಾದಿನಿರ್ವೃತಯೇವ........

ಭಾಗ 4........ ಮದಾಸ್ಸ........

ಈ ಶಾಸನವು ಸಂಸ್ಕೃತಭಾಷೆ ಮತ್ತು ಬ್ರಾಹ್ಮೀಲಿಪಿಯಿಂದ ಉತ್ಪತ್ತಿಯಾದ ದಾಕ್ಷಿಣಾತ್ಯ ಲಿಪಿಯಲ್ಲಿ ( ಕದಂಬ ಲಿಪಿ) ಬರೆಯಲ್ಪಟ್ಟಿದೆ. ಈ ಲಿಪಿಯು ಚೌಕತಲೆ

ಅಥವಾ ಪೇಟಿಕಾಶಿರ (Box headed) ಬ್ರಾಹ್ಮೀ ಲಿಪಿಯೆಂದೂ ಪ್ರಸಿದ್ಧವಾಗಿದೆ. ಕದಂಬರ ಅನೇಕಶಾಸನಗಳು ಈ ಚೌಕತಲೆಯ ಲಿಪಿಯಲ್ಲಿವೆ. ಕದಂಬರ ಪ್ರಸಿದ್ಧ ತಾಳಗುಂದ ಶಿಲಾಶಾಸನವೂ ಇದೆ ಲಿಪಿಯಲ್ಲಿದೆ. ಇದನ್ನು ಕನ್ನಡ ಲಿಪಿಯ ಅತ್ಯಂತ ಪ್ರಾಚೀನವಾದ ಸ್ಥಿತಿ ಎಂದು ಬ್ಯೂಲರ್ ಮೊದಲಾದ ವಿದ್ವಾಂಸರು ವರ್ಣಿಸಿದ್ದಾರೆ. ಪ್ರಸ್ತುತ ಶಾಸನದ ಲಿಪಿಯು ತಾಳಗುಂದ ಶಾಸನದ ಲಿಪಿಗಿಂತ ಮುದ್ದಾಗಿಯೂ ಕಲಾತ್ಮಕವಾಗಿಯೂ ಇದೆ. ಕ, ರ, ಸ್ವ ಮುಂತಾದ ಅಕ್ಷರಗಳು ಸರಾಸರಿ 3.2ಅಂಗುಲ ಉದ್ದವಾಗಿಯೂ, ಮ, ದ, ಶ, ಗ ಮುಂತಾದವು 1.2 ಅಂಗುಲ ಉದ್ದವಾಗಿಯೂ ಇವೆ. ಸಂಯುಕ್ತಾಕ್ಷರಗಳಲ್ಲಿನ ಕೆಳಗಿನ ಅಕ್ಷರಗಳಿಗೂ ಚೌಕತಲೆಯಿರುವುದು ಗಮನಾರ್ಹವಾದುದು. ಇದು ಅನುಸ್ವಾರವನ್ನು ಸೂಚಿಸುವ ಮಕಾರಕ್ಕೂ ಅನ್ವಯಿಸುತ್ತದೆ. ಕ, ಮತ್ತು ರಕಾರಗಳ ಕೆಳಭಾಗವು ಗುಂಡಗಿರದೆ ಚೌಕಮೂಲೆಗಳನ್ನು ಹೊಂದಿದೆ. ಪದದ ಮಧ್ಯದಲ್ಲಿ ಅನುಸ್ವಾರವನ್ನು ಅಕ್ಷರದ ಮೇಲಿನ ಸಣ್ಣ ವೃತ್ತದಿಂದ ಸೂಚಿಸಲಾಗಿದೆ. (ಯಂ, ತಿಂ, ತಂ–5ನೇ ಸಾಲು). ಆದರೆ ಪದದ ಕೊನೆಯಲ್ಲಿ ಅದನ್ನು ಸೂಚಿಸಲು ಅದೇ ಸಾಲಿನ ಕೆಳಭಾಗದಲ್ಲಿ ಸಣ್ಣ ಗಾತ್ರದ ಮ ಕಾರವನ್ನು ಬಳಸಲಾಗಿದೆ. (ಸಿದ್ಧಮ್, ಶರಣ್ಯಮ್–5ನೇ ಸಾಲು). ದುಃಖ ಎಂಬ ಪದದಲ್ಲಿ ಜಿಹ್ವಾಮೂಲೀಯ ಚಿಹ್ನೆಯನ್ನು ಬರೆಯಲು ಮ ಕಾರವನ್ನು ಬಳಸಲಾಗಿದೆ. ಆದರೆ ಪೃಥವ್ಯೋಃ ಪ್ರಥಿತ ಎನ್ನುವಾಗ ಉಪಧ್ಮಾನೀಯ ಚಿಹ್ನೆಯ ಬದಲು 'ಶಕಟರೇಫ' ಚಿಹ್ನೆಯು ಉಪಯೋಗಿಸಲ್ಪಟ್ಟಿದೆ. ಸ್ವರಗಳಲ್ಲಿ ಅ (ಮೂರನೆಯ ಸಾಲು), ಆ (ಎರಡನೆಯ ಸಾಲು) ಮತ್ತು ಇ (ಒಂದನೆಯ ಸಾಲು) ಕಾಣಬರುತ್ತವೆ. ಶ್ಲೋಕದ ಅಂತ್ಯವನ್ನು ಸೂಚಿಸಲು ಎರಡು ಲಂಬರೇಖೆಗಳು ಉಪಯೋಗಿಸಲ್ಪಟ್ಟಿವೆ. ಥ ಎಂಬ ಅಕ್ಷರದಲ್ಲಿ, ಅಕ್ಷರದ ಒಳಭಾಗದಲ್ಲಿ ಒಂದು ಕೊಂಡಿಯಿರುವುದು ಎರಡು ಕಡೆಗಳಲ್ಲಿ ಕಂಡು ಬಂದರೆ (ಪೃಥವ್ಯೋ, ಪ್ರಥಿತ–ನಾಲ್ಕನೆಯ ಸಾಲು) ಅದೇ ಅಕ್ಷರಕ್ಕೆ ಒಳಭಾಗದಲ್ಲಿ ಕೊಂಡಿಯ ಬದಲು ಸಣ್ಣ ಸೊನ್ನೆಯಿರುವುದು ಮತ್ತೆರಡು ಕಡೆಗಳಲ್ಲಿ ಕಾಣಬರುತ್ತದೆ. (ಕಾಕುಸ್ಥ, ತಸ್ಯಾಥ- ನಾಲ್ಕನೆಯ ಸಾಲು). ಐದನೆಯ ಸಾಲಿನಲ್ಲಿ ರೂಪಮ್ ಎನ್ನುವಾಗ, ರೂ ಎಂಬ ಅಕ್ಷರದಲ್ಲಿ ಊಕಾರವನ್ನು ಸೂಚಿಸಲು ಸುರುಳಿಯಾಕಾರದ ಒಂದು ಕೊಂಡಿಯ ಬದಲು ಅಕ್ಷರದ ಬಲಭಾಗದಲ್ಲಿ ಎರಡು ಕೊಂಡಿಗಳನ್ನು ಬಳಸಲಾಗಿದೆ. ರೇಫದ ನಂತರ ಗ, ಮ, ಜ ಮತ್ತು ತ ಎಂಬ ಅಕ್ಷರಗಳು ದ್ವಿತ್ವವಾಗಿವೆ. (ಕರ್ಮ್ಮಾರಿ–ಮೂರನೆಯ ಸಾಲು, ಸರ್ಗ್ಗೇ–ನಾಲ್ಕನೆಯ ಸಾಲು, ವರ್ಮ್ಮೇತಿ-ನಾಲ್ಕನೆಯ ಸಾಲು, ಜ್ಯೋತಿರ್ಮ್ಮಯಂ-ಐದನೆಯ ಸಾಲು, ಕರ್ತ್ತಾರಂ-ಐದನೆಯ ಸಾಲು, ಕೃತೋಜ್ಜ್ವನೇನೇವ ಮತ್ತು ಪ್ರಕರ್ಷಾರ್ಜ್ಜಿತ–ಎರಡೂ ಭಾಗ 1). ಲಿಪಿಕಾರನು ಮಾಡಿರತಕ್ಕ ತಪ್ಪುಗಳೂ ಕೆಲವಿವೆ. (ಪೃಥವ್ಯೋ).

ಶಾಸನದ ಬಹುಭಾಗ ಒಡೆದು ಹೋಗಿರುವುದರಿಂದ ಶಾಸನದ ಅರ್ಥವನ್ನು ಖಚಿತವಾಗಿ ತಿಳಿಯಲು ಸಾಧ್ಯವಿಲ್ಲವಾಗಿದೆ. ಮೇಲಿನಿಂದ ಕೆಳಕ್ಕೆ ಶಾಸನದ ಸಾಲುಗಳನ್ನು

ಓದುವುದಕ್ಕಿಂತ, ಕೆಳಗಿನಿಂದ ಮೇಲಕ್ಕೆ ಓದಿಕೊಂಡು ಹೋಗುವುದು ಹೆಚ್ಚು ಸೂಕ್ತವಾಗಿ ತೋರುತ್ತದೆ. ಅಂದರೆ ಐದನೆಯ ಸಾಲನ್ನು ಮೊದಲನೆಯ ಸಾಲೆಂದೂ ನಾಲ್ಕನೆಯ ಸಾಲನ್ನು ಎರಡನೆಯ ಸಾಲೆಂದೂ, ಇತ್ಯಾದಿಯಾಗಿ ಪರಿಗಣಿಸಿದ ಸಾಮಾನ್ಯವಾಗಿ ಎಲ್ಲಾ ಶಾಸನಗಳಲ್ಲಿಯೂ ಕಾಣಬರುವ ಬಾಹ್ಯಸ್ವರೂಪವನ್ನು ಇಲ್ಲಿಯೂ ನೋಡಬಹುದು. ಸಿದ್ಧಂ|| ಸ್ವಸ್ತಿ ಜಿತಂ ಭಗವತಾ....ಎಂಬುದು ಕೊನೆಯ ಸಾಲಿನಲ್ಲಿದ್ದರೂ, ಶಾಸನದ ಆರಂಭದಂತಿದೆ. ಈ ಸಾಲಿನ ಕೆಳಭಾಗದ ಕಲ್ಲು ಒರಟಾಗಿಯೂ ನುಣುಪಾಗಿ ಮಾಡಿಲ್ಲದೇ ಇರುವುದರಿಂದ ಶಾಸನವನ್ನು ಇನ್ನೂ ಕೆಳ ಬರೆಯುವುದು ಅಥವಾ ಮುಂದುವರಿಸುವುದು ಲಿಪಿಕಾರನ ಉದ್ದೇಶವಾಗಿರಲಿಲ್ಲವೆಂಬು ದನ್ನು ಸ್ಪಷ್ಟಪಡಿಸುತ್ತದೆ. ಈ ದೃಷ್ಟಿಯಿಂದ ಇದನ್ನೇ ಮೊದಲನೆಯ ಸಾಲೆಂದು ಪರಿಗಣಿ ಬಹುದಾಗಿದೆ. ಅದೇ ರೀತಿಯಲ್ಲಿ ವಿಷ್ಣು ಸ್ತೋತ್ರವಾದನಂತರ ಹಾರಿತ್ಯಾದಿತಾದಿ ಸಗ್ಗ ಕದಂಬವಂಶೇ....ಎಂದು ಕದಂಬವಂಶದ ಪ್ರಸ್ತಾಪವು ಬರುತ್ತದೆ. ಅದಕ್ಕೆ ಕಾಕುಸ್ಥವರ್ಮ ಮತ್ತು ಅವನ ಮಗ ಶಾನ್ತಿವರ್ಮ ಇವರ ವಿಷಯವು ಹೇಳಲ್ಪಟ್ಟ ನಂತರ ಮೃಗೇಶವರ್ಮನ ವಿಚಾರವೂ ಅದಾದಮೇಲೆ ಅದೇ ರಾಜನು ಪಲ್ಲವರಾಜನೊಡ ಮಾಡಿದ ಯುದ್ಧದ ವಿಚಾರವೂ ಹೇಳಲ್ಪಟ್ಟಿದೆ. ಈ ರೀತಿ ಕೆಳಗಡೆಯಿಂದ ಮೇಲಕ್ಕೆ ಓದಿದಾಗ ಸಮರ್ಪಕವಾದ ಶಾಸನದ ಬಾಹ್ಯಸ್ವರೂಪವು ಕಾಣಬರುತ್ತದೆ. ಮೇಲ ನಿಂದ ಕೆಳಕ್ಕೆ ಓದಿದರೆ ಪಲ್ಲವರಾಜನೊಡನೆ ನಡೆದ ಯುದ್ಧವೂ, ನಂತರ ಮೃಗೇ ವರ್ಮನ ಪ್ರಸ್ತಾಪವೂ, ಅದಾದನಂತರ ಇದ್ದಕ್ಕಿದ್ದಂತೆ ಕದಂಬ ವಂಶದ ಪ್ರಸ್ತಾಪವೂ ಕೊನೆಯಲ್ಲಿ ವಿಷ್ಣುಸ್ತುತಿಯ ನಾಂದಿಯ ಶ್ಲೋಕವೂ ಬರೆದಂತೆ ಕಾಣುತ್ತದೆ ಕೆಳಗಡೆಯಿಂದ ಮೇಲಕ್ಕೆ ಶಾಸನವನ್ನು ಬರೆಯಲು ಕಾರಣಗಳೇನು ಎಂಬುದನ್ನು ಸುಲಭವಾಗಿ ವಿವರಿಸಲಾಗುವುದಿಲ್ಲ. ಆ ರೀತಿಯಲ್ಲಿ ಶಾಸನಗಳು ಬರೆಯಲ್ಪಡುತ್ತಿದ್ದವೆ ಎಂಬುದೂ ಗಮನಿಸಬೇಕಾದ ಅಂಶ.

ಮೊದಲನೆಯ ಸಾಲಿನಲ್ಲಿ (ಮೇಲಿನಿಂದ ಕೆಳಕ್ಕೆ) ಅಕ್ಷರಗಳು ಬಹಳವಾಗಿ ಹೋಗಿರುವುದರಿಂದ ಅರ್ಥಮಾಡಲು ಸಾಧ್ಯವಿಲ್ಲ. ಎರಡನೆಯ ಸಾಲಿನಲ್ಲಿ, ಪಲ್ಲವ ರಾಜನು ಬಹುಕಾಲದಿಂದ ಸಂಪಾದಿಸಿದ್ದ ಜಯಲಕ್ಷ್ಮಿಯನ್ನು, ಶ್ರೀರಾಮನು ಪರಶು ರಾಮನಿಂದ ಕಿತ್ತುಕೊಂಡಂತೆ, ಕಿತ್ತುಕೊಂಡನು ಎಂದು ಹೇಳಿದೆ. ಬಹುಶಃ ಇದು ಮೃಗೇಶವರ್ಮನಿಗೆ ಸೇರಿದುದೆಂದು ಭಾವಿಸಿದರೆ, ಮೃಗೇಶವರ್ಮನು ಪಲ್ಲವರನ್ನು ಸೋಲಿಸಿ ಅವರ ಜಯಶ್ರೀಯನ್ನು ತನ್ನದನ್ನಾಗಿ ಮಾಡಿಕೊಂಡನು ಎಂದು ಹೇಳ ಬಹುದು. ಮೂರನೆಯ ಸಾಲಿನ ಅರ್ಥ ಸ್ಪಷ್ಟವಾಗಿಲ್ಲ. ಇಲ್ಲಿ ಮೃಗೇಶವರ್ಮನನ್ನು ಸಿಂಹಕ್ಕೂ, ಅವನ ಶತ್ರುಗಳನ್ನು ಮೃಗಗಳಿಗೂ ಹೋಲಿಸಲಾಗಿದೆ. ಕಾಂಚೀಶ ರಾಜ್ಞಾ[1]....ಎಂಬುದನ್ನು ಅರ್ಥೈಸಲು ಸಾಧ್ಯವಿಲ್ಲ. ನಾಲ್ಕನೆಯ ಸಾಲಿನಲ್ಲಿ, ಕದಂಬ

---

[1] ಇದು ಕಾಂಚೀಶರಾಜ್ಞಾ ಎಂದಿದ್ದರೆ, ಆ ರಾಜನ ಜಯಸಾಧನವಾದ ಅನೇಕ ಹಸ್ತ್ಯಶ್ವ ಪದಾತಿ.........ಇವುಗಳನ್ನು ಮೃಗೇಶನು ಸೋಲಿಸಿದನೆಂದು ಇರಬಹುದು. ಒಟ್ಟಿನಲ್ಲಿ ಇದರ ಖಚಿತವಾದ ಅರ್ಥವನ್ನು ಹೇಳುವುದು ಕಷ್ಟ.

ವಂಶಕ್ಕೆ ಸೂರ್ಯಸೋಪಾದಿಯಲ್ಲಿ ಪ್ರಸಿದ್ಧನಾಗಿದ್ದ ಕಾಕುಸ್ಥವರ್ಮರಾಜ ಮತ್ತು ಅವನ ಮಗ ರಣಭೀಮ ಶಾನ್ತಿವರ್ಮ ಇವರ ವಿಚಾರವು ಹೇಳಲ್ಪಟ್ಟಿದೆ. ಐದನೆಯ ಸಾಲಿನಲ್ಲಿ ವಿಷ್ಣುಸ್ತುತಿಯಿದೆ.

ಇತಿಹಾಸದ ದೃಷ್ಟಿಯಿಂದ ಈ ಶಾಸನವು ಕದಂಬರ ವಿಚಾರದಲ್ಲಿ ಗಮನಾರ್ಹವಾದ ಹೊಸ ವಿಷಯವನ್ನೇನೂ ತಿಳಿಸುವುದಿಲ್ಲ. ಕದಂಬರ ರಾಜಧಾನಿಯಾದ ಬನವಾಸಿಯಲ್ಲಿ ಅವರ ಒಂದು ಶಾಸನವೂ ದೊರೆಯದೇ ಇದ್ದುದು ಬಹು ಸೋಜಿಗದ ಸಂಗತಿಯಾಗಿದ್ದಿತು. ಇದರ ಆಧಾರದಮೇಲೆ ಅನೇಕರು ಬನವಾಸಿಯು ಕದಂಬರ ರಾಜಧಾನಿಯಾಗಿದ್ದಿತೆಂಬುದನ್ನೂ ಶಂಕಿಸುತ್ತಿದ್ದರು. ಕದಂಬರ ಶಾಸನವು ಅವರ ರಾಜಧಾನಿಯಾಗಿದ್ದ ಬನವಾಸಿಯಲ್ಲೇ ದೊರೆತಿರುವುದು ಈ ಶಂಕೆಯನ್ನು ನಿವಾರಿಸುತ್ತದೆ. ಈ ದೃಷ್ಟಿಯಿಂದ ಇದೊಂದು ಮುಖ್ಯವಾದ ಶಾಸನ.

ಇದು ಮೃಗೇಶವರ್ಮನ ಶಾಸನವೆಂದು ತರ್ಕಿಸಬಹುದಾದರೂ, ಖಚಿತವಾಗಿ ಹೇಳಲು ಆಧಾರ ಸಾಲದು. ಮೃಗೇಶವರ್ಮನ ನಂತರ ಆಳಿದ ರಾಜರ ಪ್ರಸ್ತಾಪವೇನೋ ಈ ಶಾಸನದಲ್ಲಿಲ್ಲ. ಆದರೆ ಶಾಸನದಲ್ಲಿ ನಾವು ಐದನೆಯ ಸಾಲು ಎಂದು ಪರಿಗಣಿಸಿರುವ ಸಾಲಿನ ಮೇಲೆ ಶಾಸನವು ಇರಲು ಸಾಧ್ಯವಿದೆ. ಆ ಭಾಗಗಳಾವುವೂ ದೊರೆತಿಲ್ಲ. ಲಿಪಿ ಲಕ್ಷಣದ ಆಧಾರದಮೇಲೆ ಹೇಳುವುದಾದರೆ, ಈ ಶಾಸನವು ಕ್ರಿ. ಶ. ಐದನೆಯ ಶತಮಾನದ ಕೊನೆಯ ಭಾಗ ಅಥವಾ ಆರನೆಯ ಶತಮಾನದ ಮೊದಲ ಭಾಗಕ್ಕೆ ಸೇರಬಹುದು.

ಮಾ . ನಾ. ಶ್ರೀಧರ ಉಪ್ಪೂರ್

# ಯಾರ ಬಯಕೆಯ ಗೊನೆಯೊ !

ಈ ಬಯಕೆ—ಇಂದಲ್ಲ
ಕೋಟಿ ವರುಷಗಳಿಂದ
ಕೋಟಿ ಜೀವಿಗಳ ಹಗಲಿರುಳು ಕಾಡುತ್ತ,
ಆತ್ಮ ಶಾಂತಿಗೆ ಬಾಯ್ಬಿಡುವ ಬಡವೆಗಳ ಜೀವಹಿಂಡುತ್ತ!
ಇಂದಿಗೂ ತೃಪ್ತಿಗಾಣದ, ಹಸಿದ, ಹೆಮ್ಮಾರಿ!

*  *  *  *  *

ಬಯಕೆ ಬಾಲವ ಹಿಡಿದು,
ಹೊಸತನದ ಬೆಂಬತ್ತಿ—
(ಧರ್ಮ ವಿಜ್ಞಾನ ಜ್ಯೋತಿಷ್ಯವೆಂದೆಲ್ಲ ಹರಹುತ್ತ,)
ಒಂದಾಗಿ, ಬೇರಾಗಿ,
ದಿನದಿನಕೆ ಬದಲಾಗಿ,
ಐಂದ್ರಜಾಲಿಕವಾಗಿ
ತೋರಿ, ಮರೆಯುವ—ಈ ವಿಶ್ವಸೃಷ್ಟಿ,
ಯಾರ ಬಯಕೆಯ ಗೊನೆಯೊ !
(ಯಾರ ಕನಸಿನ ತೆನೆಯೊ !)

ಭೀಮರಾವ ಚಿಟಗುಪ್ಪಿ

# ಪ್ರಾಚೀನ ಕಾವ್ಯಗಳಲ್ಲಿ ಪದ್ಯಗಳ ಪುನರಾವೃತ್ತಿ

ಯಾವನೊಬ್ಬ ಕವಿಯ ಒಂದು ಗ್ರಂಥದಲ್ಲಿಯ ಪದ್ಯಗಳು ಆತನ ಇನ್ನೊಂದು ಗ್ರಂಥದಲ್ಲಿ ಪುನರಾವೃತ್ತವಾಗಿರುವುದು ಕನ್ನಡದ ಪ್ರಾಚೀನ ಕಾವ್ಯಪ್ರಪಂಚದಲ್ಲಿ ಒಂದು ಒಗಟಾಗಿದೆ. ಸಾಮಾನ್ಯವಾಗಿ ಈ ಪದ್ಯಗಳು ಪೀಠಿಕೆ, ನಗರಾರ್ಣವಾದಿ ಅಷ್ಟಾದಶ ವರ್ಣನ, ಉಪಸಂಹಾರ ಸಂದರ್ಭಗಳಲ್ಲಿ ಕಾಣದೊರೆಯುತ್ತವೆ. ಕವಿಯೇ ಇದ್ದ ಕ್ಕಿದ್ದಂತೆ ಇಲ್ಲವೆ ಉಚಿತ ಮಾರ್ಪಾಟನೊಂದಿಗೆ ತನ್ನದೊಂದು ಕಾವ್ಯದಲ್ಲಿಯ ಈ ಬಗೆಯ ಪದ್ಯಗಳನ್ನು ಸಂದರ್ಭಾನುಸಾರ ಇನ್ನೊಂದರಲ್ಲಿ ಉದ್ದೇಶಪೂರ್ವಕವಾಗಿ ಸೇರಿಸಿರುವನೊ ಅಥವಾ ಅನ್ಯರು ಹೀಗೆ ಮಾಡಿರುವರೊ ಎಂಬುದೊಂದು ಸಂಶೋಧಕರ ಎದುರಿಗಿರುವ ಸಮಸ್ಯೆ.

ನಾಗಚಂದ್ರ(ಅಭಿನವಪಂಪ)ನ ಮತ್ತು ರಾಘವಾಂಕನ ಕೃತಿಗಳಲ್ಲಿ ಈ ಬಗೆಯ ಪದ್ಯಗಳು ಹೆಚ್ಚು ಸಂಖ್ಯೆಯಲ್ಲಿ ಪುನರಾವೃತ್ತವಾಗಿರುವದನ್ನು ವಿದ್ವಾಂಸರು ಎತ್ತಿ ತೋರಿಸಿರುವರು.* ನಾಗಚಂದ್ರನ 'ಮಲ್ಲಿನಾಥಪುರಾಣ'ದಿಂದ ಆತನ 'ರಾಮಚಂದ್ರ ಚರಿತ

* ನಾಗಚಂದ್ರ, ರಾಘವಾಂಕರ ಕೃತಿಗಳಲ್ಲಿ ಪುನರಾವೃತ್ತವಾದ ಪದ್ಯಗಳ ವಿವರಗಳಿವು—

ನಾಗಚಂದ್ರ

| ಮಲ್ಲಿನಾಥ ಪುರಾಣ (ಆಶ್ವಾಸ/ಪದ್ಯ) | ಸಂದರ್ಭ | ರಾಮಚಂದ್ರ ಚರಿತ ಪುರಾಣ (ಆಶ್ವಾಸ/ಪದ್ಯ) |
|---|---|---|
| ೧/೧೦–೧೯, ೨೦, ೨೧ ; ೧೦/೧೩೩. | ಪೀಠಿಕೆ–ಗುರುಸ್ತುತಿ | ೧/೭–೧೯ |
| ೪/೧೦೨, ೧೦೬–೧೧೦. | ಗರ್ಭಿಣಿ ಸ್ತ್ರೀ ವರ್ಣನೆ | ೩/೧೦೨, ೧೦೪–೧೦೮ |
| ೮/೭೬–೭೮ ೮೨–೯೨, ೯೪–೧೦೧, ೧೦೩-೧೦೮. | ಋತುವರ್ಣನ–ವರ್ಷಾ, ಶರತ್ | ೭/೧೩೯–೧೫೯, ೧೬೪, ೧೬೫ |

ಪುರಾಣ'ದಲ್ಲಿ ಪುನರಾವೃತ್ತವಾದ ಸುಮಾರು ೭೦ಪದ್ಯಗಳನ್ನು ಬೇಂದ್ರೆಯವರು ಒಂ
ಉಲ್ಲೇಖಿಸಿರುವರು.[1] ಮಲ್ಲಿನಾಥಪುರಾಣವು ಚರಿತಪುರಾಣಕ್ಕಿಂತ ಮೊದಲಿನದೇ

| | | |
|---|---|---|
| ೯/೮೯, ೯೨. | ವೈರಾಗ್ಯ ತಾಳಿದ ವೈಶ್ರವಣನು ರಾಜ್ಯವನ್ನು ಸ್ವೀಕರಿಸಲು ಮಗನಿಗಿತ್ತ ಆದೇಶ ಮತ್ತು ಮಗನ ಉತ್ತರ. | ೬/೮೧, ೮೫ ದಶರಥನು ರಾಮನಿಗಿತ್ತ ಇದೇ ಬಗೆಯ ಆದೇಶ ಮತ್ತು ರಾಮನ ಉತ್ತ |
| ೧೧/೧೩, ೫೪. | ದೀಕ್ಷೆ ಪಡೆದು ವ್ರತಸ್ಥನಾದ ವೈಶ್ರವಣನ ವರ್ಣನೆ | ೧೯/೫೯, ೬೧–(ಅದೇ ರಾಮನ ವರ್ಣನೆ) |
| ೧೨/೧೭೫–೧೭೮. | ಜಿನಸ್ತುತಿ (ಸೌಧರ್ಮೇಂದ್ರನಿಂದ) | ೫/೭–೧೦ (ಅದೇ–ಜನಕನಿಂ |
| ೧೪/೧೧, ೨೫೫–೨೬೩, ೨೬೬–೨೮೧. | ಪುಷ್ಪ ವೃಷ್ಟಿ–ಮಲ್ಲಿನಾಥನ ಮೇಲೆ ; ನಿರ್ವಾಣ ಪೂಜೆ | ೧೬/೬೬, ೭೮–೮೨, ೮೩- (ಅದೇ–ರಾಮನಿಗೆ) |

ರಾಘವಾಂಕ

| ಹರಿಶ್ಚಂದ್ರ ಕಾವ್ಯ (ಸ್ಥಲ/ಪದ್ಯ) | ಸಂದರ್ಭ | ಸೋಮನಾಥ ಚಾರಿತ್ರ (ಸ್ಥಲ/ಪದ) |
|---|---|---|
| ೧/೩–೫, ೧೧, ೧೨, ೧೪, ೨೧–೨೮, ೩೦–೩೧ | ಪೀಠಿಕೆ (ದೇವತಾ ಸ್ತುತಿ, ಗುರುಸ್ತುತಿ-ಸಜ್ಜನ ಪ್ರಶಂಸೆ, ದುರ್ಜನ ನಿಂದೆ, ಕವಿಯ ಮೇಲ್ಮೆ ಇತ್ಯಾದಿ | ೧/೩, ೫, ೭, ೯, ೧೦, ೧ ೨೩, ೧೩, ೧೪, ೧೬, ೧೯, ೨೪, ೨೫, ೧೫, ೧೨, ೧೮ |
| ೩/೨೭, ೩೩–೩೭ | ವನವರ್ಣನ | ೨/೨೪, ೭೫, ೭೭, ೭೮, ೮೦, ೮೧ |
| ೩/೭೪, ೭೬, ೭೭, ೮೨, ೮೩, ೯೦ | ಸೂರ್ಯಾಸ್ತ, ನಿಶಾಗಮನ, ಬೆಳದಿಂಗಳು | ೨/೬, ೭, ೧೦, ೧೧, ೧೨. ೧೪ |
| ೩/೪೨ | ಸರೋವರ | ೩/೨೩ |
| ೩/೪೬ | ಪುರ | ೧/೧೧೦ |
| ೪/೫, ೭, ೯, ೧೦, ೧೫, ೧೮, ೧೮, ೨೨, ೨೪, ೨೫, ೨೬ ೨೮, ೩೩, ೪೨, ೪೩ | ವೇಶ್ಯಾವಾಟ | ೨/೩೧, ೫೦, ೯೫, ೨೯, ೪೯ ೩೦, ೪೧, ೪೩, ೪೦, ೩೬ ೨೭, ೨೬, ೧೧೨, ೩೨ |
| ೪/೩೯ | ಹ. ಕಾ.–ವೇಶ್ಯಾವಾಟ ಸೋ. ಚಾ.–ಪದ್ಮಾವತಿಯ ವರ್ಣನೆ | ೨/೪೬ |
| ೫/೧೫, ೨೧, ೨೩, ೩೬, ೨೯, ೪೮, ೫೬ ; ೬/೧೭ | ಬೇಟೆ | ೩/೨, ೩, ೧೦, ೫, ೮, ೧೯, ೧೫, ೩ |
| ೫/೫೫, ೫೭ | ಆಶ್ರಮ ವರ್ಣನ | ೩/೨೨, ೨೬ |
| ೫/೨೮, ೬೭ | ಮುನಿವರ್ಣನ | ೩/೨೩, ೩೦ |

[1] ಸಾ. ಸಂ., ಪು. ೪–೫

ಬಗೆಯಲಾಗಿದೆ.[2] ರಾಘವಾಂಕನ 'ಹರಿಶ್ಚಂದ್ರಕಾವ್ಯ'ದಲ್ಲಿಯ ಸುಮಾರು ೭೫ ಪದ್ಯಗಳು (ಪರಿಶಿಷ್ಟದಲ್ಲಿಯ ಪದ್ಯಗಳನ್ನು ಬಿಟ್ಟು) ಆತನ ಸೋಮನಾಥ ಚಾರಿತ್ರದಲ್ಲಿ ಹರಿದು ಬಂದಿವೆ. ರಾಘವಾಂಕನ ವಿಷಯದಲ್ಲಿ ಆತನ ಚರಿತ್ರಕಾರ ಸಿದ್ಧನಂಜೇಶ–'ಹರಿಶ್ಚಂದ್ರ ಕಾವ್ಯವ ಮುರಿದು ಸೋಮನಾಥನ ಕಾವ್ಯವ ಪೇಳ್ದು' 'ಹರಿಶ್ಚಂದ್ರಕಾವ್ಯದ ಪದಗಳಂ ತೆಗೆದು ಜಗಪೊಗಳಲು ಕ್ಷೋಣಿಯೊಳು ಸೋಮನಾಥನ ಕಾವ್ಯಮಂ ಪೇಳ್ದು' ಎಂದು ಒಂದಲ್ಲ ಎರಡು ಸಲ ಹೇಳಿರುವನು.[3] ಸಿದ್ಧನಂಜೇಶನ ಈ ಮಾತುಗಳು ಕವಿಯೇ ಉದ್ದೇಶ ಪೂರ್ವಕವಾಗಿ ತನ್ನ ಒಂದು ಗ್ರಂಥದಲ್ಲಿಯ ಪದ್ಯಗಳನ್ನು ಇನ್ನೊಂದರಲ್ಲಿ ಸಂದರ್ಭಾನು ಸಾರ ಸೇರಿಸಿಕೊಳ್ಳುತ್ತಿದ್ದನು ಎಂಬುದಕ್ಕೆ ಪೋಷಕವಾಗಿವೆ. ನಾಗಚಂದ್ರನ ವಿಷಯ ದಲ್ಲಿ ಈ ಬಗೆಯ ಮಾತುಗಳಿಲ್ಲವಾದರೂ ಅವನಾಗಲಿ ರಾಘವಾಂಕನಾಗಲಿ ಇತರ ರಾಗಲಿ ಬಹಳ ಹಿಂದಿನಿಂದ ಬೆಳೆದುಬಂದ ಪರಂಪರೆಗನುಸರಿಸಿ ಹೀಗೆ ಮಾಡಿರಬೇಕು ಅಥವಾ ಅನ್ಯರು ಇವುಗಳನ್ನು ಸೇರಿಸಿರಬೇಕು ಎಂದು ವಿದ್ವಾಂಸರ ಅಭಿಪ್ರಾಯವಿದೆ.[4]

ಇಂದಿನವರ ದೃಷ್ಟಿಯಲ್ಲಿ ಪದ್ಯಗಳ ಈ ಬಗೆಯ ಪುನರಾವೃತ್ತಿಯು ವಿಚಿತ್ರವೇ ಸೈ. ನಾಗಚಂದ್ರ 'ಭಾರತೀಕರ್ಣಪೂರ', ರಾಘವಾಂಕ 'ಉಭಯಕವಿಶರಭಭೇರುಂಡ'. ಇಂಥವರು ತಮ್ಮ ಆಯಾ ಕೃತಿಗಳಿಗಾಗಿ ಪ್ರತ್ಯೇಕ ಪದ್ಯಗಳನ್ನು ರಚಿಸದೆ ಹಿಂದಣ ಕೃತಿಗಳಲ್ಲಿಯ ಪದ್ಯಗಳನ್ನೇಕೆ ಬಳಸಿಕೊಂಡಿರಬಹುದು? ಚರ್ವಿತ-ಚರ್ವಣವಿದ್ದರೂ ಅದನ್ನೆ ಇನ್ನೊಮ್ಮೆ ಹೇಳುವಾಗ ಅನ್ಯರೀತಿಯಲ್ಲಿ ಹೇಳುವುದುಂಟು. ಅನೇಕರು ಹೀಗೆ ಹೇಳಿರುವರು, ಇಂದಿಗೂ ಹೇಳುತ್ತಿರುವರು–ಹೊಸಕುಪ್ಪಿಯಲ್ಲಿ ಹಳೆಯ ಮದ್ಯ (Old wine in a new bottle), ಎಂಬಂತೆ. ಕಾವ್ಯಮೀಮಾಂಸಕಾರ ರಾಜಶೇಖರ ಅನ್ಯರ ಪದ್ಯಗಳನ್ನು ತಮಗಾಗಿ ಬಳಸಿಕೊಳ್ಳಲು 'ಹರಣ–ಸ್ವೀಕರಣ'ದ ಅನೇಕ ವಿಧಾನಗಳನ್ನು ಹೇಳಿರುವನು.[5] ನಾಗಚಂದ್ರ ರಾಘವಾಂಕರಿಗೆ ಈ ವಿಷಯ ಗೊತ್ತಿರಲಿಲ್ಲವೆಂದು ಭಾವಿಸುವದು ತಪ್ಪಾಗುವದು. ಪದ್ಯಗಳು ತಮ್ಮವೇ ಇದ್ದರೂ ಪುನರಾವೃತ್ತಿಯ ದೋಷವನ್ನು ತಪ್ಪಿಸಿಕೊಳ್ಳಲು ಅವರಿಗೆ ಹೀಗೆ ಮಾಡುವದು ದುಸ್ತರ ವಿದ್ದಿಲ್ಲ. ಮನಸ್ಸು ಮಾಡಿದ್ದರೆ ಹೊಸ ಪದ್ಯಗಳನ್ನು ರಚಿಸುವ ಪ್ರತಿಭೆ ಸಾಮರ್ಥ್ಯ ಗಳಿದ್ದವು ಅವರಲ್ಲಿ. ಆದರೂ ಅವರಾಗಲಿ ಇತರರಾಗಲಿ ಇದಾವುದನ್ನೂ ಮಾಡದೆ, ಪುನರಾವೃತ್ತಿಯ ದೋಷವನ್ನು ಸತ್ಕರಿಸಿ ತಮ್ಮ ಒಂದು ಗ್ರಂಥದಲ್ಲಿಯ ಪದ್ಯಗಳನ್ನು ಇನ್ನೊಂದರಲ್ಲಿ ನೇರವಾಗಿ ಇಲ್ಲವೆ ಮಾರ್ಪಡಿಸಿ ಬಳಸಿಕೊಂಡಿರುವದು ಪೂರ್ವದಿಂದ ನಡೆದುಬಂದ ಇಂಥದೊಂದು ಪರಂಪರೆಯನ್ನು ಸೂಚಿಸುವದು.

---

2 ಮ. ಪು., ಮುನ್ನುಡಿ, ಪು. ೬ ; ಸಾ. ಸಂ., ಪು. ೪

3 ಕ. ಚ. ಸಂ. ೧, ಪು. ೨೩೬ ; ಸೋ. ಚಾ., ಮುನ್ನುಡಿ, ಪು. ೭೨

4 ಕ. ನು., ಸಂ. ೨೫/೩, ಪು. ೮೯

5 ಕಾ. ಮೀ., ಅಧ್ಯಾಯ, ೧೧–೧೩

## ಪರಂಪರೆಯ ಮೂಲ

ಈ ಪರಂಪರೆಯ ಮೂಲವು ಪ್ರಾಕೃತದಲ್ಲಿರುವ ಜೈನಾಗಮ ಸಾಹಿತ್ಯದಲ್ಲಿ ಕಾಣ ಸಿಗುವದು. ಕನ್ನಡ ಸಾಹಿತ್ಯದ ಉಗಮ ಮತ್ತು ಪ್ರಾರಂಭಿಕ ವಿಕಾಸಗಳು ಜೈನ ಕೊಡುಗೆ ಎಂಬುದನ್ನು ಗಮನಿಸಿದಾಗ, ಈ ಪರಂಪರೆಯೆ ಕನ್ನಡ ಸಾಹಿತ್ಯದಲ್ಲಿ ಹರಿದು ಬಂದಂತೆ ತೋರುವದು. ಜೈನರ ಆಗಮಸಾಹಿತ್ಯವು ಅಂಗ, ಉಪಾಂಗ, ಪ್ರಕೀರ್ಣ ಮತ್ತು ಸೂತ್ರಗಳಲ್ಲಿ ಗ್ರಥಿತವಾಗಿದೆ. ಅಂಗಗಳು ೧೨, ಅವುಗಳಲ್ಲಿ ೮ನೆಯ 'ಅಂತಕೃದ್ದಶ' ಮತ್ತು ೯ನೆಯ 'ಅನುತ್ತರೌಪಪಾತಿಕದಶ' ಅಂಗಗಳ ವಿಚಾರದಲ್ಲಿ, ನಗರಾರ್ಣವಾದಿ ಅಷ್ಟಾದಶ ವರ್ಣನೆಗಳಿಗೆ ಸಂಬಂಧಿಸಿದ ಪದ್ಯ ಮೊದಲಾದವುಗಳ ಸಂದರ್ಭಾನುಸಾರ ಪುನರಾವೃತ್ತಿಯ ಉಲ್ಲೇಖ ಬರುತ್ತದೆ ವಿಂಟರನಿಟ್ಸ್‌ನ ಭಾರತೀಯ ಸಾಹಿತ್ಯ ಚರಿತ್ರೆಯಲ್ಲಿ. ಈ ಅಂಗಗಳಲ್ಲಿ ಬರುವ ಕಥೆಗಳು ತೀರ ಸಂಕ್ಷಿಪ್ತವಿದ್ದು ಇವುಗಳಿಗೆ ಸಂಬಂಧಿಸಿದ ವರ್ಣನೀಯಾಂಶಗಳನ್ನು ಇನ್ನೊಂದು ಗ್ರಂಥ ದಿಂದ ತೆಗೆದುಕೊಳ್ಳಬೇಕೆಂಬ ನಿವೇದಕರಿಗಿರುವ ನಿರ್ದೇಶವನ್ನು ಉಲ್ಲೇಖಿಸಿರುವನು ಆತ. ಇವು ಆತನ ಮಾತುಗಳು[6]—

They (legends) often present merely a skeleton, which the reciter is to fill in with set words in phrases like cleches. For instance one passage reads: "There was once a city named Champa; a shrine Punnabhadda; a forest;—description." What is meant is, that a complete description of the city, the shrine and the forest is to be inserted here, as it stands in the first Upanga. Another instance about the Thera Suhamma, one of Mahavira's desciples, where there is a mere indication that a detailed description of the holy man is to be given, which can be found in the sixth Anga. In those cases where they are given in full, these descriptions (vannaa, varnaka) are composed in an ornate style characterised by the conglomeration of long compound words. In all probability they belong to the earlier poetical portions of the Canon.

ಕನ್ನಡಕಾವ್ಯಗಳಲ್ಲಿ ಪುನರಾವೃತ್ತವಾದ ಪದ್ಯಗಳಾದರೂ ಹೆಚ್ಚಾಗಿ ವರ್ಣಕಗಳೇ. ಕವಿಗಳೇ ಅವುಗಳನ್ನು ಇದ್ದ ಕ್ಕಿದ್ದಂತೆ ಅಥವಾ ಮಾರ್ಪಡಿಸಿ ಬಳಸಿಕೊಂಡಿರಬೇಕೆಂಬುದಕ್ಕೆ ಸಿದ್ಧನಂಜೇಶನ ಪೂರ್ವೋಕ್ತ 'ಆಪ್ತವಾಕ್ಯ'ಗಳಿವೆ. ಪರಂಪರೆಯ ಬೆಂಬಲವಿದ್ದುದ ರಿಂದ ಆ ಕಾವ್ಯಗಳನ್ನು ಪಠಿಸುತ್ತಿದ್ದ ಗಮಕಿ ಮೊದಲಾದವರು ಸಹ ತಮ್ಮ ಒಲವು

---

6 ಹಿ. ಇಂ. ಲಿ., ಪು. ೪೫೦–೫೧

ಅಭಿರುಚಿಗಳಿಗನುಸರಿಸಿ ಆಯಾ ಕವಿಗಳ ಪೂರ್ವರಚಿತ ಪದ್ಯಗಳನ್ನು ಸೇರಿಸಿ ಹೇಳುತ್ತಿರಬೇಕು. ಜ್ಞಾಪಕಾರ್ಥವಾಗಿ ಅವರು ಮತ್ತು ಮುಂದಿನವರು ಅವುಗಳನ್ನು ತಮ್ಮ ಪ್ರತಿಗಳಲ್ಲಿ ಬರೆದಿಟ್ಟುಕೊಂಡಿರುವವಾದರೂ ಅಸಂಭವವೆನಿಸದು.

## ಸಂಭಾವ್ಯ ಉದಾಹರಣೆಗಳು

'ಮಲ್ಲಿನಾಥಪುರಾಣ'ದ ೪ನೆಯ ಆಶ್ವಾಸ ೯೮–೧೧೦ ಪದ್ಯಗಳಲ್ಲಿ ಗರ್ಭಿಣಿಯಿದ್ದ ವೈಶ್ರವಣನ ಪಟ್ಟಮಹಿಷಿ ಧನಶ್ರೀಯ ವರ್ಣನವಿದೆ. ಈ ಪದ್ಯಗಳಲ್ಲಿಯ ೧೦೨ (ಬಸಿರ ಮಗಂಗಿಲ್ಲಿವರಂ-) ರಿಂದ ೧೧೦ (ಸೋರ್ಮುಡಿ ಮಾಲೆಯಿಂ ಕದಪುಗಳ್-) ರವರೆಗಿನ ಪದ್ಯಗಳು ಚರಿತ ಪುರಾಣದಲ್ಲಿ ಗರ್ಭವತಿಯಿದ್ದ ದಶರಥ ಮಹಾರಾಜನ ಪಟ್ಟಮಹಿಷಿ ಅಪರಾಜಿತ ಮಹಾದೇವಿಯ ವರ್ಣನೆಗಾಗಿ ಪೂರಕವೆಂದು ಬಂದಿವೆ (ರಾ.ಪು.೩/೧೦೨–೧೦೮). 'ಮಲ್ಲಿನಾಥಪುರಾಣ'ದಲ್ಲಿ ೧೧೦ನೆಯ ಪದ್ಯದ ಕೊನೆಯಲ್ಲಿರುವ 'ಅಂತು ವಿವಿಧವಿಳಾಸಂ....ಸುಖಪ್ರಸವಸಮಯದೊಳ್' ಎಂಬ ಚಿಕ್ಕ ಗದ್ಯವಾಕ್ಯ ಸಹ ಇಲ್ಲಿ ಇದ್ದಕ್ಕಿದ್ದಂತೆ ಬಂದಿದೆ. ಅಪರಾಜಿತ ಮಹಾದೇವಿಯ ಈ ವರ್ಣನೆ ೯೭ನೆಯ 'ಉದರದೊಳಿರ್ಪ ಬಾಲಕನ' ಪದ್ಯದಿಂದ ತೊಡಗುತ್ತದೆ. ಇಲ್ಲಿಂದ ೧೦೧ರವರೆಗಿನ ಪದ್ಯಗಳನ್ನಿಷ್ಟೇ ತೆಗೆದುಕೊಂಡರೆ ವರ್ಣನೆ ಹರಿಗಡಿಯುತ್ತದೆ. ಆದ್ದರಿಂದ ಮಲ್ಲಿನಾಥ ಪುರಾಣದಲ್ಲಿಯ ಪದ್ಯಗಳನ್ನು ನಾಗಚಂದ್ರನು ಪೂರಕವೆಂದು ಇಲ್ಲಿ ಉದ್ದೇಶಪೂರ್ವಕವಾಗಿ ಬಳಸಿಕೊಂಡಿರುವನೆಂದು ಭಾವಿಸಬಹುದಾಗಿದೆ. ಇಷ್ಟೇ ಅಲ್ಲ, ಮಲ್ಲಿನಾಥ ಪುರಾಣದ ಪದ್ಯಗಳಲ್ಲಿ ೧೦೩ನೆಯದರೆಡೆ 'ಆಗಳವನೀಶ್ವರನನೇಕ ಮಂಗಳಾನಕರವಂಗಳೊದವೆ' ಎಂಬ ಗದ್ಯವಾಕ್ಯವಿದೆ. ೧೦೪ನೆಯ 'ರನ್ನದ ಬಾಯಿನಕ್ಕೆ ಪಲವಂದದ ಚಂದದ' ಪದ್ಯದಲ್ಲಿ ಧನಶ್ರೀಗೆ ವೈಶ್ರವಣನು ಪುಂಸವನಾದಿ ಕಾರ್ಯಗಳನ್ನು ಜರುಗಿಸುತ್ತಾನೆ. ಚರಿತ ಪುರಾಣದಲ್ಲಿ ಇವೆರಡರ ಭಾವವನ್ನು 'ಅವನೀಶ್ವರನಾಗಳ್ ಪುಂಸವನಂ ಮೊದಲಾಗೆ' (೩/೧೦೩) ಎಂದು ಮುಂತಾಗಿ ಒಂದು ಕಂದಪದ್ಯದಲ್ಲಿ ಸಂಗ್ರಹಿಸಲಾಗಿದೆ. ಪೀಠಿಕೆ ಮತ್ತು ಕೊನೆಯ ಅಂದರೆ ೧೬ನೆಯ ಆಶ್ವಾಸಗಳಲ್ಲಿ ಪುನರಾವೃತ್ತವಾದ ಪದ್ಯಗಳಾದರೂ ಹೀಗೆಯೆ ಬಂದಂತಿವೆ.

ಇನ್ನೊಂದು ಉದಾಹರಣೆ. ಚರಿತ ಪುರಾಣ, ೭ನೆಯ ಆಶ್ವಾಸ, ೧೫೫-೧೬೯ ಪದ್ಯಗಳಲ್ಲಿ ವರ್ಷಾಕಾಲ ಮತ್ತು ಶರದಾಗಮನದ ಸುಂದರ ವರ್ಣನೆಯಿದೆ. ಇವುಗಳಲ್ಲಿ ನಾಲ್ಕು (೧೬೦-೧೬೩) ಪದ್ಯಗಳನ್ನು ಬಿಟ್ಟು ಮಿಕ್ಕವು (ಗದ್ಯಭಾಗ ಸಹ) ಮಲ್ಲಿನಾಥ ಪುರಾಣದಲ್ಲಿಯವು. ಚರಿತಪುರಾಣದಲ್ಲಿ ಪುನರಾವರ್ತವಾದ ಪದ್ಯಗಳನ್ನು ಕುರಿತು ಬೇಂದ್ರೆ 'ಈ ಪದ್ಯಗಳ ಭಾವಸೌಂದರ್ಯವನ್ನು ಮೀರುವ ಪದ್ಯಗಳನ್ನು ಬರೆಯುವುದು ತನಗೆ ಅಸಾಧ್ಯವೆಂಬಂತೆ ಅತ್ಯಂತ ಮಹತ್ವವುಳ್ಳ ನೂರಾರು ಪದ್ಯಗಳನ್ನು ಇದ್ದಕ್ಕಿದ್ದಂತೆ ಚರಿತಪುರಾಣದಲ್ಲಿ ಎತ್ತಿಕೊಂಡಿದ್ದಾನೆ ನಾಗಚಂದ್ರ........ಹೀಗೆ ಎತ್ತಿಕೊಂಡಿರುವುದು ಮೈಗಳ್ಳಕವಿಯ ಮೌನವಲ್ಲ; ಅವನ ಅದ್ಭುತ-ಪ್ರತಿಭೆಯು ಅವನಿಂದ

ಪಡೆದ ಆದರದ ಕಾಣಿಕೆ' ಎಂದಿರುವರು.[7] ಅವರ ಈ ಮಾತುಗಳು ವಿಶೇಷವಾಗಿ ಋತು ವರ್ಣನೆಯ ಈ ಪದ್ಯಗಳನ್ನು ಅನುಲಕ್ಷಿಸಿ, ಎನ್ನಬಹುದಾಗಿದೆ. ಇವುಗಳ ಜೊತೆಗೆ ಅನ್ಯರು ಸಹ ಕೆಲವು ಪದ್ಯಗಳನ್ನು ಸೇರಿಸಿದಂತಿದೆ. ಚರಿತಪುರಾಣ, ಪಂಚಮಾಶ್ವಾಸ, ೨-೧೧೦ ಪದ್ಯಗಳಲ್ಲಿ ಜಿನಸ್ತುತಿ ಇದೆ. ಇವುಗಳಲ್ಲಿ ೬-೧೧೦ ಪದ್ಯಗಳು ಮಲ್ಲಿನಾಥಪುರಾಣ ದಲ್ಲಿಯವು. ಇವಿಲ್ಲದಿದ್ದರೂ ಸ್ತುತಿಗೆ ಭಂಗಬರುವಂತಿಲ್ಲ. ಕಥೆ ಮೊಟಕುವದಿಲ್ಲ. ಆದ್ದರಿಂದ ಬಹುಶಃ ಭಾವಕ ಗಮಕಿ ಇಲ್ಲವೆ ಅನ್ಯನೊಬ್ಬನು ಇವುಗಳನ್ನು ಇಲ್ಲಿ ಸೇರಿಸಿದಂತೆ ತೋರುವದು.

## ಹರಿಶ್ಚಂದ್ರಕಾವ್ಯ-ಸೋಮನಾಥ ಚಾರಿತ್ರ

ಹರಿಶ್ಚಂದ್ರಕಾವ್ಯದಲ್ಲಿಯ ಪದ್ಯಗಳ ಕೂಡಿಕೆಯಿಂದ ಸೋಮನಾಥ ಚಾರಿತ್ರವು ಗ್ರಥಿತ ವಾಗಿರುವುದನ್ನು ಸಿದ್ಧನಂಜೇಶನೇ ಹೇಳಿರುವದರಿಂದ ಈ ವಿಷಯದಲ್ಲಿ ಹೆಚ್ಚು ಊಹಾಪೋಹಕ್ಕೆ ಅವಕಾಶವಿಲ್ಲ. ಆದರೂ ರಾಘವಾಂಕನನಂತರದವರು ತಮ್ಮ ಅಭಿ ರುಚಿಗೆ ತಕ್ಕಂತೆ ಉಭಯ ಕಾವ್ಯಗಳಲ್ಲಿ ಇಲ್ಲಿಂದಲ್ಲಿಗೆ ಅಲ್ಲಿಂದಿಲ್ಲಿಗೆ ಪದ್ಯಗಳನ್ನು ಸಾಗಿಸಿರಬೇಕೆಂಬ ಅಭಿಪ್ರಾಯವಿದೆ.[8] ಇಲ್ಲಿ ಇಂಥ ಒಂದೆರಡು ಪದ್ಯಗಳ ವಿಷಯದಲ್ಲಿ ಊಹೆಯ ಕುದುರೆಗಳನ್ನು ಓಡಿಸಬಹುದಾಗಿದೆ. ಸೊಮನಾಥಚಾರಿತ್ರದಲ್ಲಿ ಆದಯ್ಯನು ಪುಲಿಗೆರೆಯ ಬೀದಿಗಳನ್ನು ಸುತ್ತುತ್ತಿರುವಾಗ ಪದ್ಮಾವತಿಯು ಆತನ ಕಣ್ಣಿಗೆ ಬೀಳು ವಳು. ಒಬ್ಬರೊಬ್ಬರ ದೃಷ್ಟಿ ಒಂದಾಗಲು, ಇಬ್ಬರೂ ಮೋಹಿತರಾಗಿ, ಆ ಮೋಹವು ಪ್ರೇಮವಾಗಿ, ಮದುವೆಯಾಗುವರು. ಇವು ಈ ಸಂದರ್ಭದಲ್ಲಿಯ ಪದ್ಯಗಳು ; ಎರಡ ನೆಯ ಸ್ಥಲದಲ್ಲಿವೆ. ಈ ಸ್ಥಲದ ೪೬ನೆಯ 'ಹಡಪದನುಲೇಪನದ ಕುಸುಮಮಾಲೆಗಳ್ನ' ಪದ್ಯದಲ್ಲಿ 'ಪದ್ಮಾವತಿ ವಿರಾಜಿಸಿದಳು' ಮಾತುಗಳಲ್ಲಿ ಮೊದಲು ಸಲ ಆಕೆ ಪ್ರತ್ಯಕ್ಷ ಪ್ರಕಟವಾಗುವಳು. ಈ ಪದ್ಯ ಹರಿಶ್ಚಂದ್ರನು ವೇಶ್ಯಾವಾಟವನ್ನು ಸುತ್ತುತ್ತಿರುವಾಗ, 'ಪದ್ಮಾವತಿ ವಿರಾಜಿಸಿದಳು' ಪದಗಳ ಬದಲು 'ನಾಯಕಸ್ತ್ರೀಯರನ್ನೀಕ್ಷಿಸುತ ಭೂಮಿಪಂ ನಡೆತಂದನು' ಪದಗಳೊಂದಿಗೆ ಹರಿಶ್ಚಂದ್ರಕಾವ್ಯದಲ್ಲಿ (೪/೩೯) ಕಾಣ ಸಿಗುತ್ತದೆ. ಇಲ್ಲಿ ಈ ಪದ್ಯ ವೇಶ್ಯಾವಾಟದ ವರ್ಣನೆಯ ಹಲವು ಪದ್ಯಗಳಲ್ಲಿ ಒಂದು. ಅಲ್ಲದೆ ಹರಿಶ್ಚಂದ್ರಕಾವ್ಯದ ಸಂಪಾದನೆಗಾಗಿ ಇಟ್ಟುಕೊಂಡ ಹಸ್ತಪ್ರತಿಗಳಲ್ಲಿ ಎರಡು ಪ್ರತಿಗಳಲ್ಲಿ ಇದಿಲ್ಲ. ಸೋಮನಾಥ ಚಾರಿತ್ರದಲ್ಲಾದರೊ ಇದು ಇರಲೇಬೇಕಾದ ಪದ್ಯ; ಎಲ್ಲ ಹಸ್ತ ಪ್ರತಿಗಳಲ್ಲಿದೆ. ಆದ್ದರಿಂದ ಈ ಪದ್ಯ ಹರಿಶ್ಚಂದ್ರಕಾವ್ಯದಿಂದ ಇಲ್ಲಿಗೆ ಬಂದಿಗದೆ ಇಲ್ಲಿಂದ ಅಲ್ಲಿಗೆ ಹೋದಂತೆ ತೋರುತ್ತದೆ. ವೇಶ್ಯಾವಾಟಕ್ಕೆ ಸಂಬಂಧಿಸಿ ಹರಿಶ್ಚಂದ್ರ ಕಾವ್ಯದಲ್ಲಿ 'ಗಡಣದುಪ್ಪರಿಗೆಗಳೊಳು' (೪/೯), 'ತೆಳುಗಾಳಿಗೊಲೆವ ಮೇಲುದು' (೪/೭) ಪದ್ಯಗಳಿವೆ. ಇವುಗಳ ಕೊನೆಯ ಪಾದಗಳನ್ನು 'ಮಡದಿಯರನೀಕ್ಷಿಸುತಾ

---

7 ಸಾ. ಸಂ., ಪು. ೪-೫

8 ಸೋ. ಚಾ., ಮುನ್ನುಡಿ, ಪು. ೭೨

'ಬಪ್ಪಾದಿಮಯ್ಯನನಿದಿರ್ಗೊಳಲು ದಯ್ಯನೈತಿರುತ್ತಿರಲೇವೊಗಳ್ವೆನೊ' ಮತ್ತು ಬಂದಳೆಂಬಂತೆಸೆದಳು' ಎಂದು ಮಾರ್ಪಡಿಸಿ ಸೋಮನಾಥಚಾರಿತ್ರದಲ್ಲಿ ಅಳವಡಿಸಿಕೊಳ್ಳಲಾಗಿದೆ (೨/೪೫,೫೦). ಎರಡನೆಯದು ಅಂದರೆ 'ತೆಳುಗಾಳಿಗೊಲೆವ' ಪದ್ಯ ಪದ್ಮಾವತಿಗೆ ಸಂಬಂಧಿಸಿದೆ. ಇವೆರಡು ಪದ್ಯಗಳ ಮಧ್ಯದಲ್ಲಿ ಪೂರ್ವೋಕ್ತ 'ಹಡಪದನುಲೇಪನ ಕುಸುಮಮಾಲ್ನೆ' ಪದ್ಯ (೨/೪೬) ಮತ್ತು ಪದ್ಮಾವತಿಯ ಸೌಂದರ್ಯವನ್ನು ಬಣ್ಣಿಸುವ ಮೂರು ಪದ್ಯಗಳಿವೆ (೨/೪೭,೪೮,೪೯). ಮೂರನೆಯ ಅಂದರೆ ೨/೪೯ನೆಯ ಪದ್ಯ 'ಆದಿಮಯ್ಯನ ಕಣ್ಗೆ ವಿಪುಳಫಳಭರವಾಗಲಿರ್ದ ಸುರಲತೆಯಂತೆ ಮೆರೆದಳಬಲಾರತ್ನ ಪದ್ಮಾವತಿ' ಎಂದು ಕೊನೆಗೊಳ್ಳುತ್ತದೆ. ಇದರ ನಂತರ 'ತೆಳುಗಾಳಿಗೊಲೆವ' (೨/೫೦) ಮತ್ತು ಪದ್ಮಾವತಿ ಆದಿಮಯ್ಯರ ಪರಸ್ಪರ ದೃಷ್ಟಿಮಿಲನದ 'ಕಡಗಿ ಕವಿದೆಡೆವಯಲೊಳುಭಯ ದೃಷ್ಟಿಗಳಡಸಿ' (೨/೫೧) ಪದ್ಯಗಳಿವೆ. ಇವೆಲ್ಲ ಪದ್ಯಗಳನ್ನು ಒಟ್ಟಾರೆ ನಿರುಕಿಸಿದಾಗ ೨/೫೦ನೆಯ 'ತೆಳುಗಾಳಿಗೊಲೆವ' ಪದ್ಯ ಅನವಶ್ಯವಿದ್ದು, ಇದನ್ನು ಸೇರಿಸಿದವ ರಾಘವಾಂಕನಿರದೆ ಅನ್ಯನೊಬ್ಬನಿರಬೇಕೆಂದು ತೋರುವದು.

ಒಟ್ಟನಲ್ಲಿ ಕನ್ನಡದ ಪ್ರಾಚೀನ ಕಾವ್ಯಗಳಲ್ಲಿ ಕಂಡುಬರುವ ಪದ್ಯಗಳ ಪುನರಾವೃತ್ತಿಗೆ ಕವಿಗಳ 'ವೈಗಳ್ಳತನ' ಅಥವಾ ಅನ್ಯ ಯಾವುದೆ ಕಾರಣವಿರದೆ, ಅದೊಂದು ಪರಂಪರೆಯು ಮೂಲಕ ಎನ್ನಬಹುದು. ಆ ಪರಂಪರೆಯ ಕುರುಹನ್ನು ಕನ್ನಡ ಸಾಹಿತ್ಯದ ಉದಯಕ್ಕಿಂತ ಶತಕಾನುಶತಕ ಮೊದಲು ಅಸ್ತಿತ್ವದಲ್ಲಿದ್ದ ಜೈನಾಗಮ ಸಾಹಿತ್ಯದಲ್ಲಿ ಕಾಣಬಹುದಾಗಿದೆ. ಕನ್ನಡ ಸಾಹಿತ್ಯದ ಉದಯ ವಿಕಾಸಗಳಿಗೆ ಜೈನರೇ ಆದ್ಯರಿರುವದರಿಂದ ಅವರ ಆಗಮಗ್ರಂಥಗಳಲ್ಲಿಯ ಈ ಪರಂಪರೆಯು ಸಾಹಿತ್ಯದಲ್ಲಿ ಸಹ ಹರಿದು ಬಂದಿದ್ದು ಜೈನರ ಅನಂತರ ಸಾಹಿತ್ಯಕ್ಷೇತ್ರದಲ್ಲಿ ಬೆಳಗಿದ ವೀರಶೈವ ಕವಿಗಳ ಕೃತಿಗಳಲ್ಲೂ ಮುಂದರಿದಂತೆ ತೋರುವುದು. ಜೈನ, ವೀರಶೈವ, ಬ್ರಾಹ್ಮಣ, ಯಾರೆ ಇರಲಿ, ನಮ್ಮ ಪ್ರಾಚೀನ ಸಾಹಿತ್ಯವೆಲ್ಲ ಹೆಚ್ಚಾಗಿ ಧರ್ಮ, ಧರ್ಮಕಥೆಗಳಿಗೆ ಮೀಸಲಾಗಿರುವುದು ಈ ಸಂದರ್ಭದಲ್ಲಿ ಗಮನಾರ್ಹವಾಗಿದೆ. ಬಹುಶಃ ಆ ಕಾಲದಲ್ಲಿ ಕವಿ, ಸಹೃದಯ, ವಿಮರ್ಶಕ, ಎಲ್ಲರಿಗೂ ಈ ಪರಂಪರೆಯ ಅರಿವಿದ್ದಿರಬೇಕು. ಅಂತೆಯೆ ನಾಗಚಂದ್ರ, ರಾಘವಾಂಕ ಮತ್ತು ಇತರರ ಕೃತಿಗಳಲ್ಲಿ ಕಂಡುಬರುವ ಪದ್ಯಗಳ ಪುನರಾವೃತ್ತಿಯನ್ನು ಕುರಿತು ಪ್ರಾಚೀನರಲ್ಲಿ ಒಬ್ಬನಾದರೂ ಆಕ್ಷೇಪಿಸಿಲ್ಲ. ಇಂದಿನವರಾದ ನಮಗೆ ವಿಚಿತ್ರವೆನಿಸುತ್ತದೆ, ಇಷ್ಟೆ.

## ಸಂಕೇತಗಳ ವಿವರಣೆ

(೧) ಮಲ್ಲಿನಾಥಪುರಾಣಂ–ನಾಗಚಂದ್ರ (ಅಭಿನವಪಂಪ) ವಿರಚಿತ; ಸಂ. ಎಸ್. ಜಿ. ನರಸಿಂಹಾಚಾರ್ ಮತ್ತು ಮ. ಅ. ರಾಮಾನುಜಯ್ಯಂಗಾರ್, ಕರ್ಣಾಟಕ ಕಾವ್ಯಮಂಜರಿ, ಮೈಸೂರು, ೧೮೯೫. ಮ. ಪು.

(೨) ರಾಮಚಂದ್ರಚರಿತಪುರಾಣ (ಪಂಪರಾಮಾಯಣ)–ನಾಗಚಂದ್ರ (ಅಭಿನವ ಪಂಪ); ಸಂ. ಬಿ. ಲೀವಿಸ್ ರೈಸ್, ಬಿಬ್ಲಿಯೋಥಿಕಾ ಕರ್ನಾಟಿಕಾ, ಬೆಂಗಳೂರು, ೧೮೯೨. ರಾ. ಪು.

(೩) ಹರಿಶ್ಚಂದ್ರಕಾವ್ಯಂ–ರಾಘವಾಂಕ ರಚಿತ; ಸಂ. ಎನ್. ಬಸವಾರಾಧ್ಯ ಮತ್ತು ಎನ್. ಬಸಪ್ಪ, ಪ್ರಾಚ್ಯಕಾವ್ಯ ಪ್ರಕಾಶನ ಮಂದಿರ, ಮೈಸೂರು, ೧೯೫೫. ಹ. ಕಾ.

(೪) ಸೋಮನಾಥಚಾರಿತ್ರ–ರಾಘವಾಂಕರಚಿತ ; ಸಂ. ಆರ್. ಸಿ. ಹಿರೇಮಠ ಮತ್ತು ಎಂ. ಎಸ್. ಸುಂಕಾಪುರ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೧. ಸೋ. ಚಾ.

(೫) ಕಾವ್ಯಮೀಮಾಂಸಾ (ಸಂಸ್ಕೃತ)–ರಾಜಶೇಖರ; ಸಂ. ಗಂಗಾಸಾಗರರಾಯ, ಚೌಖಾಂಬಾ ವಿದ್ಯಾಭವನ, ವಾರಣಾಸಿ, ೧೯೬೪. ಕಾ. ಮೀ.

(೬) ಹಿಸ್ಟರಿ ಆಫ್ ಇಂಡಿಯನ್ ಲಿಟರೇಚರ್ (ಭಾರತೀಯ ಸಾಹಿತ್ಯ ಚರಿತ್ರೆ);– ಎಂ. ವಿಂಟರನಿಟ್ಜ್, ಭಾಗ ೨, ಕಲಕತ್ತಾ ವಿಶ್ವವಿದ್ಯಾಲಯ, ೧೯೩೩ ಹಿ. ಇಂ. ಲಿ.

(೭) ಕರ್ಣಾಟಕ ಕವಿಚರಿತೆ ಆರ್. ನರಸಿಂಹಚಾರ್. ಕ. ಚ.

(೮) ಸಾಹಿತ್ಯ ಸಂಶೋಧನ–ದ. ರಾ. ಬೇಂದ್ರೆ (ನಾಗಚಂದ್ರನ ಮಲ್ಲಿನಾಥಪುರಾಣ), ಮನೋಹರ ಗ್ರಂಥಪ್ರಕಾಶನ, ಧಾರವಾಡ, ೧೯೪೦. ಸಾ. ಸಂ.

(೯) ಕನ್ನಡ ನುಡಿ, ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ, ಬೆಂಗಳೂರು, ಸಂ. ೨೫/೩ (ಸೋಮನಾಥ ಚಾರಿತ್ರದ ವಿಮರ್ಶೆ) ಕ. ನು.

ಎಂ. ಆರ್. ನರಸಿಂಹನ್

# ಮಿಲ್ಟನ್ ಮಹಾಕವಿಯ ಸ್ಯಾಂಸನ್ ಅಗೋನಿಸ್ಟಸ್

(ಕನ್ನಡಾನುವಾದ)

## ಪೀಠಿಕೆ

ಆಂಗ್ಲಸಾಹಿತ್ಯದಲ್ಲಿ ಮಿಲ್ಟನ್ ಒಂದು ವಿಶಿಷ್ಟಸ್ಥಾನವನ್ನು ಗಳಿಸಿದ್ದಾನೆ. ಇವನು ಹೊಸದಾದ ಕವಿರಾಜಮಾರ್ಗವನ್ನು ಆರಂಭಿಸಿದನೆನ್ನಬಹುದು. ಇವನ ಕಾವ್ಯದಲ್ಲಿ ಉನ್ನತವಾದ ಕಾವ್ಯವಸ್ತು, ಗಹನವಾದ ಗಂಭೀರವಾದ ಪಾಂಡಿತ್ಯ, ಅದ್ಭುತ ತತ್ವಚಿಂತನ, ಹಿತಮಿತವಾದ ಸಂಗೀತ, ಉತ್ತಮ ಆದರ್ಶ ತುಂಬಿರುತ್ತದೆ. ಇವನ ಭಾಷೆ, ಭಾವ, ಸಾಮಾನ್ಯ ಜನರಿಗೆ ನಿಲುಕಲಾರದ ವಸ್ತು. ಅದನ್ನು ಅರ್ಥಮಾಡಿಕೊಳ್ಳಲು ಭಾಷಾಪಾಂಡಿತ್ಯವಲ್ಲದೆ, ಇತಿಹಾಸ ಪುರಾಣಾದಿಗಳ ತತ್ವಶಾಸ್ತ್ರಗಳ ಪೂರ್ಣಜ್ಞಾನವೂ ಅತ್ಯಾವಶ್ಯಕ. ಈ ನಾರಿಕೇಳಪಾಕವನ್ನು ಆಸ್ವಾದಿಸತಕ್ಕ ಸಾಮರ್ಥ್ಯವುಳ್ಳವರೇ ಈತನ ಕಾವ್ಯವನ್ನು ಓದಿ ಅದರ ಸೊಬಗನ್ನು ಅನುಭವಿಸಿ ಆನಂದಿಸಬಲ್ಲರು. ಕೆಲವೊಮ್ಮೆ ಈತನು ಉಪಯೋಗಿಸುವ ನಿಶಿತ ನಿರ್ದಿಷ್ಟ ಶೈಲಿ ಕಟುವಾಗಿ ತೋರಬಹುದು. ಆದರೆ ಕವಿ ನಿರಂಕುಶಮತಿ, ಭಾವಪ್ರದರ್ಶನದ ಸ್ವಾತಂತ್ರ್ಯವುಳ್ಳವನು. ಇವನು ತನ್ನ ಗುರುಗಂಭೀರವಾದ ಪಾಂಡಿತ್ಯಪ್ರದರ್ಶನಕ್ಕೆ ಒಪ್ಪುವ ಪುರಾಣವಸ್ತುಗಳನ್ನೇ ಕಾವ್ಯಬಿಂದುವಾಗಿ ಬಳಸಿದುದರಿಂದ, ಅವನ ಪಾಂಡಿತ್ಯಕ್ಕೆ ಮೆರುಗೂ, ಪುರಾಣಕ್ಕೆ ಮಹತ್ತ್ವೂ, ಕವಿ ವಾಣಿಗೆ ಗೌರವವೂ ಉಂಟಾಯಿತು.

ಈ ಜಗದ್ವಿಖ್ಯಾತನಾದ ಏಕಮೇವಾದ್ವಿತೀಯನೆನಿಸಿದ ಮಿಲ್ಟನ್ ೧೬೦೮ರಲ್ಲಿ ಡಿಸೆಂಬರ್ ಒಂಬತ್ತರಂದು ಲಂಡನ್ ನಗರದಲ್ಲಿ ಜನಿಸಿದನು. ಇವನ ತಂದೆಯೂ ಸಾಹಿತ್ಯಾಭ್ಯಾಸಿ. ಸಂಗೀತಪ್ರಿಯ. ಈ ಗುಣಗಳು ಇವನಲ್ಲಿಯೂ ಬೇರೂರಿದ್ದುವು. ಸುಂದರನಾಗಿದ್ದ ಇವನನ್ನು ಕಾಲೇಜಿನ ಜೊತೆಗಾರರು " ಕಾಲೇಜಿನ ವನಿತಾಮಣಿ " ಎಂದು ಕರೆಯುತ್ತಿದ್ದರು. ಇವನು ವಿದ್ಯಾರ್ಥಿಯಾಗಿದ್ದಾಗಲೇ ಹಲವಾರು ಕವನ

ಗಳನ್ನು ಬರೆದು ಜನಪ್ರಿಯನಾಗಿ ಮನ್ನಣೆ ಗಳಿಸಿದ್ದನು. ಎಂ.ಎ. ಪದವೀಧರನಾ ನಂತರ ತನ್ನ ತಂದೆಯೊಡನೆ ಬಕಿಂಗ್‌ಹ್ಯಾಂ ಷೈರಿನಲ್ಲಿ ಐದು ವರ್ಷಗಳನ್ನು ಕಳೆದನು. ಈ ಸಮಯದಲ್ಲಿಯೇ ಇವನ ಪ್ರಖ್ಯಾತ ಅವಳಿಪದ್ಯಗಳಾದ "ಲಾಲೆಗ್ರೋ" "ಇಲ್ಪೆನ್ ಸೊರೊಸೋ" ಮತ್ತು ಗ್ರಾಮಜೀವನದ ಸೊಬಗನ್ನು ಸಾರುವ "ಕೋಮಸ್" ಪ್ರಕಟವಾದುದು. "ಲಿಸಿಡಾಸ್" ಇವನ ಗೆಳೆಯ ಎಡ್ವರ್ಡ್‌ಕಿಂಗ್‌ನನ್ನು ಕುರಿತು ಬರೆಯಲ್ಪಟ್ಟಿದೆ.

೧೬೩೭ರಲ್ಲಿ ಇವನಿಗೆ ಮಾತೃವಿಯೋಗವಾಗಲು ಬೇಸರದಿಂದ ಯೂರೋಪ ಖಂಡವನ್ನೆಲ್ಲಾ ಸುತ್ತಿದನು. ಆದರೆ ಇವನಿಗೆ ಎಲ್ಲಾ ಕಡೆಯಲ್ಲಿಯೂ ಗೌರವದ ಆತಿಥ್ಯವೇ ದೊರಕಿತು. ಆಗ ಹಲವು ರಾಜಕಾರಣಿಗಳ, ಪ್ರಸಿದ್ಧ ಸಾಹಿತಿಗಳ, ವಿಜ್ಞಾನಿಗಳ ಪರಿಚಯವಾಯಿತು. ಇಟಲಿಯ ಸಂಗೀತಮಯವಾದ ಊರುಗಳ ಹೆಸರುಗಳು ಇವನ ಮನಸ್ಸನ್ನು ಸೂರೆಗೊಂಡುವು. ಗ್ರೀಕ್, ರೋಮ್ ನಗರಗಳ ವೈಭವಗಳನ್ನು ಗುರುತಿಸಿಕೊಂಡನು.

ಈ ಕಾಲದಲ್ಲಿ ಇಂಗ್ಲೆಂಡಿನಲ್ಲಿ ರಾಜಕೀಯ ಕ್ರಾಂತಿಯಾಗಲು ಇವನು ಅಲ್ಲಿಗೆ ಹಿಂತಿರುಗಿದನು.

೧೬೪೩ರಲ್ಲಿ ಇವನು ಮೇರಿ ಪೊವೆಲ್ ಎಂಬುವಳನ್ನು ಮದುವೆಯಾದನು. ಆದರೆ ಅವಳು ಇವನನ್ನುತೊರೆದುಹೋದಳು. ಇದರಿಂದ ನಿರಾಶೆಗೊಂಡ ಮಿಲ್ಟನ್ "ಡೈವೋರ್ಸ್" ಎಂಬ ಕವನವನ್ನು ಬರೆದನು.

೧೬೪೫ರಲ್ಲಿ ಪೊವೆಲ್ ಹಿಂತಿರುಗಿಬಂದಳು. ಇವನಿಗೆ ಮೂವರು ಕುವರಿಯರನ್ನಿತ್ತು ೧೬೫೩ರಲ್ಲಿ ಸತ್ತಳು. ೧೬೪೪ರಲ್ಲಿ ಇವನ ಗದ್ಯಕಾವ್ಯ "ಏರಿಯೋಪಗಿಟಿಕ" ಪ್ರಕಟವಾಯಿತು.

೧೬೪೯ರಲ್ಲಿ ಒಂದನೇ ಚಾರಲ್ಸ್ ದೊರೆಯ ಪದಚ್ಯುತಿ ಮತ್ತು ವಧೆಯಾದನಂತರ ಇವನು ಕಾಮನ್‌ವೆಲ್ತಿನ ಲ್ಯಾಟಿನ್ ಸೆಕ್ರೆಟರಿ ಆದನು. ಈತನು ಈ ಕಾಲದಲ್ಲಿ ಅನೇಕ ಪ್ರಬಂಧಗಳನ್ನೂ, ಗತಿಸಿದ ಪ್ರಭುವಿನ ವಿರೋಧವಾದ ವಿಮರ್ಶೆಗಳನ್ನೂ ಪ್ರಕಟಿಸಿದನು.

೧೬೫೨ರಲ್ಲಿ ಮಿಲ್ಟನ್ ಸಂಪೂರ್ಣ ಕುರುಡನಾದನು. ಇವನ ಅಂಧ್ಯವು ಇವನ ಲ್ಯಾಟಿನ್ ಸೆಕ್ರೆಟರಿ ಸ್ಥಾನಕ್ಕೆ ಅಡ್ಡಿಬರಲಿಲ್ಲ. ಕವಿ "ಆಂಡ್ರೂಸ್‌ಮಾರ್ವೆಲ್" ಇವನಿಗೆ ನೆರವಾದನು.

೧೬೫೬ರಲ್ಲಿ ಮಿಲ್ಟನ್‌ಗೆ ಎರಡನೆಯ ಮದುವೆ ಆಯಿತು. "ಕ್ಯಾಥರೀನ್‌ವುಡ್ ಕಾಕ್" ಎಂಬುವಳೇ ಇವನ ಹೆಂಡತಿ. ಈಕೆಯೂ ಮದುವೆಯಾದ ಹದಿನೈದು ತಿಂಗಳಿಗೇ ಮರಣಹೊಂದಿದಳು.

೧೬೬೦ರಲ್ಲಿ ಎರಡನೇ ಚಾರಲ್ಸನು ಸಿಂಹಾಸನವನ್ನು ಏರಲು ಮಿಲ್ಟನ್ ತನ್ನ ಪದವಿಯನ್ನು ಕಳೆದುಕೊಂಡನು. ಈ ಕಾಲವು ಇವನಿಗೆ ಬಹಳ ಕಷ್ಟಕರವಾಗಿದ್ದಿತು.

ಇವನ ಕೃತಿಗಳು ಹಲವಾರು ಸುಡಲ್ಪಟ್ಟುವು. ಇವನ ಪ್ರಾಣಕ್ಕೂ ಅಪಾಯ ಪರಿಸ್ಥಿತಿಯೊದಗಿತ್ತು. ಆದರೆ ಬಹಳ ಕಷ್ಟದಿಂದ ರಾಜನ ಕ್ಷಮೆಯನ್ನು ಗಳಿಸಿ ಕೊಂಡನು.

೧೬೬೩ರಲ್ಲಿ ಪುನಃ ಮೂರನೇ ಮದುವೆ ಆದನು. ಈ ಕಾಲದಲ್ಲೇ ವಿಶ್ವವಿಖ್ಯಾತ ವಾದ ಮಹಾಕಾವ್ಯ "ಪ್ಯಾರಡೈಸ್ ಲಾಸ್ಟ್", "ಪ್ಯಾರಡೈಸ್ ರೀಗೆಯಿನ್ಡ್" ಮತ್ತು "ಸ್ಯಾಂಸನ್ ಅಗೋನಿಸ್ಟಸ್"ಗಳು ಪ್ರಕಟವಾದವು.

"ಪ್ಯಾರಡೈಸ್ ಲಾಸ್ಟ್" ಕೃತಿ ಇವನ ಕೃತಿಗಳಲ್ಲೆಲ್ಲಾ ಅತಿ ದೊಡ್ಡದು. ಗಾತ್ರ ದಲ್ಲಿ ಮಾತ್ರವಲ್ಲ; ಮಹತ್ತಿನಲ್ಲಿಯೂ ಸಹ. ಇದನ್ನು ಸಿದ್ಧಪಡಿಸಲು ಜೀವಮಾನ ವೆಲ್ಲಾ ಕಳೆಯಿತು. ೧೬೫೮ರಲ್ಲಿ ಆರಂಭಿಸಿದ ಇದರ ರಚನೆ ೧೬೬೭ರವರೆಗೂ ನಡೆಯಿತು. ಈ ಮೂರು ಕಾವ್ಯಗಳೂ "ಪ್ಯೂರಿಟಾನಿಸಂ"ನ ಮೂರು ರತ್ನಗಳಾಗಿ ಇಂದಿಗೂ ಮೆರೆಯುತ್ತಿವೆ.

ಮಿಲ್ಟನ್ನನು ಅವನ ಗ್ರಂಥಗಳಲ್ಲಿ ಕಡೆಯದಾದ "ಸ್ಯಾಂಸನ್ ಅಗೋನಿಸ್ಟಸ್" ಪ್ರಕಟವಾದ ಮೂರು ವರ್ಷಗಳ ನಂತರ ಅಂದರೆ ೧೬೭೪ರಲ್ಲಿ. ತನ್ನ ೬೬ನೇ ವರ್ಷದಲ್ಲಿ ತನ್ನ ಸಾರ್ಥಕವಾದ ಜೀವನಕ್ಕೆ ಮಂಗಳವನ್ನು ಹಾಡಿದನು. ಈ ಕವಿ ಚಕ್ರವರ್ತಿಯ ಕೀರ್ತಿಯು ಎಂದೆಂದಿಗೂ ನೂತನವಾಗಿಯೆ ಇದೆ.

ಸ್ಯಾಂಸನ್—ಸೆರೆಯಾಳಾಗಿ, ಕುರುಡನಾಗಿ, ಈಗ ಗಾಜದ ಕಾರಾಗೃಹದಲ್ಲಿ ಖೈದಿ ಸಾಮಾನ್ಯರ ಜೊತೆಯಲ್ಲಿ ದುಡಿಯುತ್ತಾ ಹಬ್ಬದ ದಿನದಂದು ವಿಶ್ರಾಂತಿ ದೊರೆತಕಾರಣ, ಅನತಿ ದೂರದ ತೆರವು ತಾಣಕ್ಕೆ, ಆಯಾಸ ಪರಿಹಾರಕ್ಕಾಗಿಯೂ ತನಗೊದಗಿ ಬಂದ ಪರಿಸ್ಥಿತಿಯನ್ನು ಕುರಿತು ಕೆಲಕಾಲ ಒಬ್ಬನೇ ಕುಳಿತು ವಿಲಪಿಸು ವುದಕ್ಕೂ ಬರುತ್ತಾನೆ. ಅಲ್ಲಿಗೆ ಆಗ ಅವನ ಆಪ್ತರೂ ಇಷ್ಟರೂ—ನಾಟಕದಲ್ಲಿನ ಮೇಳದವರು—ಬಂದು ತಮಗೆ ಸಾಧ್ಯವಾದಷ್ಟು ಸಮಾಧಾನ ನೀಡಲು ಯತ್ನಿಸು ತ್ತಾರೆ. ವೃದ್ಧ ತಂದೆ ಮನೋವನೂ ಅಲ್ಲಿಗೆ ಬಂದು ಅವರಂತೆಯೇ ಸಮಾಧಾನ ವಚನಗಳನ್ನಾಡಿ, ಫಿಲಿಸ್ಟನರಿಗೆ ಪರಿಹಾರ ದ್ರವ್ಯವನ್ನು ನೀಡಿ ಸ್ಯಾಂಸನ್ನನನ್ನು ಬಿಡಿಸಿಕೊಳ್ಳುವ ತನ್ನ ಇಚ್ಛೆಯನ್ನು ವ್ಯಕ್ತಪಡಿಸುತ್ತಾನೆ. ಫಿಲಿಸ್ಟನರು ಆ ದಿನ ಆಚರಿಸುತ್ತಿರುವ ಹಬ್ಬವು ಸ್ಯಾಂಸನ್ನನ ಕೈಯಿಂದ ತಮ್ಮನ್ನು ವಿಮೋಚನೆ ಗೊಳಿಸಿದ್ದುದಕ್ಕಾಗಿ ತಮ್ಮ ದೇವರಿಗೆ ಅರ್ಪಿಸುತ್ತಿರುವ ಕೃತಜ್ಞತಾರೂಪವಾಗಿರುವು ದೆಂದೂ, ಆದರಿಂದ ತನಗೆ ಮತ್ತೂ ವ್ಯಥೆಯೇರ್ಪಟ್ಟಿರುವುದೆಂದೂ ತಿಳಿಸುತ್ತಾನೆ. ನಂತರ ಫಿಲಿಸ್ಟನ್ ಪ್ರಭುಗಳಲ್ಲಿ ಸ್ಯಾಂಸನ್ನನನ್ನು ಬಿಡಿಸಿಕೊಳ್ಳುವ ಸಂಧಾನವನ್ನು ಮುಂದುವರಿಸಲು ತೆರಳುತ್ತಾನೆ. ಈ ಮಧ್ಯೆ ಇನ್ನೂ ಕೆಲವರು ಸ್ಯಾಂಸನ್ನನಿಗೆ ಭೇಟಿಯಾಗುತ್ತಾರೆ. ಅಂತ್ಯದಲ್ಲಿ ಓರ್ವ ಫಿಲಿಸ್ಟನ್ ಅಧಿಕಾರಿಯು ಅವನೆಡೆಗೆ ಬಂದು ಸ್ಯಾಂಸನ್ನನು ಹಬ್ಬಕ್ಕೆ ನೆರೆದಿರುವ ಉನ್ನತರ ಮತ್ತು ಸಾಮಾನ್ಯರ ಮುಂದೆ ತನ್ನ ಶಕ್ತಿಸಾಮರ್ಥ್ಯಗಳ ಪ್ರದರ್ಶನವನ್ನು ನೀಡಬೇಕೆಂದು ತಿಳಿಸುತ್ತಾನೆ.

ಇದಕ್ಕೆ ಸ್ಯಾಂಸನ್ನನು ಮೊದಲು ಸಮ್ಮತಿಸದೆ ಅಧಿಕಾರಿಯನ್ನು ಬಂದಂತೆ ಹಿಂತಿರುಗಿಸುತ್ತಾನೆ. ಇದೊಂದು ದೈವಪ್ರೇರೇಪಣೆಯೆಂದು ಸ್ಯಾಂಸನ್ನನ ಮನವು ನುಡಿಯಲು, ಅವನು ಮತ್ತೊಮ್ಮೆ ಅಲ್ಲಿಗೆ ಬಂದು ಫಿಲಿಸ್ಟನ್ ಅ ಕಟ್ಟಾಣತಿಯನ್ನು ಅರುಹಿದ ಅಧಿಕಾರಿಯೊಡನೆ ಸಭೆಗೆ ಹೊರಡುತ್ತಾನೆ. ಮ ನಿಂತೆಡೆಯೇ ಇರುತ್ತದೆ. ಮಗನ ಬಿಡುಗಡೆಯ ಭರವಸೆಯನ್ನು ಕೊಂಡು ಸಂ ದಿಂದ ಹಿಂತಿರುಗಿದ ಮುದಿ ಮನೋವನೂ ಅಲ್ಲಿಗೆ ಬಂದು ಸೇರುತ್ತಾನೆ.

ಅವರುಗಳಲ್ಲಿ ಸಂಭಾಷಣೆಯು ನಡೆಯುತ್ತಿರುವಾಗಲೇ ಏಬ್ರಿಯನೊಬ್ಬ ಅಲ್ಲಿಗೆ ಓಡಿಬರುತ್ತಾನೆ. ತಮ್ಮವರನ್ನು ಕಂಡು ತುಸು ಸಮಾಧಾನಗೊಂ ಮೊದಲಿಗೆ ಆತುರಾತುರವಾಗಿಯೂ, ನಂತರ ವಿಸ್ತಾರವಾಗಿಯೂ ಫಿಲಿಸ್ಟನ ಸ್ಯಾಂಸನ್ನನು ಮಾಡಿದ ಪ್ರತೀಕಾರವನ್ನೂ, ಕಡೆಗೆ ಈ ಪ್ರಯತ್ನದಲ್ಲಿ ಅವ ಅಪಘಾತಕ್ಕೊಳಪಟ್ಟುದನ್ನೂ ನಿರೂಪಿಸುತ್ತಾನೆ. ರುದ್ರಕಾವ್ಯವು ಕೊನೆಗೊ ತ್ತದೆ.

## ಪಾತ್ರಗಳು

ಸ್ಯಾಂಸನ್
ಮನೋವಂ—
ಡಲೈಲ— ಸ್ಯಾಂಸನ್ನನ ತಂದೆ
ಹರಪ್ಪ— ಸ್ಯಾಂಸನ್ನನ ಹೆಂಡತಿ
— ಗಾಥಿನ ಜಗಜಟ್ಟಿ
ಚಾರ ಫಿಲಿಸ್ಟನರ ಅಧಿಕಾರಿ
ಡೆನ್ಯೆಟನ ಮೇಳದವರು

ಸ್ಥಳ:
ಗಾಜಾದ ಕಾರಾಗೃಹದ ಮುಂದಿನ ಸಮುದ್ರದ ತೀರಪ್ರದೇಶ

ಮೇಣವನು ಪೊಗಳುವೆನೆ, ನೀ ವಾದಗೆಯ್ವೆಯಲ-
ಸಮಯ ಕಾಯ್ದರಿಗಳಲಿ ಸಲೆ ಕಾದುವುದಕೆಂದು
ಒಳಮನವ ದೈವ ತಾ ತುಡಿಸಿ ಸೂಚಿಸಿತೆಂದು
ಒಪ್ಪೆ ನಾನವನು ಮೇಣ್ ಇದುಮಾತ್ರ ಸಿದ್ಧಮಲ.
ಅರಿಗಳವಕಾಶಕ್ಕೆ ಇವು ಮೂಲ ತಾವಾಯ್ತು-
ನಿನ್ನ ಕೈಸೆರೆಪಿಡಿಯೆ ; ಅವರಿಂಗೆ ವಿಜಯವಿದು.
ಕಾಮುಕ್ಕೆ, ಸೊಬಗಿಂಗೆ, ಸಂಯಮವ ಕಡಿದೋತು
ಸೌಖ್ಯದಿಂ ರಕ್ಷಿಸಲು ನಿನ್ನಂಕೆಯೊಳು ಬಿಟ್ಟ
ಪೂತಮಿಾ ಗೂಢತರ ನಿಧಿಯ ನೀ ಬಯಲ್ಗೈದೆ ;
ದಿಟಮಿದಕೆ ಸಾಟಿಯಹ, ಮಿಗಿಲೆನಿಪ ಫಲವಿದನು
ದಂಡನೆಯ ನೀ ಕೊಂಡೆ ಕಟುತರದ ಋಣವಿದನು
ಕಷ್ಟದಿಂ ಕಟ್ಟಿರುವೆ ; ಇನ್ನು ಕಟ್ಟುತ್ತಿರುವೆ !
ಇದಕಿಂತ ಹೀನಕರ ಸಂಘಟನೆ ಕಾದಿಹುದು.
[1]ಫಿಲಿಸ್ಟನರೀ ದಿನಂ ಪರ್ಬವಾಚರಿಸಿಹರು
ಗಾಜದೀಯೂರಲ್ಲಿ, ಯಾಗ ಭೋಗಂಗಳಿಂ
ಮಂತ್ರಹೊಗಳಿಕೆಗಳಿಂ, ಡೇಗನ್ನದೇವತೆಗೆ-
ಅಂಥನೀ ಬಂದಿಯಿಾ ಸ್ಯಾಂಸನ್ನಕಯ್ಗಿತ್ತ
ದಣಿಯೆಂದು, ತಮ್ಮಗಳ ತರತರದಿ ತರಿದವನ
ಕರದಿಂ ಪೊರೆದನೆಂದು ! ಪೆರ್ಮೆಗೀಡಾದಪಂ
ಡೇಗನ್ನನ್ ; ಎಮ್ಮದೊರೆ—ಅವಗೆ ಮಿಾರಿಹರುಂಟೆ !-
ಸಾಮಾನ್ಯ ದೇವತೆಯ ಸಾಮತಿಗೆ ಸರಿದಿಹನು
ದೇವತಾರಾಧಕರ, ಮಧುಮತ್ತರಿವರಿಂದ
ಅಪನಿಂದೆ, ಅಪಹಾಸ್ಯ, ಅಪಯಶಕೆ ವಶನಾಗಿ
ಭವಜನ್ಯ ಕರ್ಮವಿದು, ಬನ್ನಗಳಲತಿನಿಂದ್ಯ
ಮೆಂದಿಗುಂ ನಿನಗು ಮೇಣ್ ಎಮ್ಮ ಅನ್ವಯಕು.

ಸ್ಯಾಂಸನ್

ಇವನು ಒಪ್ಪುವೆ ಪಿತನೆ ; ಇವು ಎನ್ನ ತಪ್ಪುಗಳು
ಮನ್ನಣೆಯ ತಂದೆ ಮೇಣ್ ಉನ್ನತಿಯನಿತ್ತೆನಾ

1 ಡೇಗನ್ಗೆ ಫಿಲಿಸ್ಟನರು ಇಂದು 'ಸ್ಯಾಂಸನ್ನನನ್ನು ತಮಗಿತ್ತ ಮಹೋನ್ನತನೆಂದು ಸ್ತುತಿಸುತ್ತಾ ಆಚರಿಸುತ್ತಿರುವ ಹಬ್ಬ ಇಸ್ರೇಲಿನವರಿಗೆಲ್ಲ ತಲೆತಗ್ಗಿಸುವಂತಹ ಸಂಭವ. ಇದಕ್ಕೆ ಕಾರಣ ಸ್ಯಾಂಸನ್ !

ಡೇಗನ್ಗೆ ; ಪೆರ್ಚಿಸಿದೆ ಹಿರಿಮೆ ಹೊಮ್ಮುವ ತೆರನೆ,
ಹೀನಕುಲಜನ್ಯರಲಿ, ನಾಸ್ತಿಕಾಗ್ರೇಸರರ,
[1]ದೇವತಾ ಪೂಜಕರ ನಾಲಿಗೆಯಲಾಡಿಸಿದೆ
ಎಮ್ಮ ದೊರೆಯುಪಯಶವ ; ನಿಂದೆಯುಪಹಾಸ್ಯವನು,
ದ್ರೋಹವುನ್ ದೇವಂಗೆ, ಭಂಗಮುನ್ ಇಸ್ರೇಲ್ಗೆ
ನಾನೆ ತಾನ್ ತಂದಿಹೆನ್ ; [2]ದುರ್ಬಲದ ಹೃದಯದಲಿ
ಸಂಶಯವ ಬಿತ್ತಿದೆನ್ ನಿರ್ಧರಿಪ ಮುನ್ನಮೇ
ತೊರೆದವನ ನಂಬುಗೆಯು ಸೇರಲಾರಾಧಕರ ;
ಇವೆಯೆನ್ನ ಕೊರತೆಗಳು ; ಅಪಮಾನ ; ದುಃಖಗಳು
ಹೃದಯವನ್ನಿರಿಯುತಿವೆ ; ಮನವನ್ನು ಕೊರೆಯುತಿವೆ.
ನಿದ್ದೆಗೀಯವು ಕಣ್ಣ ; ಶಾಂತಿಗೊಯ್ಯದು ಮನವ.
*ಈ ಪೀಡೆಗಳಿಗಂತ್ಯ ಎನ್ನಂತ್ಯದೊಡನೆಂದು
ಮನದ ಭಾವಗಳೆನಗೆ ಧೃತಿಯನ್ನು ನೀಡುತಿದೆ!
ಈಗಿರ್ಪುದೀ ಸ್ಪರ್ಧೆ ಡೇಗನ್ಗು ದೇವಂಗು ;
ಎನ್ನ ಕೆಳಕೆಡಹುತ್ತ ದೇವಪಂಕ್ತಿಗೆ ತನ್ನ–
ಅಬ್ರಹಾಂ ದೈವಕ್ಕೆ ತೋರಲ್ಕೆ ಸಾಮ್ಯವನು
ಸೇರಿಸಲು ಎಳಸಿದನೊ ತಿಳಿಗೇಡಿ ಡೇಗನ್ ?
ತೆಪ್ಪಗಿರ್ಪನೆ ದೇವನೊಪ್ಪುವನೆ ಅಪಜಯವ?
ಕೋಪದಿಂ ಕುದಿದೆದ್ದು ಕಾಯ್ದಪನು ಕೀರ್ತಿಯನು.
ತಗ್ಗುವನು ಡೇಗನ್ನ ; ಕೊಂಡಿರ್ಪ ಹಮ್ಮುಗಳ
ಎನ್ನ ಮೇಲ್ಪಿಜಯಗಳ ಕಳಚಿ ಶರಣೆನಬೇಕು–
ಸಮಯ ತಳುವದೆ ಇವಗೆ, ತನ್ನವರ ಸೊಲ್ ನಿಲಿಸಿ!

ಮನೋಃವಂ

ಸೂಕ್ತವಿದು ಭಾವನೆಯು ; ಶಾಂತಿಯೀವುದು ಮನಕೆ.

---

[1] ದೇವತಾಪೂಜಕರು, ನಾಸ್ತಿಕಾಗ್ರೇಸರರು ಎಂದರೆ ಪರಸ್ಪರ ವಿರುದ್ಧದ ಪದವೆಂದು ತಿಳಿದಲ್ಲಿ ಅದು ತಪ್ಪು. ಸ್ಯಾಂಸನ್ನನ ದೇವರ(ಸರ್ವಶಕ್ತ !)ನ್ನು ನಂಬದವರು ನಾಸ್ತಿಕಾಗ್ರೇಸರರು. ಕಿರಿದಪ್ಪದೇವತೆಗಳನ್ನು ಪೂಜಿಸುವವರು ದೇವತಾಪೂಜಕರು. ಡೇಗನ್ ಸ್ಯಾಂಸನ್ನನಿಗೆ ಒಂದು ಕ್ಷುದ್ರದೇವತೆ ತಾನೆ!

[2] ಮನುಷ್ಯನ ದುರ್ಬಲಮನಸ್ಸಿಗೆ ಈಗಾಗಲೇ ತನ್ನ ನೆಚ್ಚಿನ ಭಟ ಸ್ಯಾಂಸನ್ನನನ್ನು ಶತ್ರುಹಸ್ತಕ್ಕೆ ಕೊಟ್ಟು ದೇವರು ತನ್ನ ಭಕ್ತರಲ್ಲಿ ತನಗಿರುವ ನಂಬಿಕೆ ಭರವಸೆಗಳನ್ನು ಅಳಿಸಿ ಹಾಕಿದ್ದಾನೆ. ಇದರ ಪರಿಣಾಮ ಅವನ ಭಕ್ತರುಗಳು ಕ್ಷುದ್ರದೇವತೆಗಳ ಅನುಯಾಯಿಗಳಾಗಿ ಬಿಡುವರೆಂಬ ಸಂದೇಹ!

ತಳೆವೆಸಿದ ಶಿರದಿ ದೈವವಾಣಿಯು ತೆರದಿ.
ಸ್ಪರ್ಧಿಗಳ ಮರ್ದಿಸಲ್, ವರ್ಧಿಸಲು ನಿಜಯಶವ
ಕಳೆಯನಿವ ಸಮಯವನು (ಇದಕೆ ಸಂದೆಗವಿಲ್ಲ!)
*ಡೇಗನೋ ದೇವನೋ ದೊರೆಯೆಂಬ ಸಂಶಯವ
ಇರಿಸನಹ ಪಲಕಾಲ; ನಿನಗೇನ ಗೆಯ್ವಪುದು.
ಮರೆವೆನೇ; ತೊರೆದಪೆನೆ, ಕಳೆದಪನೆ ಕೊಳಕಿನಲಿ;
ದುಗುಡದಲಿ ಒರಗಿರಲು ನಿನ್ನನೀ ತಾಣದಲಿ.
ಫಿಲಿಸ್ಟನ್ ಪ್ರಭುಗಳಲಿ ನಾನಾಗಲೇಗೆಯ್ದೆ
ನಿನ್ನ ಬಿಡೆ ಪರಿಹಾರನಿಧಿ ವ್ಯವಹಾರವನು
ತೃಪ್ತಿಗೊಂಡಿರಬಹುದು ಭಂಗಪ್ರತೀಚ್ಛೆಯಿಂ;
ಘಾಸಿಯುಂ, ದಾಸ್ಯವಂ, ಮಿತ್ತುವಿಗು ಮಿಗಿಲಿತ್ತು
ಸಾಕಷ್ಟು ನರಳಿಸುತ; ನೀನೆಂದು ಮುಂದೆಯೂ
ಅವರಿಂಗೆ ತೊಂದರೆಯ ಮಾಡದಿಹೆಯೆಂದು.

ಸ್ಯಾಂಸನ್

ಸಲಹೆಯನು ಒಲ್ಲೆನೈ, ಸಲ್ಲದೀ ವ್ಯವಹಾರ
ಕೋಟಲೆಯು; ಉಳಿವೆನೈ ಪಿತನೆ ನಾನಿಲ್ಲಿನ್ನು
ತಗುವ ದಂಡನೆಯಾಂತೆ. ಇನ್ನು ಮಿಕ್ಕಿಹುದೆನ್ನ
ಬಾಯ್ಬಡುಕತನಕಲಾ! [1]ಮನ್ನೆಯರ ಗೂಢಮಂ,
[2]ಕೆಳೆಯುಪ್ಪಗೋಪ್ಯಮುಂ ಗಳಹಿಡೆನ್; ನಾಣಿಲಿಯ
ಕಾರ್ಯಮುಂ ಗೆಯ್ದೆನಲ! ನಿಂದನೆಯು, ದಂಡನೆಯು
ಎನಿತರ್ಹಮೆನಗಿಂದು. ಕೆಳೆತನಕನರ್ಹಂ,[3]
ಬಾಯ್ಬಡುಕನಿವನೆಂದು ಎಲ್ಲರಿಂ ಬೇರಾಗಿ
ಮೂರ್ಖನಿವನೆಂದೆಂಬ ಲಿಪಿತಳೆದೆ ಮೊಗದಲ್ಲಿ.

---

* ಕವಿ ಈ ನುಡಿಗಳ ಮೂಲಕ ನಾಟಕದ ಅಂತ್ಯವನ್ನು ಸೂಚಿಸುತ್ತಿದ್ದಾನೆ. ಇದು ಸಹಜವಾಗಿ ಬರುವ ನುಡಿಗಳಾದರೂ ಈ ವಿಶೇಷಾರ್ಥವನ್ನು ಕಂಡುಕೊಳ್ಳಬಹುದು.

1 ಗೋಪ್ಯವನ್ನು ಕಾಪಿಟ್ಟುಕೊಳ್ಳುವುದು ತಾನೊಬ್ಬನೇ ಅಲ್ಲ, ಎಲ್ಲ ಮನ್ನೆಯರಿಗೆ ಆವಶ್ಯಕವೆಂಬುವ ಅರ್ಥ.

2 ದೇವನು ತನ್ನ ಕಾಪಿಗೋಸ್ಕರವಾಗಿ ಕೂದಲನ್ನು ಕೊಟ್ಟಿದ್ದಾನೆ. ಇದು ಸ್ಯಾಂಸನ್ನನ ಗೆಳೆಯನಂತೆಯೇ ಸರಿ.

3 ತನ್ನ ಗೆಳೆಯನೆನ್ನುವಂತಿರ್ಪ ಗೂಢವನ್ನು ಬಯಲ್ಗೈದು ಗೆಳೆತನಕ್ಕೇ ದ್ರೋಹಮಾಡಿ ನೆಂಬುವ ಅರ್ಥ.

ದೈವವಾರಿಸಲೆನ್ನ. ಪೂತವಿಾ ರಹಸ್ಯಮಂ
ಸಿಗ್ಗ ನಿರ್ಲಕ್ಷಿಸುತ, ನಂಬಿಕೆಯ ಕೊಡಹುತ್ತ
ದುರ್ಬಲತೆ, ಅಪಮಾನಕಾಳಾಗಿ ಬಯಲ್ಗೈದೆ.
ಅಕ್ಷಮ್ಯ ದುಷ್ಕೃತವ, [1]ಜೆಂಟೈಲರೀ ಕೃತಿಯ
ಪುರಾಣಗ್ರಂಥದಲಿ ತೀಕ್ಷ್ಣದಿಂ ಖಂಡಿಪರು—
ನರಕಾರ್ಹ ಮೇಣುಗ್ರ ಶಿಕ್ಷಾರ್ಹ ತಪ್ಪೆನುತ.

ಮನೋವಂ

ತಪ್ಪಗೆಯ್ದುದಕಿನ್ನು ಪಶ್ಚಾತ್ತಪಿಸು, ಸುತನೆ,
ದುಗುಡದೊಳು ದುಡುಕದಿರು ; ಪಾಪಕ್ಕೆ ಮಿಡುಕುತಿರು.
ಶಿಕ್ಷೆಯನು ತಡೆಯುದೊಡೆ ಸಂಯಮವೆ ಕಾಯ್ವಪುದು
ಇಲ್ಲದಿರೆ ಮಹದಂಶ ತಾನೆ ನೀಡಲಿ ತೀರ್ಪ.
ನಿನ್ನದಲ್ಲದ ಬೇರೆ ಕರವೊಂದು ಸಾರಲ್ಕೆ
ನಿರ್ಣಯವ ತಪ್ಪಿಂಗೆ, ನಿನ್ನದನು ಮಾಣ್ದುಕೊಳ್
ದೇವ ಕೊರೆಗೆಯ್ದಪನೊ, ನಿಜಋಣದಿ ಕಳೆದಪನೊ
ಅವನ ನಂಬಿದವರ್ಗೆ ಅವನನೊಪ್ಪಿದವರ್ಗೆ,
ರಕ್ಷಣೆಯ ಬೇಡ್ವವರ್ಗೆ, ದಯೆಯ ಮಿಗೆ ಕೋರ್ವರ್ಗೆ
(ದಾಸೋಹಮೆಂಬುವರ ಲೇಸಾಗಿ ಪಾಲಿಪಂ !)
[2]ತನ್ನ ದಂಡಿಸಿಕೊಂಡು, ಮರಣಮೇ ಶರಣೆಂಬ
ನರರ ತಾನೊಪ್ಪನವ ; ಅತಿನ್ಯಾಯವಿದು ಆಯ್ತು !
ತೃಪ್ತಿತಾ ದೊರಕದಲ. ದೈವಘಾತಕೆ ಮಿಗಿಲ್
ಆತ್ಮಘಾತಮಿದಾಯ್ತು ! ಅದರಿಂದ ತಡೆಯದಿರು,
ದೈವ ನಮಗಿತ್ತಿರುವ ಪರಿಹಾರಮಾರ್ಗವನು.
ತೆರಳಿಸುತ ನಿನ್ನಂ ಮರಳಿ ತಾಯ್ನಾಡಿಂಗೆ
ನೀನವನ ತುತಿಸಲ್ಕೆ ಕಾಣ್ಕೆಗಳ ಸಲಿಸಲ್ಕೆ
ಶಿಕ್ಷೆಗಳ ತಪ್ಪಿಸಲು ನೀನವನ ಪೂಜಲ್ಕೆ
ಆರರಿತರೀ ಹದನ್ ದೈವವಿತ್ತಿಹುದೆಂದು !

(ಸಶೇಷ)

[1] ಜೆಂಟೈಲರು—ಯೆಹೂದ್ಯರಲ್ಲದ ಜನರು.

[2] ತನ್ನ ತಪ್ಪಿಗೆ ತಾನೇ ಪ್ರಾಯಶ್ಚಿತ್ತ ವಿಧಿಸಿಕೊಳ್ಳುವವರನ್ನು ಕವಿ ತಾತ್ಸಾರದಿಂದ ನೋಡುತ್ತಾನೆ. ದೈವನಿಯಮಕ್ಕೆ ಎಲ್ಲರೂ ತಲೆಬಾಗಲೇ ಬೇಕು. ಅದಕ್ಕೆ ಮೀರಿದವರು ಆತ್ಮಘಾತ ಮಾಡಿಕೊಂಡಂತೆ ಎನ್ನುವುದು ಆತನ ಭಾವ. ಈ ತತ್ವವೂ ನಮ್ಮ ತತ್ವವೂ ಎಷ್ಟು ಸಮೀಪದವು !

# ಪೂಜಾರಿ

ಅಲ್ಲಿ, ಗುಡಿಯಲ್ಲಿ
ಸರಿಸಿ ಬಟ್ಟೆಯ ಪರದೆ
ಕತ್ತಲೆ ಗವಿಯ ಹೊಕ್ಕು
ಅಳ್ಳಾಡಿಸಿ ಗಂಟೆ
ಹನಿಸಿರುವೆ ಅಷ್ಟಷ್ಟು ತೀರ್ಥ.
ಹಾ! ಎನಿಸಿದಾಗ
ಉಟ್ಟಬಟ್ಟೆಯ ಕಳೆದು ಕುಣಿದಿರುವೆ;
ಮಬ್ಬಟ್ಟೆಯೊಳೆಚ್ಚರವಿಹ ಶಿಷ್ಟ
ಕೊಂಚ ಅವಾಂತರ ಅಷ್ಟೆ.
ಈ ಗಾಳಿ, ಚಳಿ, ಈ ಮಳೆಯಲ್ಲಿ
ಬೇಕು–ಅಂತದೇ ಕಸರತ್ತು.
ಹಲವು ವೇಷವ ಕಟ್ಟಿ
ಆರಾಧಿಸಿರುವೆ, ಎಲ್ಲ ಬಗೆ ದೇವತೆಗಳ
ಹೌದು, ರೂಢಿಯೆ ಅಷ್ಟು. ಸಂಪ್ರದಾಯವೆ ಹಾಗೆ
ನೀನೇನು ಇದಕ್ಕೆ ಅಪವಾದವಲ್ಲ.
ಓ! ಬ್ರಹ್ಮಚಾರಿ
ಬೇಡಯ್ಯ ಅಷ್ಟೊಂದು ದೇವರ ಪರ್ಮಿಟ್ಟಿಲ್ಲವೂ ನಿನಗೆ
ತೆಗೆದುಕೋ ಬಿಡುವ.
ಕಾದು ಕುಳಿತಿದ್ದಾರೆ ನಿನ್ನಂತೆ
ಕೋಟಿ ಪೂಜಾರಿಗಳು ಹೊರಗೆ.

ಸಿ. ಜಿ. ಯುೂಂಗ್

# ಮನೋವಿಜ್ಞಾನ ಮತ್ತು ಸಾಹಿತ್ಯ*

ಮನೋವಿಜ್ಞಾನವು ಮನೋವ್ಯಾಪಾರಗಳ ಅಧ್ಯಯನವಾದುದರಿಂದ, ಅದನ್ನು ಸಾಹಿತ್ಯದ ಅಧ್ಯಯನಕ್ಕೆ ಅನ್ವಯಿಸಬಹುದೆಂಬುದು ಸಾಕಷ್ಟು ಸ್ಪಷ್ಟ; ಏಕೆಂದರೆ, ಮಾನವಮನಸ್ಸು ಎಲ್ಲ ವಿಜ್ಞಾನಗಳ ಮತ್ತು ಕಲೆಗಳ ಜನ್ಮಸ್ಥಾನ. ಮನೋವೈಜ್ಞಾನಿಕ ಸಂಶೋಧನೆ ಒಂದು ಕಡೆ ಒಂದು ಕಲಾಕೃತಿಯ ನಿರ್ಮಾಣವನ್ನು ವಿವರಿಸುತ್ತದೆಂದೂ ಮತ್ತೊಂದು ಕಡೆ ಒಬ್ಬ ವ್ಯಕ್ತಿಯನ್ನು ಕಲಾಸೃಜನಶೀಲನನ್ನಾಗಿ ಮಾಡುವ ಸಂಗತಿಗಳನ್ನು ತೆರೆದು ತೋರುತ್ತದೆಂದೂ ನಾವು ನಿರೀಕ್ಷಿಸಬಹುದು. ಹೀಗಾಗಿ, ಮನೋವಿಜ್ಞಾನಿಗೆ ಎರಡು ವಿಭಿನ್ನವೂ ಸ್ಪಷ್ಟವೂ ಆದ ಕಾರ್ಯಗಳು ಎದುರಾಗುತ್ತವೆ; ಅವುಗಳೊಡನೆ ಅವನು ಮೂಲಭೂತವಾಗಿ ಭಿನ್ನವಾದ ಮಾರ್ಗಗಳಲ್ಲಿ ವ್ಯವಹರಿಸಬೇಕು.

ಒಂದು ಕಲಾಕೃತಿಗೆ ಸಂಬಂಧಿಸಿದಂತೆ ನಾವು ಸಂಕೀರ್ಣಮನೋವ್ಯಾಪಾರಗಳ ಒಂದು ಉತ್ಪನ್ನದೊಡನೆ—ಆದರೆ ಆದು ಉದ್ದೇಶಪೂರ್ವಕವಾಗಿ ಮತ್ತು ಪ್ರಜ್ಞಾಪೂರ್ವಕವಾಗಿ ರೂಪಿತವಾದ ಉತ್ಪನ್ನ—ವ್ಯವಹರಿಸಬೇಕಾಗುತ್ತದೆ. ಮನೋವಿಜ್ಞಾನಿಯ ವಿಷಯದಲ್ಲಾದರೆ ನಾವು ಮಾನಸಿಕ ಉಪಕರಣದೊಡನೆಯೆ ವ್ಯವಹರಿಸಬೇಕು. ಮೊದಲನೆಯ ಸಂದರ್ಭದಲ್ಲಿ, ನಿಶ್ಚಿತವಾದ ಎಲ್ಲೆಕಟ್ಟಿರುವ ಮತ್ತು ಮೂರ್ತವಾದ ಕಲಾಸಾಧನೆಯ ಮನೋವೈಜ್ಞಾನಿಕ ವಿವರಣೆಗೆ ಪ್ರಯತ್ನಿಸಬೇಕು; ಎರಡನೆಯದರಲ್ಲಿ, ಜೀವಂತವಾದ ಮತ್ತು ಸೃಜನಶೀಲವಾದ ಮಾನವ ಚೇತನವನ್ನು ಒಂದು ವಿಶಿಷ್ಟ ವ್ಯಕ್ತಿತ್ವವಾಗಿ ವಿಶ್ಲೇಷಿಸಲು ಪ್ರಯತ್ನಿಸಬೇಕು. ಈ ಎರಡು ಕಾರ್ಯಗಳೂ ನಿಕಟವಾಗಿ ಸಂಬಂಧಗೊಂಡಿದ್ದು ಪರಸ್ಪರ ಅವಲಂಬಿಗಳೇ ಆಗಿದ್ದರೂ, ಅವುಗಳಲ್ಲಿ ಯಾವುದೂ ಕೂಡ ಮತ್ತೊಂದರಿಂದ ಅಪೇಕ್ಷಿತವಾದ ವಿವರಣೆಗಳನ್ನು ನೀಡಲಾರದು. ಕಲಾವಿದನನ್ನು ಕುರಿತು ಕಲಾಕೃತಿಯಿಂದ ಮತ್ತು ಕಲಾಕೃತಿಯನ್ನು ಕುರಿತು ಕಲಾವಿದನಿಂದ ಅನುಮಾನಗಳನ್ನು ಹೊರಡಿಸುವುದೇನೋ ಸಾಧ್ಯ; ಆದರೆ ಈ ಅನುಮಾನಗಳು ಎಂದೂ ನಿರ್ಣಾಯಕವಾಗಿರುವುದಿಲ್ಲ.

* *Modern Man in Search of a Soul* ಗ್ರಂಥದ ಒಂದು ಅಧ್ಯಾಯ.

ಹೆಚ್ಚೆಂದರೆ ಅವು ಸಂಭವನೀಯ ಅಂದಾಜುಗಳೋ ಅದೃಷ್ಟಶಾಲಿ ಊಹೆಗಳೋ ಆಗಿರುತ್ತವೆ. ಗಯಟೆಗೂ ಅವನ ತಾಯಿಗೂ ಇದ್ದ ನಿರ್ದಿಷ್ಟ ಸಂಬಂಧದ ಜ್ಞಾನ, ಫೌಸ್ಟನ "ತಾಯಂದಿರು–ತಾಯಂದಿರು—ಅದೆಷ್ಟು ವಿಚಿತ್ರವಾಗಿ ಕಾಣುತ್ತದೆ!" ಎಂಬ ಉದ್ಗಾರದ ಮೇಲೆ ಸ್ವಲ್ಪ ಬೆಳಕು ಚೆಲ್ಲುತ್ತದೆ. ಆದರೆ ತಾಯಿ ಬಗೆಗೆ ಅವನಿಗಿದ್ದ ಪ್ರೇಮ 'ಫೌಸ್ಟ್' ನಾಟಕವನ್ನೆ ಹೇಗೆ ನಿರ್ಮಿಸಿತೆಂಬುದನ್ನು ಕಂಡುಕೊಳ್ಳಲು ಅದು ನಮಗೆ ನೆರವಾಗುವುದಿಲ್ಲ, ಇಬ್ಬರ ನಡುವಣ ಆಳವಾದ ಬಾಂಧವ್ಯವನ್ನು ವ್ಯಕ್ತಿಯಾದ ಗಯಟೆಯಲ್ಲಿ ನಾವೆಷ್ಟೆ ಸಮರ್ಪಕವಾಗಿ ಗ್ರಹಿಸಿದರೂ ಕೂಡ. ವಿರುದ್ಧ ದಿಕ್ಕಿನಲ್ಲಿ ತರ್ಕಮಾಡುವಲ್ಲಿಯೂ ನಮಗೆ ಹೆಚ್ಚಿನ ಯಶಸ್ಸು ಸಿಗದು. ವ್ಯಾಗ್ನರ್ ಆಗಾಗ ಸ್ತ್ರೈಣವಸ್ತ್ರಗಳನ್ನು ಧರಿಸಬಯಸುತ್ತಿದ್ದ ನೆಂಬ ಸಂಗತಿಯನ್ನು ಗುರುತಿಸಲು ಅಥವಾ ನಿಶ್ಚಿತವಾಗಿ ಅನುಮಾನಿಸಲು ನಮಗೆ ನೆರವಾಗುವಂಥದು *The Ring of the Nibelungs*ದಲ್ಲಿ ಏನೂ ಇಲ್ಲ—ನೈಬೆಲುಂಗರ ವೀರಯುಕ್ತ ಪುರುಷಪ್ರಪಂಚಕ್ಕೂ ವ್ಯಕ್ತಿ ವ್ಯಾಗ್ನರನಲ್ಲಿದ್ದ ರೋಗನಿದಾನ ಸಂಬಂಧವಾದ ಹೆಣ್ಣಿಗತನಕ್ಕೂ ನಡುವೆ ಗುಪ್ತ ಸಂಬಂಧಗಳಿದ್ದರೂ ಕೂಡ.

ಒಂದು ಶಾಸ್ತ್ರದಲ್ಲಿ ನಾವು ನಿರೀಕ್ಷಿಸುವ ಕಠಿಣವಾದ ಹೈತುಕ ಸಂಬಂಧಗಳನ್ನು ಸ್ಥಾಪಿಸಲು ಮನೋವಿಜ್ಞಾನದ ಸದ್ಯದ ಬೆಳವಣಿಗೆಯ ಸ್ಥಿತಿ ನಮಗೆ ಅವಕಾಶವೀಯುವುದಿಲ್ಲ. ನಾವು ಹೇತುವಿಚಾರದೊಡನೆ ವಿಶ್ವಾಸಪೂರ್ವಕವಾಗಿ ಕೆಲಸಮಾಡುವುದು ಸಾಧ್ಯವಾಗುವುದು ಮನೋ–ದೈಹಿಕ ಪ್ರವೃತ್ತಿಗಳ ಹಾಗೂ ಪ್ರತಿವರ್ತನೆಗಳ ವಲಯದಲ್ಲಿ ಮಾತ್ರ. ಮನೋಜೀವನ ಪ್ರಾರಂಭವಾಗುವ ಬಿಂದುವಿನಿಂದ—ಎಂದರೆ, ಹೆಚ್ಚಿನ ಸಂಕೀರ್ಣತೆಯ ಒಂದು ಘಟ್ಟದಲ್ಲಿ—ಮನೋವಿಜ್ಞಾನಿ ಮನಸ್ಸಿನ–ಅದರೆಲ್ಲ ಆಶ್ಚರ್ಯಕರ ಜಟಿಲತೆಯಲ್ಲಿ—ಘಟನೆಗಳ ದ... ವ್ಯಾಪ್ತಿಯುಳ್ಳ ವರ್ಣನೆಗಳಿಂದ ಹಾಗೂ ಹಾಸುಹೊಕ್ಕುಗಳ ಸುಸ್ಪಷ್ಟ ಚಿತ್ರಣದಿಂದ ಸಂತೃಪ್ತನಾಗಿರಬೇಕು. ಹೀಗೆ ಮಾಡುವಲ್ಲಿ ಅವನು ಯಾವುದೇ ಒಂದು ಮಾನಸಿಕ ಕ್ರಿಯೆಯನ್ನು ಪ್ರತ್ಯೇಕವಾಗಿ 'ಅವಶ್ಯಕ'ವೆಂದು ಹೆಸರಿಸುವುದರಿಂದ ದೂರ... ಬೇಕು. ವಸ್ತುಸ್ಥಿತಿ ಹೀಗಿಲ್ಲದಿದ್ದಲ್ಲಿ ಮತ್ತು ಒಂದು ಕಲಾಕೃತಿಯಲ್ಲಿನ ಹಾಗೂ ಕಲಾಸೃಜನಕ್ರಿಯೆಯಲ್ಲಿನ ಹೈತುಕಸಂಬಂಧಗಳನ್ನು ಅನಾವರಣಗೊಳಿಸಲು ಮನೋವಿಜ್ಞಾನಿ ಅವಲಂಬನಯೋಗ್ಯನಾಗಿದ್ದಲ್ಲಿ, ಅವನು ಕಲೆಯ ಅಧ್ಯಯನ ನೆಲೆಯನ್ನೆ ಉಳಿಸದೆ ಅದನ್ನು ತನ್ನ ಸ್ವಂತವಿಜ್ಞಾನದ ಒಂದು ವಿಶೇಷ ಶಾ... ಮಟ್ಟಕ್ಕಿಳಿಸಿಬಿಡುತ್ತಾನೆ. ಮನೋವಿಜ್ಞಾನಿ ಜಟಿಲ ಮನೋಘಟನೆಗಳಲ್ಲಿ ಹೈ... ಸಂಬಂಧಗಳನ್ನು ಪರಿಶೀಲಿಸುವ ಮತ್ತು ಸ್ಥಾಪಿಸುವ ತನ್ನ ಹಕ್ಕನ್ನು ಎ... ಬಿಟ್ಟುಕೊಡದಿರಬಹುದು. ಹಾಗೆ ಮಾಡಿದಲ್ಲಿ ಮನೋವಿಜ್ಞಾನಕ್ಕೆ ಅಸ್ತಿ... ಹಕ್ಕನ್ನೆ ನಿರಾಕರಿಸಿದಂತಾಗುತ್ತದೆ. ಆದರೂ ಅವನು ಈ ಹಕ್ಕನ್ನು ಅದರ ಅ... ಪೂರ್ಣಾರ್ಥದಲ್ಲಿ ಎಂದೂ ಮಂಡಿಸಲಾರ; ಏಕೆಂದರೆ, ಕಲೆಯಲ್ಲಿ ತನ್ನ ಸ್ವ...

ಅಭಿವ್ಯಕ್ತಿಯನ್ನು ಪಡೆಯುವ ಬದುಕಿನ ಸೃಜನಶೀಲ ಮುಖ ತರ್ಕಬದ್ಧ ಸೂತ್ರೀಕರಣದ ಎಲ್ಲ ಪ್ರಯತ್ನಗಳನ್ನೂ ವಿಫಲಗೊಳಿಸುತ್ತದೆ. ಪ್ರಚೋದನೆಗುಂಟಾದ ಯಾವುದೇ ಪ್ರತಿಕ್ರಿಯೆಯನ್ನು ಹೈತುಕವಾಗಿ ವಿವರಿಸಬಹುದು; ಆದರೆ ಕೇವಲ ಪ್ರತಿಕ್ರಿಯೆಗೆ ಸಂಪೂರ್ಣ ವಿರುದ್ಧವಾಗಿರುವ ಸೃಜನಕ್ರಿಯೆ ಮಾನವಪರಿಗ್ರಹಣದಿಂದ ಎಂದೆಂದಿಗೂ ತಪ್ಪಿಸಿಕೊಳ್ಳುತ್ತದೆ. ಆದರ ಅಭಿವ್ಯಕ್ತಿಗಳಲ್ಲಿ ಅದನ್ನು ವಿವರಿಸಬಹುದಷ್ಟೆ; ಅದನ್ನು ಅಸ್ಪಷ್ಟವಾಗಿ ಅರಿಯುವುದು ಶಕ್ಯ, ಆದರೆ ಪೂರ್ಣವಾಗಿ ಗ್ರಹಿಸುವುದು ಸಾಧ್ಯವಿಲ್ಲ. ಮನೋವಿಜ್ಞಾನ ಮತ್ತು ಕಲೆಯ ಅಧ್ಯಯನ ಯಾವಾಗಲೂ ಸಹಾಯಕ್ಕಾಗಿ ಒಂದನ್ನೊಂದು ಆಶ್ರಯಿಸಬೇಕಾಗುತ್ತದೆ; ಆದರೆ ಒಂದು ಮತ್ತೊಂದನ್ನು ಆಕ್ರಮಗೊಳಿಸುವುದಿಲ್ಲ. ಮನೋಘಟನೆಗಳು ನಿಷ್ಪತ್ತಿಸಾಧ್ಯಗಳೆಂಬುದು ಮನೋವಿಜ್ಞಾನದ ಒಂದು ಮುಖ್ಯ ತತ್ತ್ವ. ಪ್ರಸ್ತುತ ವಿಷಯ ಕಲಾಕೃತಿಯಾಗಿರಲಿ ಅಥವಾ ಕಲಾವಿದನೆ ಆಗಿರಲಿ—ಒಂದು ಮಾನಸಿಕ ಉತ್ಪನ್ನ ಸ್ವಯಂಪೂರ್ಣವೂ ಸ್ವಪರ್ಯವಸಾಯಿಯೂ ಆದದ್ದು ಎಂಬುದು ಕಲೆಯ ಅಧ್ಯಯನದ ಒಂದು ತತ್ತ್ವ. ಸಾಪೇಕ್ಷವಾಗಿದ್ದರೂ ಎರಡು ತತ್ತ್ವಗಳೂ ಊರ್ಜಿತವೇ.

೧

## ಕಲಾಕೃತಿ

ಒಂದು ಕಲಾಕೃತಿಯನ್ನು ಕುರಿತು ಮನೋವಿಜ್ಞಾನಿಯ ಪರೀಕ್ಷೆಗೂ ಸಾಹಿತ್ಯ ವಿಮರ್ಶಕನ ಪರೀಕ್ಷೆಗೂ ಮೂಲಭೂತ ದೃಷ್ಟಿಭೇದವುಂಟು. ಎರಡನೆಯವನ ಪಾಲಿಗೆ ನಿರ್ಣಾಯಕ ಪ್ರಾಮುಖ್ಯ ಹಾಗೂ ಮೌಲ್ಯವುಳ್ಳದ್ದು ಮೊದಲನೆಯವನ ಪಾಲಿಗೆ ತೀರ ಅಪ್ರಕೃತವಾಗಬಹುದು. ಅತ್ಯಂತ ಸಂಶಯಾಸ್ಪದ ಯೋಗ್ಯತೆಯುಳ್ಳ ಸಾಹಿತ್ಯೋತ್ಪನ್ನಗಳು ಎಷ್ಟೋ ಸಲ ಮನೋವಿಜ್ಞಾನಿಯ ಪಾಲಿಗೆ ಅಪಾರ ಸ್ವಾರಸ್ಯವುಳ್ಳವಾಗಿರುತ್ತವೆ. ಉದಾಹರಣೆಗೆ, 'ಮನೋವೈಜ್ಞಾನಿಕ ಕಾದಂಬರಿ'ಯೆಂದು ಕರೆಯಿಸಿಕೊಳ್ಳತಕ್ಕದ್ದು ಮನೋವಿಜ್ಞಾನಿಗೆ ಸಾಹಿತ್ಯಾಸಕ್ತರು ಭಾವಿಸುವಷ್ಟು ಪ್ರತಿಫಲದಾಯಕವಲ್ಲ. ಸಮಗ್ರವಾಗಿ ಪರಿಗಣಿತವಾದಾಗ, ಇಂತಹ ಕಾದಂಬರಿ ತನ್ನನ್ನು ತಾನೇ ವಿವರಿಸಿಕೊಳ್ಳುತ್ತದೆ. ಅದು ಮನೋವೈಜ್ಞಾನಿಕ ವ್ಯಾಖ್ಯಾನದ ತನ್ನ ಕಾರ್ಯವನ್ನು ಮಾಡಿದೆ; ಹೆಚ್ಚೆಂದರೆ ಮನೋವಿಜ್ಞಾನಿ ಅದನ್ನು ವಿಮರ್ಶಿಸಬಹುದು ಅಥವಾ ಬೆಳೆಸಬಹುದು. ಒಬ್ಬ ನಿರ್ದಿಷ್ಟ ಲೇಖಕ ಒಂದು ನಿರ್ದಿಷ್ಟ ಕಾದಂಬರಿಯನ್ನು ಬರೆದುದೆಂತು ಎಂಬ ಮುಖ್ಯಪ್ರಶ್ನೆಯಂತೂ ಉತ್ತರಗೊಳ್ಳದೆಯೆ ಉಳಿಯುತ್ತದೆ; ಆದರೆ ಈ ಸಾಮಾನ್ಯ ಸಮಸ್ಯೆಯನ್ನು ನನ್ನ ಪ್ರಬಂಧದ ದ್ವಿತೀಯ ಭಾಗಕ್ಕೆ ಮೀಸಲಿಡಲು ಬಯಸುತ್ತೇನೆ.

ಯಾವ ಕಾದಂಬರಿಗಳಲ್ಲಿ ಲೇಖಕ ಆಗಲೇ ತನ್ನ ಪಾತ್ರಗಳ ಮನೋವೈಜ್ಞಾನಿಕ ವ್ಯಾಖ್ಯಾನವನ್ನು ನೀಡಿಲ್ಲವೊ, ಆ ಕಾರಣದಿಂದ ಯಾವ ಕಾದಂಬರಿಗಳು ವಿಶ್ಲೇಷಣೆ ವಿವರಣೆಗಳಿಗೆ ಅವಕಾಶವನ್ನು ಒದಗಿಸುತ್ತವೋ ಅಥವಾ ತಮ್ಮ ನಿರೂಪಣೆಯ ರೀತಿಯಿಂದ ಅವುಗಳನ್ನು ಆಮಂತ್ರಿಸುತ್ತವೋ ಅವೇ ಮನೋವಿಜ್ಞಾನಿಯ ಪಾಲಿಗೆ ಅತ್ಯಂತ ಸಫಲವಾದ ಕಾದಂಬರಿಗಳು. ಈ ಬಗೆಯ ಬರವಣಿಗೆಗೆ ಒಳ್ಳೆಯ ನಿದರ್ಶನಗಳೆಂದರೆ, ಬೆನೊಯಿಟ್ಟನ ಕಾದಂಬರಿಗಳು ಮತ್ತು ರಾಶಿತಯಾರಿಕೆಯ ಅತ್ಯಂತ ಜನಪ್ರಿಯ ಸರಕನ್ನು—ಪತ್ತೇದಾರಿ ಕತೆ–ಉತ್ಪಾದಿಸುವ, ಕಾನನ್‌ಡಾಯ್ಲ್ ಉಪಯೋಗಿಸಿಕೊಂಡ ಧಾಟಿಯನ್ನು ಒಳಗೊಂಡಂತೆ ರೈಡರ್ ಹಗ್ಗಾರ್ಡ್‌ನ ರೀತಿಯ ಇಂಗ್ಲಿಷ್ ಕತೆ ಕಾದಂಬರಿಗಳು. ಶ್ರೇಷ್ಠತಮ ಅಮೆರಿಕನ್ ಕಾದಂಬರಿಯೆಂದು ನಾನು ಪರಿಗಣಿಸುವ ಮೆಲ್ವಿಲ್ಲನ *Moby Dick* ಕೂಡ ಈ ಬರವಣಿಗೆಯ ವರ್ಗದಲ್ಲಿ ಬರುತ್ತದೆ. ಮನೋವೈಜ್ಞಾನಿಕ ಸ್ಪಷ್ಟೀಕರಣ ಸ್ವಲ್ಪವೂ ಇಲ್ಲದ ರೋಮಾಂಚಕಾರಿ ಕಥನವೆ ಮನೋವಿಜ್ಞಾನಿಗೆ ಎಲ್ಲಕ್ಕಿಂತ ಹೆಚ್ಚಿನ ಆಸಕ್ತಿಯನ್ನುಂಟುಮಾಡತಕ್ಕದ್ದು. ಇಂಥ ಕತೆಗಳು ಧ್ವನಿತ ಮನೋವೈಜ್ಞಾನಿಕ ಊಹೆಗಳ ತಳಹದಿಯ ಮೇಲೆ ಕಟ್ಟಡಗೊಂಡಿರುತ್ತವೆ; ಲೇಖಕನಿಗೆ ಅವುಗಳ ಅರಿವಿಲ್ಲದಿರುವುದರ ಪ್ರಮಾಣದಲ್ಲಿ ಅವು ವಿಮರ್ಶಾತ್ಮಕ ವಿವೇಚನೆಗೆ, ಶುದ್ಧವಾಗಿ ಮತ್ತು ಅಮಿಶ್ರಿತವಾಗಿ, ಸ್ವತಃ ಪ್ರಕಟವಾಗುತ್ತವೆ. ಮನೋವೈಜ್ಞಾನಿಕ ಕಾದಂಬರಿಯಲ್ಲಾದರೋ ಲೇಖಕನೆ ತನ್ನ ಸಾಮಗ್ರಿ ಒರಟು ಪ್ರಸಂಗದ ಮಟ್ಟದಿಂದ ಮನೋವೈಜ್ಞಾನಿಕ ಸ್ಪಷ್ಟೀಕರಣ ಪ್ರಕಾಶನಗಳ ಮಟ್ಟಕ್ಕೇರುವಂತೆ ಅದನ್ನು ಪುನರ್ರೂಪಿಸಲು ಪ್ರಯತ್ನಿಸುತ್ತಾನೆ—ಈ ಕ್ರಮ ಬಹು ಸಂದರ್ಭಗಳಲ್ಲಿ ಕೃತಿಯ ಮನೋವೈಜ್ಞಾನಿಕ ಮಹತ್ವವನ್ನು ಮಸುಳಿಸುತ್ತದೆ ಅಥವಾ ಮರೆಮಾಡುತ್ತದೆ. ಸಾಮಾನ್ಯಮನುಷ್ಯ 'ಮನೋವಿಜ್ಞಾನ'ಕ್ಕಾಗಿ ಹೋಗತಕ್ಕದ್ದು ನಿಶ್ಚಿತವಾಗಿ ಈ ಬಗೆಯ ಕಾದಂಬರಿಗಳಿಗೇ; ಆದರೆ ಮನೋವಿಜ್ಞಾನಿಗೆ ಸವಾಲುಹಾಕತಕ್ಕವು ಮತ್ತೊಂದು ವರ್ಗದ ಕಾದಂಬರಿಗಳು: ಅವಕ್ಕೆ ಮತ್ತೂ ಆಳವಾದ ಅರ್ಥವನ್ನು ಅವನು ಮಾತ್ರ ಕೊಡಬಲ್ಲ.

ನಾನು ಕಾದಂಬರಿಯ ಪರಿಭಾಷೆಯಲ್ಲಿ ಮಾತನಾಡುತ್ತಿದ್ದೇನೆ; ಆದ ಸಾಹಿತ್ಯಕಲೆಯ ಈ ನಿರ್ದಿಷ್ಟ ಪ್ರಕಾರಕ್ಕೆ ಸೀಮಿತವಾಗದ ಮನೋವೈಜ್ಞಾನಿಕ ಸಂಗತಿಯೊಂದರೊಡನೆ ನಾನು ವ್ಯವಹರಿಸುತ್ತಿದ್ದೇನೆ. ಅದು ನಮಗೆ ಕವಿಗಳ ಕೃತಿಗಳಲ್ಲೂ ಎದುರಾಗುತ್ತದೆ ಮತ್ತು 'ಫೌಸ್ಟ್' ನಾಟಕದ ಪ್ರಥಮ ಮತ್ತು ದ್ವಿತೀಯ ಭಾಗಗಳನ್ನು ಹೋಲಿಸಿದಾಗ ಅದು ಎದುರಾಗುತ್ತದೆ. ಗ್ರೆಚೆನ್ ಪ್ರೇಮದುರಂತ ಸ್ವಯಂವೇದ್ಯವಾಗಿದೆ; ಮನೋವಿಜ್ಞಾನಿ ಅದಕ್ಕೆ ಸೇರಿಸಬೇಕಾದ್ದು, ಕವಿಯಾಗಲೆ ಉತ್ತಮ ಶಬ್ದಗಳಲ್ಲಿ ಹೇಳಿಲ್ಲದ್ದು ಏನೂ ಇಲ್ಲ. ದ್ವಿತೀಯ ಭಾಗ ವಿವರಣೆಯನ್ನು ಕೇಳುತ್ತದೆ. ಪ್ರತಿಭಾಸಾಮಗ್ರಿಯ

ಶ್ರೀಮಂತಿಕೆ ಕವಿಯ ನಿರ್ಮಾಣಶಕ್ತಿಗಳನ್ನು ಎಷ್ಟರಮಟ್ಟಿಗೆ ದುಡಿಸಿಕೊಂಡಿದೆ ಯೆಂದರೆ, ಯಾವುದೂ ಸ್ವಯಂವೇದ್ಯವಾಗಿಲ್ಲ ಮತ್ತು ಪ್ರತಿಯೊಂದು ಪದ್ಯವೂ ವ್ಯಾಖ್ಯಾನದ ಅಗತ್ಯವನ್ನು ಓದುಗನಿಗೆ ಹೆಚ್ಚಿಸುತ್ತದೆ. 'ಫೌಸ್ಟ್' ನಾಟಕದ ಎರಡು ಭಾಗಗಳು ಸಾಹಿತ್ಯಕೃತಿಗಳ ಈ ಮನೋವೈಜ್ಞಾನಿಕ ಭೇದವನ್ನು ಅತಿ ರೇಕಗಳ ಮೂಲಕ ನಿದರ್ಶಿಸುತ್ತವೆ.

ಈ ಭೇದವನ್ನು ಒತ್ತಿ ಹೇಳುವುದಕ್ಕಾಗಿ ನಾನು ಕಲಾಸೃಜನೆಯ ಒಂದು ಬಗೆಯನ್ನು ಮನೋವೈಜ್ಞಾನಿಕ ಎಂದೂ ಮತ್ತೊಂದನ್ನು ದಾರ್ಶನಿಕ ಎಂದೂ ಕರೆಯುತ್ತೇನೆ. ಮನೋವೈಜ್ಞಾನಿಕ ರೀತಿ ಮಾನವಪ್ರಜ್ಞೆಯ ವಲಯದಿಂದ ಬಂದ ಸಾಮಗ್ರಿಗಳೊಡನೆ—ಉದಾಹರಣೆಗೆ, ಜೀವನದ ಪಾಠಗಳು, ಭಾವದ ಆಘಾತಗಳು, ಆವೇಶದ ಅನುಭವ ಮತ್ತು ಮಾನವಾದೃಷ್ಟದ ಸಂಧಿದಶೆಗಳೊಡನೆ ಸಾಮಾನ್ಯವಾಗಿ; ಮನುಷ್ಯನ ಜಾಗೃತ ಜೀವನವನ್ನು ರೂಪಿಸುವಂಥ ಎಲ್ಲದ ರೊಡನೆ ಮತ್ತು ಅವನ ಸಂವೇದನಶೀಲ ಬದುಕಿನೊಡನೆ ವಿಶಿಷ್ಟವಾಗಿ—ವ್ಯವ ಹರಿಸುತ್ತದೆ. ಈ ಸಾಮಗ್ರಿ ಕವಿಯಿಂದ ಮಾನಸಿಕವಾಗಿ ಜೀರ್ಣಿತವಾಗುತ್ತದೆ, ಸಾಧಾರಣತೆಯಿಂದ ಕಾವ್ಯಾನುಭವದ ಮಟ್ಟಕ್ಕೇರಿಸಲ್ಪಡುತ್ತದೆ ಮತ್ತು ವಾಚಕ ಸಾಮಾನ್ಯವಾಗಿ ಯಾವುದನ್ನು ನಿವಾರಿಸಿ ಅಲಕ್ಷಿಸುತ್ತಾನೋ ಅಥವಾ ಮಂದವಾದ ಅಸುಖಭಾವನೆಯಿಂದ ಕೇವಲ ಗುರುತಿಸುತ್ತಾನೊ ಅದನ್ನು ಅವನ ಪ್ರಜ್ಞೆಗೆ ಪೂರ್ಣವಾಗಿ ತಂದುಕೊಡುವುದರ ಮೂಲಕ ಅವನನ್ನು ಮಾನವೀಯ ಅಂತ ರ್ದೃಷ್ಟಿಯ ಮಹತ್ತರ ಸ್ಪಷ್ಟತೆಗೆ ಮತ್ತು ಗಭೀರತೆಗೆ ನೂಕುವಂಥ ಅಭಿವ್ಯಕ್ತಿ ಯೊಂದನ್ನು ಪಡೆದುಕೊಳ್ಳುತ್ತದೆ. ಪ್ರಜ್ಞೆಯ ಪದಾರ್ಥಗಳನ್ನು ಮತ್ತು ಮಾನವ ಜೀವನದ ಅನಿವಾರ್ಯ ಅನುಭವಗಳನ್ನು—ಅದರ ಚಿರಪುನರಾವರ್ತಕ ಸುಖದುಃಖ ಗಳೊಡನೆ—ವ್ಯಾಖ್ಯಾನಿಸುವುದು ಮತ್ತು ಬೆಳಗುವುದು ಕವಿಯ ಕೆಲಸ. ಅವನು ಮನೋವಿಜ್ಞಾನಿಗೆ ಏನನ್ನೂ ಉಳಿಸುವುದಿಲ್ಲ—ಫೌಸ್ಟ್ ಗ್ರೆಚೆನ್ನಳಲ್ಲಿ ಅನುರಕ್ತ ನಾದುದಕ್ಕೆ ಅಥವಾ ಗ್ರೆಚೆನ್ ತನ್ನ ಮಗುವನ್ನು ಕೊಲೆಮಾಡುವುದಕ್ಕೆ ಕಾರಣ ಗಳನ್ನು ಮನೋವಿಜ್ಞಾನಿ ವಿವರಿಸಬೇಕೆಂದು ನಾವು ನಿರೀಕ್ಷಿಸದಿದ್ದ ಪಕ್ಷದಲ್ಲಿ! ಇಂಥ ವಿಷಯಗಳು ಮಾನವಕುಲದ ಅದೃಷ್ಟವನ್ನು ರೂಪಿಸುತ್ತವೆ; ಅವು ಲಕ್ಷಾಂತರ ಸಲ ಪುನರಾವರ್ತನೆಗೊಳ್ಳುತ್ತವೆ ಮತ್ತು ನ್ಯಾಯಾಲಯ ಹಾಗೂ ದಂಡನೆಯ ಕಾನೂನಿನ ಏಕನಾದಕ್ಕೆ ಕಾರಣವಾಗಿವೆ. ಅವು ಪೂರ್ಣವಾಗಿ ತಮ್ಮನ್ನು ತಾವು ವಿವರಿಸಿಕೊಳ್ಳುವುದರಿಂದ ಅವುಗಳ ಬಗ್ಗೆ ಯಾವುದೇ ಅಸ್ಪಷ್ಟತೆ ಯಿಲ್ಲ.

ಅಸಂಖ್ಯಾತ ಸಾಹಿತ್ಯಕೃತಿಗಳು—ಪ್ರೇಮ ಪರಿಸರ ಕುಟುಂಬ ಅಪರಾಧ ಹಾಗೂ ಸಮಾಜಕ್ಕೆ ಸಂಬಂಧಿಸಿದ ಕಾದಂಬರಿಗಳು, ನೀತಿಪರ ಕಾವ್ಯ, ಬಹು ಪಾಲು ಭಾವಗೀತೆಗಳು ಮತ್ತು ದುರಂತ ಸುಖಾಂತ ನಾಟಕಗಳು—ಈ ವರ್ಗಕ್ಕೆ

ಸೇರುತ್ತವೆ. ಮನೋವೈಜ್ಞಾನಿಕ ಕಲಾಕೃತಿಯು ನಿರ್ದಿಷ್ಟರೂಪ ಯಾವುದೇ ಆಗಿರಲಿ, ಅದು ಯಾವಾಗಲೂ ತನ್ನ ಸಾಮಗ್ರಿಗಳನ್ನು ಜಾಗೃತ ಮಾನವಾನುಭವದ ವಿಶಾಲ ವಲಯದಿಂದ, ಬದುಕಿನ ಪರಿಸ್ಫುಟ ಮುನ್ನೆಲೆಯಿಂದ ತೆಗೆದುಕೊಳ್ಳುತ್ತದೆ. ಕಲಾ ಸೃಜನೆಯ ಈ ಬಗೆಯನ್ನು ಮನೋವೈಜ್ಞಾನಿಕವೆಂದು ಕರೆದಿದ್ದೇನೆ; ಏಕೆಂದರೆ ಅದು ತನ್ನ ಚಟುವಟಿಕೆಯಲ್ಲಿ ಮನೋವೈಜ್ಞಾನಿಕ ಗ್ರಾಹ್ಯತೆಯ ಸೀಮೆಗಳನ್ನು ಎಲ್ಲಿಯೂ ಮೀರುವುದಿಲ್ಲ. ಅದು ಒಳಗೊಳ್ಳುವ ಎಲ್ಲವೂ–ಅನುಭವ ಹಾಗೂ ಅದರ ಕಲಾಭಿವ್ಯಕ್ತಿ–ಗ್ರಹಣಸಾಧ್ಯತೆಯ ವಲಯಕ್ಕೆ ಸೇರುತ್ತದೆ. ಮೂಲಭೂತ ಅನುಭವಗಳಲ್ಲಿ ಕೂಡ, ಅವು ಹೈತುಕವಲ್ಲದಿದ್ದರೂ, ವಿಚಿತ್ರವಾದುದೇನೂ ಇಲ್ಲ; ಪ್ರತಿಯಾಗಿ, ಅವು ಕಾಲದ ಮೊದಲಿನಿಂದ ಗೊತ್ತಿರುವಂಥವೆ ಆಗಿವೆ: ಎಂದರೆ, ಭಾವಾವೇಶ ಮತ್ತು ಅದರ ಪರಿಣಾಮ, ಅದೃಷ್ಟದ ತಿರುವುಗಳಿಗೆ ಮನುಷ್ಯನ ಅಧೀನತೆ, ತನ್ನ ಸೌಂದರ್ಯ ಭೀಕರತೆಗಳೊಡನೆ ಅನಂತ ಪ್ರಕೃತಿ.

'ಫೌಸ್ಟ್' ನಾಟಕದ ಪ್ರಥಮ ಮತ್ತು ದ್ವಿತೀಯ ಭಾಗಗಳ ನಡುವಣ ಅಗಾಧ ವ್ಯತ್ಯಾಸ, ಕಲಾಸೃಜನೆಯ ಮನೋವೈಜ್ಞಾನಿಕ ಮತ್ತು ದಾರ್ಶನಿಕ ರೀತಿಗಳ ನಡುವಣ ವ್ಯತ್ಯಾಸವನ್ನು ಗುರುತುಮಾಡುತ್ತದೆ. ದಾರ್ಶನಿಕ ರೀತಿ ಮನೋವೈಜ್ಞಾನಿಕ ರೀತಿಯ ಎಲ್ಲ ವಿಧಿಗಳನ್ನೂ ಪಲ್ಲಟಗೊಳಿಸುತ್ತದೆ. ಅಲ್ಲಿ ಕಲಾಭಿವ್ಯಕ್ತಿಗೆ ಸಾಮಗ್ರಿಯನ್ನೊದಗಿಸುವ ಅನುಭವ ಪರಿಚಿತವಾದುದಾಗಿರುವುದಿಲ್ಲ. ಅದು ತನ್ನ ಅಸ್ತಿತ್ವವನ್ನು ಮನುಷ್ಯಚಿತ್ತದ ಹಿನ್ನಾಡಿನಿಂದ ಪಡೆದುಕೊಳ್ಳುವ, ನಮ್ಮನ್ನು ಮಾನವ ಪೂರ್ವ ಯುಗಗಳಿಂದ ಪ್ರತ್ಯೇಕಿಸುವಂಥ ಕಾಲ ಕಂದರವನ್ನು ಸೂಚಿಸುವ ಅಥವಾ ಬೆಳಕು-ಕತ್ತಲುಗಳ ಅತಿಮಾನುಷ ಲೋಕವನ್ನು ಉದ್ಬೋಧನಗೊಳಿಸುವ ವಿಚಿತ್ರ ವಾದ ಏನೋ ಒಂದಾಗಿರುತ್ತದೆ. ಅದು ಮಾನವನ ಗ್ರಹಣಕ್ಕೆ ಅತೀತವಾಗಿರುವ ಒಂದು ಆದ್ಯನುಭವ; ಆದ್ದರಿಂದಲೆ ಅವನದಕ್ಕೆ ವಶನಾಗುವ ಅಪಾಯವಿದೆ. ಆ ಅನುಭವದ ಮೌಲ್ಯ ಮತ್ತು ಶಕ್ತಿ ಅದರ ರುಂದ್ರತೆಯಿಂದ ಪ್ರಣೀತವಾಗುತ್ತವೆ. ಅದು ಕಾಲರಹಿತ ಆಳಗಳಿಂದ ಮೇಲಕ್ಕೇಳುತ್ತದೆ; ಅದು ಅಪರಿಚಿತ, ಶೀತಲ, ಬಹುಮುಖಿ, ದೈತ್ಯ ಹಾಗೂ ವಿಕೃತ. ಅದು ಅನಂತ ಗೊಂದಲದ ಒಂದು ಉಗ್ರ ಅಸಂಬದ್ಧ ಮಾದರಿಯಾಗಿದ್ದು–ನೀಷೆಯ ಮಾತನ್ನು ಬಳಸುವುದಾದರೆ, ಅದು crimen laesae majestatis humanae–ಮೌಲ್ಯದ ಹಾಗೂ ರಸಾನುಭವ ಪ್ರಕಾರದ ನಮ್ಮ ಮಾನುಷ ಮಾನದಂಡಗಳನ್ನು ಸೀಳಿಹಾಕುತ್ತದೆ. ಪ್ರತಿಯೊಂದು ವಿಧದಲ್ಲೂ ಮಾನವಭಾವನೆಯ ಹಾಗೂ ಧಾರಣದ ಹಿಡಿತವನ್ನು ಮೀರುವ ಅರ್ಥ ರಹಿತ ಘೋರ ಘಟನೆಗಳ ಅಶಾಂತಿಕರ:ದರ್ಶನ, ಬದುಕಿನ ಮುನ್ನೆಲೆಯ ಅನುಭವ ಗಳಿಗಿಂತ ಬೇರೆಯೆ ಆದ ಒತ್ತಾಯಗಳನ್ನು ಕಲಾವಿದನ ಶಕ್ತಿಗಳ ಮೇಲೆ ಹೇರುತ್ತವೆ. ಆ ಮುನ್ನೆಲೆಯ ಅನುಭವಗಳು ವಿಶ್ವವನ್ನು ಮುಸುಕಿರುವ ತೆರೆಯನ್ನು ಎಂದೂ ಹರಿಯುವುದಿಲ್ಲ; ಎಂದೂ ಅವು ಮಾನುಷ ಸಾಧ್ಯವಾದುದರ ಸೀಮೆಗಳನ್ನು

ಮಾರುವುದಿಲ್ಲ; ಈ ಕಾರಣದಿಂದಲೆ ಅವು ಕಲೆಯ ಒತ್ತಾಯಗಳಿಗೆ ತಕ್ಕಂತೆ ರೂಪುಗೊಳ್ಳುತ್ತವೆ-ವ್ಯಕ್ತಿಗೆ ಅವು ಎಂತಹ ದೊಡ್ಡ ಆಘಾತವನ್ನಿತ್ತರೂ ಸರಿಯೆ. ಆದರೆ ಆದ್ಯನುಭವಗಳು ವ್ಯವಸ್ಥಿತ ಜಗತ್ತೊಂದು ಚಿತ್ರಿತವಾಗಿರುವ ತೆರೆಯನ್ನು ಮೇಲಿನಿಂದ ಕೆಳಕ್ಕೆ ಸೀಳಿಹಾಕಿ, ಇನ್ನೂ ಆಗದಿರುವುದರ ಅಗಾಧ ಕಂದರತಲದ ಇಣುಕುನೋಟವೊಂದನ್ನು ನೀಡುತ್ತವೆ. ಅದು ಇತರ ಜಗತ್ತುಗಳ ಒಂದು ದರ್ಶನವೆ ಅಥವಾ ಆತ್ಮದ ಅಸ್ಪಷ್ಟತೆಯ ದರ್ಶನವೆ? ಅಥವಾ ಮಾನವಯುಗಕ್ಕೆ ಹಿಂದಿನ ಪ್ರಾರಂಭಸ್ಥಿತಿಯ ದರ್ಶನವೆ ಅಥವಾ ಭವಿಷ್ಯದ ಅಜಾತ ಪೀಳಿಗೆಗಳ ದರ್ಶನವೆ? ಅದು ಇವುಗಳಲ್ಲಿ ಯಾವುದೇ ಒಂದು ಎಂದಾಗಲಿ, ಯಾವುದೂ ಅಲ್ಲ ಎಂದಾಗಲಿ ನಾವು ಹೇಳಲಾರೆವು.

> Shaping—re-shaping—
> The eternal spirit's eternal pastime.*

ಇಂಥ ದರ್ಶನವನ್ನು ನಾವು *The Shepherd of Hermas* ದಲ್ಲಿ, ಡಾಂಟೆಯಲ್ಲಿ, 'ಫೌಸ್ಟ್'ದ ದ್ವಿತೀಯ ಭಾಗದಲ್ಲಿ, ನೀಷೆಯ ಡಯೊನೀಸಿಯನ್ ಸಮೃದ್ಧಿಯಲ್ಲಿ, ವಾಗ್ನರನ *Nibelungenring* ದಲ್ಲಿ, ಸ್ಪಿಟ್ಟೆಲರನ *Olympischer Fruhling* ದಲ್ಲಿ, ವಿಲಿಯಂ ಬ್ಲೇಕನ ಕಾವ್ಯದಲ್ಲಿ, ಸನ್ಯಾಸಿ ಫ್ರಾನ್ಸಿಸ್ಕೊ ಕೊಲೊನ್ನಾನ *Ipnerotomachia* ದಲ್ಲಿ ಮತ್ತು ಜೇಕಬ್ ಬೋಮೆಯ ತಾತ್ವಿಕ ಹಾಗೂ ಕಾವ್ಯಾತ್ಮಕ ತೊದಲ್ನುಡಿಗಳಲ್ಲಿ ಕಾಣುತ್ತೇವೆ. ಮತ್ತಷ್ಟು ಪರಿಮಿತವೂ ನಿಶ್ಚಿತವೂ ಆದ ಅರ್ಥದಲ್ಲಿ ಆ ಆದ್ಯನುಭವ *She*ಗೆ ಸಂಬಂಧಿಸಿದ ಕಥನಚಕ್ರದಲ್ಲಿ ರೈಡರ್ ಹಗ್ಗಾರ್ಡನಿಗೆ ಸಾಮಗ್ರಿಯನ್ನೊದಗಿಸುತ್ತದೆ; ಅಂತೆಯೇ ಅದು ಬೆನೊಯಿಟ್ಟನಿಗೆ ಮುಖ್ಯವಾಗಿ *L'Atlantide* ದಲ್ಲಿ, ಕ್ಯುಬಿನ್ನನಿಗೆ *Die Andere Seite* ದಲ್ಲಿ, ಮೆರಿಂಕನಿಗೆ *Das Grune Gesicht* ದಲ್ಲಿ- ಈ ಕೃತಿಯ ಪ್ರಾಮುಖ್ಯವನ್ನು ನಾವು ಕಡೆಗಣಿಸಲಾಗದು—, ಗಯಟ್ಸ್‌ನಿಗೆ *Das Reich ohne Raum* ದಲ್ಲಿ ಮತ್ತು ಬರ್ಲಾಕ್‌ಗೆ *Der Tote Tag* ದಲ್ಲಿ, ಸಾಮಗ್ರಿಯೊದಗಿಸುತ್ತದೆ. ಈ ಪಟ್ಟಿಯನ್ನು ದೀರ್ಘವಾಗಿ ಬೆಳೆಸಬಹುದು.

ಕಲಾಸೃಜನೆಯ ಮನೋವೈಜ್ಞಾನಿಕ ಬಗೆಯೊಡನೆ ವ್ಯವಹರಿಸುವಲ್ಲಿ ಸಾಮಗ್ರಿ ಏತರಿಂದಾಗಿದೆ ಮತ್ತು ಅದರ ಅರ್ಥವೇನು ಎಂಬುದನ್ನು ಕುರಿತು ನಾವು ಪ್ರಶ್ನೆ ಹಾಕಿಕೊಳ್ಳಬೇಕಾಗಿಯೆ ಇಲ್ಲ. ಆದರೆ ನಾವು ಸೃಜನೆಯ ದಾರ್ಶನಿಕ ಬಗೆಗೆ ಬಂದೊಡನೆಯೆ ಈ ಪ್ರಶ್ನೆ ನಮ್ಮ ಹೆಗಲೇರಿಕೊಳ್ಳುತ್ತದೆ. ನಾವು ವಿಸ್ಮಿತರಾಗುತ್ತೇವೆ, ದಿಗ್ಭ್ರಾಂತರಾಗುತ್ತೇವೆ, ಗಾಬರಿಗೊಳ್ಳುತ್ತೇವೆ, ಹುಷಾರಾಗುತ್ತೇವೆ, ಅಥವಾ ಜುಗುಪ್ಸೆಗೊಳ್ಳುತ್ತೇವೆ ಕೂಡ—ವ್ಯಾಖ್ಯಾನ ವಿವರಣೆಗಳನ್ನು ನಾವು

*Gœthe

ಕೇಳುತ್ತೇವೆ. ಅದು ದೈನಂದಿನ ಮಾನವ ಜೀವನದ ಏನೊಂದನ್ನೂ ನಮಗೆ ನೆನಪು ಮಾಡುವುದಿಲ್ಲ; ಸ್ವಪ್ನಗಳನ್ನು, ರಾತ್ರಿಕಾಲದ ಭಯಗಳನ್ನು, ಕೆಲವೊಮ್ಮೆ ನಾವು ಸಂಶಯದಿಂದ ಗುರುತಿಸುವ ಮನಸ್ಸಿನ ಕಗ್ಗತ್ತಲ ರಹಸ್ಯಸ್ಥಳಗಳನ್ನು ನೆನಪು ಮಾಡುತ್ತದೆ. ಇಂಥ ಬಗೆಯ ಬರವಣಿಗೆಯನ್ನು–ಅದು ಒರಟಾಗಿ ಇಂದ್ರಿಯ ಪ್ರಚೋದಕವಾಗಿರದಿದ್ದ ಪಕ್ಷದಲ್ಲಿ–ವಾಚಕವೃಂದ ಬಹುಮಟ್ಟಿಗೆ ನಿರಾಕರಿಸುತ್ತದೆ ಮತ್ತು ಸಾಹಿತ್ಯ ವಿಮರ್ಶಕ ಕೂಡ ಅದರಿಂದ ತಬ್ಬಿಬ್ಬಾಗುತ್ತಾನೆ. ಡಾಂಟೆ ಮತ್ತು ವಾಗ್ನರ್ ಅದನ್ನು ಕುರಿತ ದೃಷ್ಟಿಯನ್ನು ಹದಗೊಳಿಸಿದ್ದಾರೆಂಬುದು ನಿಜ. ದಾರ್ಶನಿಕ ಅನುಭವ ಡಾಂಟೆಯಲ್ಲಿ ಚಾರಿತ್ರಿಕ ಸಂಗತಿಗಳ ಪ್ರವೇಶದಿಂದಲೂ ವಾಗ್ನರನಲ್ಲಿ ಪೌರಾಣಿಕ ಘಟನೆಗಳಿಂದಲೂ ಆಚ್ಛಾದಿತವಾಗಿದೆ–ಎಷ್ಟರ ಮಟ್ಟಿಗೆಂದರೆ, ಈ ಕವಿಗಳು ಕೆಲಸಮಾಡಿದ ಸಾಮಗ್ರಿಗಳೆಂದರೆ ಇತಿಹಾಸ ಮತ್ತು ಪುರಾಣವೆಂದು ಕೆಲವುವೇಳೆ ಭಾವಿಸಲಾಗುತ್ತದೆ. ಆದರೆ ಅವರಿಬ್ಬರಲ್ಲೂ ಚಾಲಕ ಶಕ್ತಿ ಹಾಗೂ ಗಂಭೀರತರ ಮಹತ್ವವಿರುವುದು ಆ ಅಂಶದಲ್ಲಲ್ಲ. ಇಬ್ಬರ ಪಾಲಿಗೂ ಅದು ಇರತಕ್ಕದ್ದು ದಾರ್ಶನಿಕ ಅನುಭವದಲ್ಲಿ. ರೈಡರ್ ಹಗ್ಗಾರ್ಡ್‌ನನ್ನು ಕಾಲ್ಪನಿಕತೆಯ ಕೇವಲ ಮೂಲಪುರುಷನೆಂದು ಸಾಮಾನ್ಯವಾಗಿ, ಕ್ಷಮ್ಯವಾಗಿ ಗಣಿಸಲಾಗಿದೆ. ಆದರೂ ಅವನಲ್ಲಿ ಕಥೆ ಮುಖ್ಯವಾಗಿ ಅರ್ಥಪೂರ್ಣವಾದ ಸಾಮಗ್ರಿಗೆ ಅಭಿವ್ಯಕ್ತಿಕೊಡುವ ಒಂದು ಸಾಧನವಷ್ಟೆ. ಕತೆ ವಿಷಯವನ್ನೆಷ್ಟೇ ಮೀರಿ ಬೆಳೆದರೂ, ಪ್ರಾಮುಖ್ಯದಲ್ಲಿ ಇದು ಅದನ್ನು ಮೀರಿಸುತ್ತದೆ.

ದಾರ್ಶನಿಕ ಸೃಜನೆಯಲ್ಲಿನ ಸಾಮಗ್ರಿಯ ಆಕರಗಳ ಬಗೆಗಿರುವ ಅಸ್ಪಷ್ಟತೆ ಬಹಳ ವಿಲಕ್ಷಣವಾದುದು ಮತ್ತು ಸೃಜನೆಯು ಮನೋವೈಜ್ಞಾನಿಕ ರೀತಿಯಲ್ಲಿ ನಮಗೆ ಕಂಡುಬರತಕ್ಕದ್ದಕ್ಕೆ ಸಂಪೂರ್ಣ ವಿರುದ್ಧವಾದುದು. ಈ ಅಸ್ಪಷ್ಟತೆ ಉದ್ದೇಶಪೂರ್ವಕವಾಗಿಲ್ಲದೆ ಇಲ್ಲ ಎಂದು ಶಂಕೆ ಕೂಡ ನಮ್ಮಲ್ಲುಂಟಾಗುತ್ತದೆ. ಈ ಘೋರಾಂಧಕಾರದ ಹಿಂದೆ ಯಾವುದೋ ತೀರ ವೈಯಕ್ತಿಕವಾದ ಅನುಭವವಿದೆ ಎಂಬ ಊಹೆಯತ್ತ ನಾವು ಸಹಜವಾಗಿಯೇ ವಾಲುತ್ತೇವೆ; ಫ್ರಾಯ್ಡನ ಮನೋವಿಜ್ಞಾನ ಅದಕ್ಕೆ ಪ್ರೋತ್ಸಾಹವೀಯುತ್ತದೆ. ಹೀಗಾಗಿ, ಗೊಂದಲದ ಈ ವಿಚಿತ್ರ ಇಣುಕು ನೋಟಗಳಿಗೆ ಕಾರಣ ಹೇಳಲು ಮತ್ತು ಕವಿ ಉದ್ದೇಶಪೂರ್ವಕವಾಗಿಯೆ ತನ್ನ ಮೂಲಾನುಭವವನ್ನು ನಮ್ಮಿಂದ ಮರೆಮಾಚಿರುವಂತೆ ಕೆಲವು ವೇಳೆ ತೋರುವುದೇತಕ್ಕೆಂಬುದನ್ನು ಅರಿತುಕೊಳ್ಳಲು ನಾವು ಆಶಿಸುತ್ತೇವೆ. ವಿಷಯವನ್ನು ಹೀಗೆ ನೋಡುವ ದೃಷ್ಟಿಗೂ, ನಾವಿಲ್ಲಿ ರೋಗನಿದಾನ ಹಾಗೂ ನರರೋಗ ಸಂಬಂಧವಾದ ಒಂದು ಕಲೆಯೊಡನೆ ವ್ಯವಹರಿಸುತ್ತಿದ್ದೇವೆಂಬ ಹೇಳಿಕೆಗೂ ಇರುವುದು ಒಂದೇ ಹೆಜ್ಜೆ; ಅಸ್ಪಸ್ಥ ಚಿತ್ತರ ಭ್ರಮೆಗಳಲ್ಲಿ ಕಂಡು ಬರುವ ಕೆಲವು ಲಕ್ಷಣಗಳನ್ನು ದಾರ್ಶನಿಕ ಸೃಷ್ಟಿಕರ್ತನ ಸಾಮಗ್ರಿ ತೋರುತ್ತದೆ ಎಂಬಷ್ಟರಮಟ್ಟಿಗೆ ಆ ಹೆಜ್ಜೆ ಸಮರ್ಥನೆಗೊಳ್ಳುತ್ತದೆ. ಇದರ ವಿಪರ್ಯಾಸವೂ ಸತ್ಯ; ಪ್ರತಿಭಾಶಾಲಿಯೊಬ್ಬನ

ಕೃತಿಗಳಲ್ಲಿ ನಾವು ನಿರೀಕ್ಷಿಸಬೇಕಾದ ಅರ್ಥಸಂಪತ್ತನ್ನು ಮನೋರೋಗಿಗಳ ಮಾನಸಿಕ ಉತ್ಪನ್ನದಲ್ಲಿ ನಾವು ಕಂಡುಕೊಳ್ಳುತ್ತೇವೆ ಎಷ್ಟೋ ಸಲ. ಫ್ರಾಯ್ಡನನ್ನು ಅನುಸರಿಸುವ ಮನೋವಿಜ್ಞಾನಿ ಈ ತೆರನಾದ ಬರವಣಿಗೆಯನ್ನು ರೋಗನಿದಾನ ಶಾಸ್ತ್ರದ ಒಂದು ಸಮಸ್ಯೆಯೆಂದು ಗಣಿಸುವುದೇನೋ ನಿಜ. ನಾನು 'ಆದಿ ದರ್ಶನ'ವೆಂದು ಕರೆಯತಕ್ಕದ್ದರ--ಜಾಗೃತದೃಷ್ಟಿ ಒಪ್ಪಿಕೊಳ್ಳಲಾರದ ಅನುಭವನದು—ಹಿಂದೆ ಒಂದು ನಿಕಟವೂ ವೈಯಕ್ತಿಕವೂ ಆದ ಅನುಭವವುಂಟೆಂಬ ಊಹೆಯಿಂದ ಅವನು ದರ್ಶನದ ವಿಚಿತ್ರ ಪ್ರತಿಮೆಗಳಿಗೆ ವಿವರಣೆ ನೀಡಲು ಯತ್ನಿಸುತ್ತಾನೆ; ಅವುಗಳನ್ನು ಮುಸುಕು-ಚಿತ್ರಗಳೆಂದು ಕರೆಯುವುದರ ಮತ್ತು ಅವು ಮೂಲಾನುಭವದ ಗೋಪನ ಪ್ರಯತ್ನವೆಂದು ಊಹಿಸುವುದರ ಮೂಲಕ. ಇದು, ಅವನ ದೃಷ್ಟಿಯಲ್ಲಿ, ಅಖಂಡ ವ್ಯಕ್ತಿತ್ವ ಅಥವಾ ಕಡೆಯ ಪಕ್ಷ ಜಾಗೃತ ಮನಸ್ಸಿನ ಕೆಲವು ಕಲ್ಪನೆಗಳಿಗೆ ನೈತಿಕವಾಗಿ ಅಥವಾ ಕಲಾತ್ಮಕವಾಗಿ ಅನನುರೂಪವಾದ ಪ್ರೇಮದಲ್ಲಿನ ಒಂದು ಅನುಭವವಾಗಿದ್ದಿರಬಹುದು. ಕವಿ ತನ್ನ ಅಹಂಭಾವದ ಮೂಲಕ ಈ ಅನುಭವವನ್ನು ಅದುಮಿ ಅದನ್ನು ಗುರುತಿಸಲಾಗದ್ದನ್ನಾಗಿ (ಅಪ್ರಜ್ಞಾಪೂರ್ವಕ) ಮಾಡಬೇಕಾದರೆ, ರೋಗನಿದಾನಾತ್ಮಕ ಭ್ರಮೆಯ ಇಡೀ ಆಯುಧಾಗಾರವನ್ನೆ ಕ್ರಿಯೆಯಲ್ಲಿ ತೊಡಗಿಸಲಾಯಿತು. ಅಲ್ಲದೆ, ವಾಸ್ತವತೆಯ ಸ್ಥಾನದಲ್ಲಿ ಕಲ್ಪನೆಯನ್ನು ತರುವ ಈ ಪ್ರಯತ್ನ ಅತೃಪ್ತಿಕರವಾದುದರಿಂದ, ಅದನ್ನು ಸೃಜನಾತ್ಮಕ ಶಿಲ್ಪಗಳ ದೀರ್ಘಸರಣಿಯಲ್ಲಿ ಪುನರಾವರ್ತನಗೊಳಿಸಬೇಕು. ಇದು ಕಲ್ಪನಾಕೃತಿಗಳ—ಅವೆಲ್ಲವೂ ರಾಕ್ಷಸೀಯ, ಘೋರ, ವಿಕೃತ ಮತ್ತು ವಕ್ರ—ಸಂತಾನಕ್ಕೆ ವಿವರಣೆ ಕೊಡುತ್ತದೆ. ಒಂದು ಕಡೆ ಅವು ಅಂಗೀಕಾರ ಯೋಗ್ಯವಲ್ಲದ ಅನುಭವದ ಸ್ಥಾನದಲ್ಲಿ ನಿಲ್ಲುತ್ತವೆ ಮತ್ತು ಇನ್ನೊಂದು ಕಡೆ ಅದನ್ನು ಬಚ್ಚಿಡಲು ನೆರವಾಗುತ್ತದೆ.

ಕವಿಯ ವ್ಯಕ್ತಿತ್ವ ಹಾಗೂ ಮನೋಧರ್ಮದ ಚರ್ಚೆ ನನ್ನ ಪ್ರಬಂಧದ ದ್ವಿತೀಯ ಭಾಗಕ್ಕೆ ನಿಯತವಾಗಿ ಸಂಬಂಧಿಸಿದ್ದರೂ, ದಾರ್ಶನಿಕ ಕಲಾಕೃತಿಯನ್ನು ಕುರಿತ ಈ ಫ್ರಾಯ್ಡಪರ ದೃಷ್ಟಿಯನ್ನು ಪ್ರಕೃತ ಸಂಬಂಧದಲ್ಲಿ ಎತ್ತಿಕೊಳ್ಳದಿರಲಾರೆ. ಮೊದಲನೆಯದಾಗಿ, ಅದು ಸಾಕಷ್ಟು ಗಮನ ಸೆಳೆದಿದೆ. ಆ ಮೇಲೆ, ದಾರ್ಶನಿಕ ಸಾಮಗ್ರಿಯ ಆಕರಗಳ 'ವೈಜ್ಞಾನಿಕ' ವಿವರಣೆಯನ್ನೀಯಲು ಅಥವಾ ಕಲಾಸೃಜನೆಯ ಈ ವಿಚಿತ್ರ ಬಗೆಯ ಹಿಂದಿರುವ ಮನಃಕ್ರಿಯೆಗಳ ಸಿದ್ಧಾಂತವೊಂದನ್ನು ರೂಪಿಸಲು ನಡೆದಿರುವ ಏಕೈಕ ಪ್ರಸಿದ್ಧ ಪ್ರಯತ್ನವದು. ಈ ಪ್ರಶ್ನೆಯನ್ನು ಕುರಿತು ನನ್ನ ಸ್ವಂತದೃಷ್ಟಿಯೆ ಅಷ್ಟಾಗಿ ಪ್ರಸಿದ್ಧವಾಗಿಲ್ಲ ಅಥವಾ ಸಾಮಾನ್ಯವಾಗಿ ಅರ್ಥಮಾಡಿಕೊಳ್ಳಲ್ಪಟ್ಟಿಲ್ಲ ಎಂದು ಭಾವಿಸುತ್ತೇನೆ. ಪೀಠಿಕೆಯಾಗಿ ಇಷ್ಟು ಹೇಳಿ, ಅದನ್ನು ಸಂಕ್ಷಿಪ್ತವಾಗಿ ಪ್ರತಿಪಾದಿಸಲು ಈಗ ಯತ್ನಿಸುತ್ತೇನೆ.

ದರ್ಶನವನ್ನು ನಾವು ವೈಯಕ್ತಿಕ ಅನುಭವದಿಂದ ನಿಷ್ಪತ್ತಿಗೊಳಿಸಬೇಕೆಂದು

ಒತ್ತಾಯಿಸಿದಲ್ಲಿ, ಅದು ಗೌಣವೆಂದೂ ವಾಸ್ತವತೆಗೆ ಕೇವಲ ಒಂದು ಆದೇಶವೆಂದೂ ಪರಿಗಣಿಸಬೇಕಾಗುತ್ತದೆ. ಫಲಿತಾಂಶವೇನೆಂದರೆ, ದರ್ಶನದ ಆದಿಗುಣವನ್ನು ತೊಲಗಿಸಿ ಅದನ್ನೊಂದು ಚಿಹ್ನವೆಂದಷ್ಟೆ ಭಾವಿಸಿದಂತಾಗುತ್ತದೆ. ಆಗ ಅರ್ಥ ಗರ್ಭಿತವಾದ ಗೊಂದಲ ಒಂದು ಮನಃಕ್ಷೋಭೆಯ ಪ್ರಮಾಣಕ್ಕೆ ಸಂಕುಚಿತ ವಾಗುತ್ತದೆ. ವಿಷಯದ ಈ ವಿವರಣೆಯಿಂದ ನಾವು ಭರವಸೆಗೊಂಡು ಒಂದು ಸುವ್ಯವಸ್ಥಿತ ವಿಶ್ವದ ನಮ್ಮ ಚಿತ್ರದತ್ತ ಮತ್ತೆ ತಿರುಗುತ್ತೇವೆ. ನಾವು ವ್ಯವಹಾರ ನಿಷ್ಠರೂ ತರ್ಕಮತಿಗಳೂ ಆದುದರಿಂದ, ವಿಶ್ವವು ಪರಿಪೂರ್ಣವಾಗಿರಬೇಕೆಂದು ನಿರೀಕ್ಷಿಸುವುದಿಲ್ಲ; ಅತಿರೇಕಗಳೆಂದೂ ವ್ಯಾಧಿಗಳೆಂದೂ ಕರೆಯುವ ಈ ಅನಿವಾರ್ಯ ಅಪರಿಪೂರ್ಣತೆಗಳನ್ನು ನಾವು ಒಪ್ಪಿಕೊಳ್ಳುತ್ತೇವೆ ಮತ್ತು ಮಾನವ ಪ್ರಕೃತಿ ಅವು ಗಳಿಗೆ ಹೊರತಲ್ಲ ಎಂದಿಟ್ಟುಕೊಳ್ಳುತ್ತೇವೆ. ಮಾನವ ಪರಿಗ್ರಹಣವನ್ನು ಧಿಕ್ಕರಿಸುವ ಪ್ರಪಾತಗಳ ಭಯಂಕರ ಪ್ರಕಾಶನವೊಂದು ಭ್ರಮೆಯೆಂದು ತಿರಸ್ಕೃತವಾಗುತ್ತದೆ. ಮತ್ತು ಕವಿ ವಂಚನೆಯ ಬಲಿಯೆಂದೂ ಅಪರಾಧಿಯೆಂದೂ ಭಾವಿಸಲಾಗುತ್ತದೆ. ಕವಿಗೂ ಕೂಡ ಅವನ ಆದ್ಯನುಭವ 'ಮಾನುಷ-ತೀರ ಮಾನುಷ-'ವಾಗಿತ್ತು; ಎಷ್ಟರಮಟ್ಟಿಗೆಂದರೆ ಅವನು ಅದರ ಅರ್ಥವನ್ನು ಎದುರಿಸಲಾರದೆ ತನ್ನಿಂದ ಅದನ್ನು ಬಚ್ಚಿಡಬೇಕಾಯಿತು.

ಕಲಾಸೃಜನೆಯನ್ನು ವೈಯಕ್ತಿಕ ಸಂಗತಿಗಳ ಮಟ್ಟಕ್ಕಿಳಿಸಿ ಅದಕ್ಕೆ ವಿವರಣೆ ಕೊಡುವ ವಿಧಾನದ ಎಲ್ಲ ಪರಿಣಾಮುಗಳನ್ನು ಪೂರ್ಣವಾಗಿ ಸ್ಪಷ್ಟಪಡಿಸುವುದು ಒಳ್ಳೆಯದೆನಿಸುತ್ತದೆ. ಅದೆಲ್ಲಿಗೆ ಒಯ್ಯುವುದೆಂಬುದನ್ನು ನಾವು ಸ್ಫುಟವಾಗಿ ನೋಡಬೇಕು. ಸತ್ಯವೇನೆಂದರೆ, ಅದು ನಮ್ಮನ್ನು ಕಲಾಕೃತಿಯ ಮನೋ ವೈಜ್ಞಾನಿಕ ಅಧ್ಯಯನದಿಂದ ದೂರಕ್ಕೆಳೆಯುತ್ತದೆ ಮತ್ತು ಕವಿಯ ಮನೋ ಧರ್ಮವನ್ನೆ ನಮ್ಮ ಮುಂದೊಡ್ಡುತ್ತದೆ. ಎರಡನೆಯದು ಮುಖ್ಯವಾದ ಸಮಸ್ಯೆ ಯನ್ನೆತ್ತುತ್ತದೆಂಬುದನ್ನು ನಿರಾಕರಿಸುವಂತಿಲ್ಲ; ಆದರೆ ಕಲಾಕೃತಿ ತನ್ನದೇ ಆದ ಹಕ್ಕನ್ನುಳ್ಳ ವಸ್ತು, ಅದನ್ನು ಹೊರಹಾಕುವಂತಿಲ್ಲ. ಕಲಾಕೃತಿಯನ್ನು ಮನೋ ವೈಜ್ಞಾನಿಕವಾಗಿ ವ್ಯಾಖ್ಯಾನಿಸುವುದು ನಮ್ಮ ಕೆಲಸವಾದ್ದರಿಂದ, ಕವಿಗೆ ಅವನ ಸ್ವಂತ ಸೃಜನಾತ್ಮಕ ಕೃತಿಯ ಮಹತ್ವದ ಪ್ರಶ್ನೆ—ಅವನದನ್ನು ಕ್ಷುಲ್ಲಕವೆಂದು, ತೆರೆಯೆಂದು, ದುಃಖಮೂಲವೆಂದು ಅಥವಾ ಒಂದು ಸಾಧನೆಯೆಂದು ಭಾವಿಸು ವುದರ ಪ್ರಶ್ನೆ—ಸದ್ಯಕ್ಕೆ ನಮಗೆ ಸಂಬಂಧಿಸಿಲ್ಲ. ಈ ಕಾರ್ಯವಾಗಬೇಕಾದರೆ, ಕಲಾಕೃತಿಯ ಹಿಂದಿರುವ ಮೂಲಾನುಭವಕ್ಕೆ—ಎಂದರೆ, ದರ್ಶನಕ್ಕೆ—ನಾವು ತೀವ್ರವಾಗಿ ಲಕ್ಷ್ಯಕೊಡಬೇಕಾದ್ದು ಅತ್ಯಗತ್ಯ. ಕಡೆಯಪಕ್ಷ ಕಲಾಸೃಜನೆಯ ಮನೋವೈಜ್ಞಾನಿಕ ಬಗೆಯ ಹಿಂದಿರುವ ಅನುಭವಗಳನ್ನು ಪರಿಗಣಿಸುವಷ್ಟು ತೀವ್ರವಾಗಿ ನಾವದನ್ನು ಪರಿಗಣಿಸಬೇಕು; ಅವೆರಡೂ ವಾಸ್ತವ ಮತ್ತು ಗಂಭೀರ ಎಂಬುದರ ಬಗ್ಗೆ ಯಾರಿಗೂ ಸಂದೇಹವಿಲ್ಲ. ದಾರ್ಶನಿಕ ಅನುಭವ ಮಾನವನ

ಸಾಧಾರಣಗತಿಯಿಂದ ತೀರ ಭಿನ್ನವಾದ ಯಾವುದೋ ವಿಷಯವೆಂಬಂತೆ ತೋರುತ್ತದೆ ಮತ್ತು ಈ ಕಾರಣದಿಂದ, ಅದು ದಿಟವೆಂದು ನಂಬುವುದು ನಮಗೆ ಕಷ್ಟವಾಗುತ್ತದೆ. ದುರದೃಷ್ಟವಶಾತ್ ಅದರ ಸುತ್ತ ಅಸ್ಪಷ್ಟ ಅಧ್ಯಾತ್ಮದ ಹಾಗೂ ಅತೀಂದ್ರಿಯದ ಧ್ವನಿಯಿದ್ದು, ಸದುದ್ದೇಶಪೂರ್ಣ ತರ್ಕದ ಹೆಸರಿನಲ್ಲಿ ನಾವು ಮಧ್ಯಪ್ರವೇಶ ಮಾಡುವಂತಾಗುತ್ತದೆ. ನಮ್ಮ ತೀರ್ಮಾನವೇನೆಂದರೆ, ಜಗತ್ತು ಮತ್ತೆ ಮೂಢನಂಬಿಕೆಗೆ ಮರಳದಿರಬೇಕಾದರೆ ಇಂಥ ಸಂಗತಿಗಳನ್ನೆಲ್ಲ ತೀವ್ರವಾಗಿ ಪರಿಗಣಿಸದಿರುವುದು ಒಳ್ಳೆಯದು. ಅತೀಂದ್ರಿಯದ ಬಗ್ಗೆ ನಮಗೆ ಪಕ್ಷಪಾತವಿರ ಬಹುದು; ಆದರೆ ಸಾಮಾನ್ಯವಾಗಿ ನಾವು ದಾರ್ಶನಿಕ ಅನುಭವವನ್ನು ಒಂದು ಶ್ರೀಮಂತವಾದ ಭ್ರಮೆಯ ಅಥವಾ ಕಾವ್ಯಪ್ರವೃತ್ತಿಯ—ಎಂದರೆ ಮನೋ ವೈಜ್ಞಾನಿಕವಾಗಿ ಅರ್ಥಮಾಡಿಕೊಳ್ಳಲ್ಪಟ್ಟ ಒಂದು ಬಗೆಯ ಕಾವ್ಯಾತ್ಮಕ ರಹ ದಾರಿಯ—ಫಲವೆಂದು ತಳ್ಳಿಹಾಕುತ್ತೇವೆ. ಕೆಲವರು ಕವಿಗಳು, ತಮಗೂ ತಮ್ಮ ಕೃತಿಗೂ ನಡುವೆ ಒಂದು ಹಿತಕರವಾದ ದೂರವನ್ನಿರಿಸಿಕೊಳ್ಳಲೋಸುಗ ಈ ವ್ಯಾಖ್ಯಾನವನ್ನು ಪ್ರೋತ್ಸಾಹಿಸುತ್ತಾರೆ. ಉದಾಹರಣೆಗೆ ಕವಿ ಓಲಿಂಪಿಯನ್ ವಸಂತವನ್ನು ಕುರಿತು ಹಾಡಿದರೂ ಒಂದೆ, 'May is here' ಎಂಬ ವಸ್ತುವಿನ ಬಗ್ಗೆ ಹಾಡಿದರೂ ಒಂದೆ ಎಂದು ಸ್ಪಿಟ್ಟೆಲರ್ ಗಟ್ಟಿಯಾಗಿ ಪ್ರತಿಪಾದಿಸಿದ. ಸತ್ಯವೇ ನೆಂದರೆ, ಕವಿಗಳು ಮಾನವಜೀವಿಗಳು ಮತ್ತು, ಕವಿ ತನ್ನ ಕೃತಿಯ ಬಗೆಗೆ ಹೇಳ ಬೇಕಾಗಿರತಕ್ಕದ್ದು ಎಷ್ಟೋ ಸಲ ಆ ವಿಷಯಸಂಬಂಧವಾಗಿ ಅತ್ಯಂತ ಬೋಧಪ್ರದ ವಾಣಿಯಾಗಿರುವುದಿಲ್ಲ. ಹಾಗಾದರೆ ನಮಗೆ ಬೇಕಾದುದೇನೆಂದರೆ, ದಾರ್ಶನಿಕ ಅನುಭವದ ಪ್ರಾಮುಖ್ಯವನ್ನು ಕವಿಗೆ ವಿರುದ್ಧವಾಗಿಯೆ ಸಮರ್ಥಿಸತಕ್ಕದ್ದು.

ಡಾಂಟೆಯ *Divine Comedy* ಯಲ್ಲಿ, *The Shepherd of Hermas* ದಲ್ಲಿ ಮತ್ತು 'ಫೌಸ್ಟ್' ನಾಟಕದಲ್ಲಿ ಒಂದು ಪ್ರಾರಂಭಿಕ ಪ್ರೇಮಾನುಭವದ–ಅದು ದರ್ಶನದಿಂದ ಪೂರೈಕೆಗೊಳ್ಳುವ ಅನುಭವ–ಪ್ರತಿಧ್ವನಿಗಳನ್ನು ನಾವು ಗ್ರಹಿಸುತ್ತೇ ವೆಂಬುದನ್ನು ನಿರಾಕರಿಸಲು ಶಕ್ಯವಿಲ್ಲ. 'ಫೌಸ್ಟ್' ನಾಟಕದ ದ್ವಿತೀಯ ಭಾಗ, ಪ್ರಥಮಭಾಗದ ಸಾಧಾರಣ ಮಾನುಷಾನುಭವವನ್ನು ನಿರಾಕರಿಸುತ್ತದೆ ಅಥವಾ ಮರೆಮಾಚುತ್ತದೆ ಎಂಬ ಊಹೆಗೆ ಆಧಾರವಿಲ್ಲ; ಗಯಟೆ ಪ್ರಥಮಭಾಗವನ್ನು ಬರೆದಾಗ ಸರಿಯಾಗಿದ್ದನೆಂದೂ ದ್ವಿತೀಯಭಾಗವನ್ನು ರಚಿಸುವಾಗ ವಿಕಲ ಚಿತ್ತ ನಾಗಿದ್ದನೆಂದೂ ಊಹಿಸುವುದಕ್ಕೆ ಕೂಡ ಸಮರ್ಥನೆಯಿಲ್ಲ. ಹರ್ಮಾಸ್, ಡಾಂಟೆ, ಗಯಟೆ—ಇವರನ್ನು ಮಾನುಷ ಬೆಳವಣಿಗೆಯ ಸುಮಾರು ಎರಡು ಸಾವಿರ ವರ್ಷಗಳನ್ನೊಳಗೊಂಡ ಸರಣಿಯೊಂದರಲ್ಲಿನ ಮೂರು ಹಜ್ಜೆಗಳೆಂದು ತೆಗೆದುಕೊಳ್ಳ ಬಹುದು. ಗುರುತರವಾದ ದಾರ್ಶನಿಕ ಅನುಭವಕ್ಕೆ ಸಂಬಂಧಿಸಿರುವುದು ಮಾತ್ರ ವಲ್ಲದೆ ಅದಕ್ಕೆ ಪ್ರಕಟವಾಗಿ ಅಧೀನಗೊಂಡಿರುವ ವೈಯಕ್ತಿಕ ಪ್ರೇಮಪ್ರಕರಣವನ್ನು ಅವರೊಬ್ಬೊಬ್ಬರಲ್ಲೂ ಕಾಣುತ್ತೇವೆ. ಕಲಾಕೃತಿಯೆ ಒದಗಿಸುವ ಮತ್ತು ಕವಿಯ

ನಿರ್ದಿಷ್ಟ ಪುನರ್ೋಥರ್ವದ ಪ್ರಶ್ನೆಯನ್ನು ಬಹಿಷ್ಕರಿಸುವ ಈ ಸಾಕ್ಷ್ಯದ ಬೆಂಬಲದಿಂದ, ದರ್ಶನವು ಮಾನವ ಭಾವಾವೇಶಕ್ಕಿಂತ ಹೆಚ್ಚು ಆಳವಾದ ಮತ್ತು ಪರಿಣಾಮಕಾರಿಯಾದ ಅನುಭವವೊಂದನ್ನು ಪ್ರತಿನಿಧಿಸುತ್ತದೆಂದು ನಾವು ಒಪ್ಪಬೇಕು. ಈ ಸ್ವರೂಪದ ಕಲಾಕೃತಿಗಳಲ್ಲಿ—ವ್ಯಕ್ತಿಯಾಗಿ ಕಲಾವಿದನೂ ಅವುಗಳೂ ಒಂದೇ ಎಂದು ನಾವು ಭಾವಿಸಕೂಡದು—ದರ್ಶನವೊಂದು ಅಪ್ಪಟವಾದ ಆದ್ಯನುಭವವೆಂಬುದನ್ನು ನಾವು ಸಂದೇಹಿಸಲಾರೆವು; ತರ್ಕಜೀವಿಗಳು ಏನೇ ಹೇಳಲಂತೆ. ಆ ದರ್ಶನವು ನಿಷ್ಪನ್ನವಾದ ಅಥವಾ ಗೌಣವಾದ ಏನೋ ಒಂದಲ್ಲ ಅಥವಾ ಅದು ಮತ್ತೇನೋ ಒಂದರ ಚಿಹ್ನವಲ್ಲ. ಅದು ನಿಜವಾದ ಸಾಂಕೇತಿಕ ಅಭಿವ್ಯಕ್ತಿ—ಎಂದರೆ, ತನ್ನದೇ ಆದ ಹಕ್ಕನ್ನುಳ್ಳ, ಆದರೆ ಅಪೂರ್ಣವಾಗಿ ಜ್ಞಾತವಾಗಿರುವ ಏನೋ ಒಂದರ ಅಭಿವ್ಯಕ್ತಿ. ಪ್ರೇಮಪ್ರಕರಣ ನಿಜವಾಗಿ ಅನುಭೂತವಾದ ನಿಜವಾದ ಅನುಭವ; ಇದೇ ಹೇಳಿಕೆ ದರ್ಶನಕ್ಕೆ ಅನ್ವಯಿಸುತ್ತದೆ. ದರ್ಶನದ ತಿರುಳಿನ ಸ್ವರೂಪ ದೈಹಿಕವೆ, ಮಾನಸಿಕವೆ ಅಥವಾ ಆಧ್ಯಾತ್ಮಿಕವೆ ಎಂಬುದನ್ನು ನಿರ್ಧರಿಸಲು ನಾವು ಪ್ರಯತ್ನಿಸಬೇಕಾಗಿಲ್ಲ. ಅದು ತನ್ನಲ್ಲೆ ಮಾನಸಿಕ ಸತ್ಯತೆಯನ್ನು ಹೊಂದಿದೆ; ಇದು ದೈಹಿಕ ಸತ್ಯತೆಗಿಂತ ಕಡಮೆ ಸತ್ಯವೇನಲ್ಲ. ಮಾನವ ಭಾವಾವೇಶ ಜಾಗೃತ ಅನುಭವದ ವಲಯದೊಳಗೆ ಬರುತ್ತದೆ; ದರ್ಶನದ ವಿಷಯವಾದರೋ ಅದರಾಚೆಗಿದೆ. ನಮ್ಮ ಭಾವನೆಗಳ ಮೂಲಕ ನಾವು ಜ್ಞಾತವನ್ನು ಅನುಭವಿಸುತ್ತೇವೆ; ಆದರೆ ನಮ್ಮ ಅಂತರ್ಬೋಧೆಗಳು ಅಜ್ಞಾತವೂ ಗುಪ್ತವೂ ಆದ ಸಂಗತಿಗಳನ್ನು—ಸ್ವಭಾವತಃ ರಹಸ್ಯವಾದುವನ್ನು—ನಿರ್ದೇಶಿಸುತ್ತವೆ. ಅವು ಎಂದಾದರೂ ಪ್ರಜ್ಞಾಪೂರ್ವಕವಾಗಿ ಪರಿಣಮಿಸಿದಲ್ಲಿ, ಅವುಗಳನ್ನು ಉದ್ದೇಶಪೂರ್ವಕವಾಗಿ ತಡೆಹಿಡಿದು ಅಡಗಿಸಲಾಗುತ್ತದೆ; ಈ ಕಾರಣದಿಂದಲೆ ಅವು ಪ್ರಾಚೀನ ಕಾಲದಿಂದಲೂ ನಿಗೂಢ, ಅತಿಮಾನುಷ ಹಾಗೂ ವಂಚಕವೆಂದು ಪರಿಗಣಿತವಾಗಿವೆ. ಅವು ಮಾನವನ ಪರೀಕ್ಷೆಗೆ ಅಗೋಚರವಾಗಿವೆ; ಅವನೂ ಕೂಡ ಅವುಗಳಿಗೆ ಕಾಣದಂತೆ ಅಡಗಿಕೊಂಡಿದ್ದಾನೆ. ವಿಜ್ಞಾನದ ಗುರಾಣಿ ಹಾಗೂ ತರ್ಕದ ಕವಚದಿಂದ ಅವನು ಸ್ವರಕ್ಷಣೆ ಮಾಡಿಕೊಳ್ಳುತ್ತಾನೆ. ಅವನ ಬೋಧಿ ಭಯಜನ್ಯವಾದದ್ದು; ಹಗಲಿನಲ್ಲಿ ಅವನು ವ್ಯವಸ್ಥಿತ ವಿಶ್ವವೊಂದರಲ್ಲಿ ನಂಬಿಕೆಯಿಡುತ್ತಾನೆ ಮತ್ತು ಇರುಳು ಮುತ್ತಿಕೊಳ್ಳುವ ಗೊಂದಲದ ಭಯದ ವಿರುದ್ಧ ಈ ಶ್ರದ್ಧೆಯನ್ನು ಕಾಪಾಡಿಕೊಳ್ಳಲು ಯತ್ನಿಸುತ್ತಾನೆ. ನಮ್ಮ ದೈನಂದಿನ ಪ್ರಪಂಚದಾಚೆಗಿರುವ ಕ್ರಿಯಾವಲಯವನ್ನುಳ್ಳ ಜೀವಂತ ಶಕ್ತಿಯೊಂದಿದ್ದರೆ ಹೇಗೆ? ಅಪಾಯಕರವೂ ಅಪರಿಹಾರ್ಯವೂ ಆದ ಮಾನುಷ ಅಗತ್ಯಗಳುಂಟೆ? ಎಲೆಕ್ಟ್ರಾನ್‌ಗಳಿಗಿಂತ ಉದ್ದೇಶಪೂರ್ಣವಾದುದೇನಾದರೂ ಉಂಟೊ? ನಮಗೆ ಆತ್ಮಗಳಿವೆ ಮತ್ತು ಅವುಗಳನ್ನು ನಾವು ಆಳುತ್ತೇವೆ ಎಂದು ಯೋಚಿಸುವಲ್ಲಿ ಸ್ವವಂಚನೆ ಮಾಡಿಕೊಳ್ಳುತ್ತೇವೆಯೆ? 'ಚೈತನ್ಯ' ವೆಂದು ವಿಜ್ಞಾನ ಕರೆಯತಕ್ಕದ್ದು ತಲೆಬುರುಡೆ

ಯೊಳಗೆ ಐಚ್ಛಿಕವಾಗಿ ಸೀಮಿತವಾದ ಕೇವಲ ಒಂದು ಪ್ರಶ್ನಚಿಹ್ನವಾಗದೆ, ಮಾನವ ಲೋಕಕ್ಕೆ ಅತೀತಜಗತ್ತಿನಿಂದ ತೆರೆದುಕೊಳ್ಳುವ—ಮಾನವನ ಮೇಲೆ ಕೆಲಸ ಮಾಡಲು ಮತ್ತು ಇರುಳಿನ ರೆಕ್ಕೆಗಳ ಮೇಲೆಂತಂತೆ ಅವನನ್ನು ಸಾಮಾನ್ಯ ಮಾನುಷತೆಯ ಸ್ತರದಿಂದ ವೈಯಕ್ತಿಕ ಪ್ರವತ್ತಿಯನ್ನು ಮೀರಿದ ಒಂದು ಸ್ತರಕ್ಕೆ ಒಯ್ಯಲು ಅಪರಿಚಿತ ಅನೂಹ್ಯ ಶಕ್ತಿಗಳಿಗೆ ಆಗೀಗ ಅವಕಾಶಕೊಡುವ—ಒಂದು ದ್ವಾರವಾಗಿದೆಯೆ? ಕಲಾಸೃಜನೆಯ ದಾರ್ಶನಿಕ ಬಗೆಯನ್ನು ನಾವು ಪರಿಗಣಿಸುವಾಗ, ಪ್ರೇಮಪ್ರಕರಣ ಕೇವಲ ಒಂದು ಬಿಡುಗಡೆಯಾಗಿ ಕೆಲಸಮಾಡಿರುವಂತೆ, ವೈಯಕ್ತಿಕ ಅನುಭವ ಪರಮಪ್ರಮುಖವಾದ 'ದೈವಲೀಲೆ'ಗೆ ಕೇವಲ ಪೀಠಿಕೆಯಾಗಿರುವಂತೆ ಕೂಡ ತೋರುತ್ತದೆ.

ಬದುಕಿನ ರಾತ್ರಿ–ಮುಖದ ಸಂಪರ್ಕವಿರತಕ್ಕದ್ದು ಈ ಬಗೆಯ ಕಲೆಯ ಕರ್ತನಿಗಷ್ಟೇ ಅಲ್ಲ; ದ್ರಷ್ಟಾರರು, ಪ್ರವಾದಿಗಳು, ನಾಯಕರು ಮತ್ತು ಪ್ರಬೋಧಕರಿಗೆ ಕೂಡ. ಈ ನಿಶಾಪ್ರಪಂಚ ಎಷ್ಟೇ ಕತ್ತಲಾಗಿರಲಿ, ಅದು ಪೂರ್ಣವಾಗಿ ಅಪರಿಚಿತವಲ್ಲ. ಇಲ್ಲಿ, ಅಲ್ಲಿ ಮತ್ತು ಎಲ್ಲೆಲ್ಲಿಯೂ ಮಾನವ ಅದನ್ನು ಅನಾದಿಕಾಲದಿಂದಲೂ ಅರಿತಿದ್ದಾನೆ; ಏಕೆಂದರೆ, ಇಂದು ಅದು ಆದಿಮಾನವನಿಗೆ ಅವನ ವಿಶ್ವಚಿತ್ರದ ಒಂದು ಅವಿವಾದಿತ ಭಾಗವಾಗಿದೆ. ನಾವಷ್ಟೆ ಅದನ್ನು ನಿರಾಕರಿಸಿರತಕ್ಕವರು; ಇದಕ್ಕೆ ಕಾರಣ ಮೂಢನಂಬಿಕೆ ಮತ್ತು ಅಧ್ಯಾತ್ಮವನ್ನು ಕುರಿತ ನಮ್ಮ ಭಯ ಹಾಗೂ ಕ್ಷೇಮಕರವೂ ನಿರ್ವಹಣಸಾಧ್ಯವೂ ಆದ ಪ್ರಜ್ಞಾಪೂರ್ವಕ ಜಗತ್ತೊಂದನ್ನು ರಚಿಸುವ ನಮ್ಮ ಪ್ರಯತ್ನ. ಆದರೂ, ನಮ್ಮ ನಡುವೆ ಕೂಡ, ಕವಿ ಆಗೀಗ ರಾತ್ರಿಲೋಕದ ಆಕೃತಿಗಳನ್ನು—ಭೂತಗಳು, ದೆವ್ವಗಳು ಮತ್ತು ದೇವತೆಗಳನ್ನು—ಕಾಣುತ್ತಾನೆ. ಮಾನವನ ಗುರಿಗಳವರೆಗೆ ಚಾಚಿರುವ ಉದ್ದೇಶಪೂರ್ಣತೆ ಅವನ ಪಾಲಿಗೆ ಜೀವದಾಯಕ ರಹಸ್ಯವೆಂಬುದು ಕವಿಗೆ ಗೊತ್ತು; ಪೂರ್ಣತೆಯಲ್ಲಿನ ಅಗ್ರಾಹ್ಯಘಟನೆಗಳ ಮುನ್‌ಸುಳಿವು ಅವನಿಗೆ ಸಿಕುತ್ತದೆ. ಸಂಕ್ಷಿಪ್ತವಾಗಿ ಹೇಳುವುದಾದರೆ, ವನ್ಯ ಹಾಗೂ ಅನಾಗರಿಕ ಜನಕ್ಕೆ ಭೀತಿ ಹುಟ್ಟಿಸುವ ಮಾನಸಿಕ ಜಗತ್ತಿನ ಏನೋ ಒಂದನ್ನವನು ಕಾಣುತ್ತಾನೆ.

ತನ್ನ ಅಸ್ಪಷ್ಟ ತಿಳಿವಳಿಕೆಗೆ ಒಂದು ಸ್ಥಿರರೂಪವನ್ನು ಕೊಡಬೇಕೆಂಬ ಮಾನವನ ಪ್ರಯತ್ನಗಳು ಮಾನವ ಸಮಾಜದ ಆರಂಭದಿಂದಲೆ ತಮ್ಮ ಕುರುಹುಗಳನ್ನು ತೋರಿಸುತ್ತವೆ. ಹಳೆಯ ಶಿಲಾಯುಗದ ರೊಡೀಷಿಯನ್ ಬಂಡೆ ಚಿತ್ರಗಳಲ್ಲಿ ಕೂಡ, ಪ್ರಾಣಿಗಳ ಅತ್ಯಾಶ್ಚರ್ಯಕರವಾದ ಜೀವಂತ ಚಿತ್ರಗಳ ಜೊತೆಜೊತೆಯಲ್ಲೆ ಒಂದು ಅಮೂರ್ತ ವಿನ್ಯಾಸ—ಒಂದು ವೃತ್ತದೊಳಗಿರುವ ಶಿಲುಬೆದ್ವಯೆ—ಕಂಡುಬರುತ್ತದೆ. ಈ ವಿನ್ಯಾಸ ಹೆಚ್ಚು ಕಡಮೆ ಪ್ರತಿಯೊಂದು ಸಾಂಸ್ಕೃತಿಕ ಪ್ರಾಂತದಲ್ಲೂ ಮರುಕಳಿಸಿದೆ; ನಾವಿಂದು ಅದನ್ನು ಕ್ರಿಶ್ಚಿಯನ್ ಚರ್ಚುಗಳಲ್ಲಿ ಮಾತ್ರವಲ್ಲದೆ ಟಿಬೆಟ್ಟಿನ ಮಠಗಳಲ್ಲೂ ನೋಡುತ್ತೇವೆ. ಅದು ಸೂರ್ಯಚಕ್ರವೆಂದು ಕರೆಯಿಸಿ

ಕೊಳ್ಳುತ್ತದೆ; ಚಕ್ರಗಳನ್ನೊಂದು ಯಂತ್ರಸಾಧನವೆಂದು ಯಾರೂ ಯೋಚಿಸದಿದ್ದ ಕಾಲದಿಂದಲೂ ಅದು ಕಂಡುಬರುವುದರಿಂದ, ಬಾಹ್ಯಪ್ರಪಂಚದ ಯಾವುದೇ ಅನುಭವದಲ್ಲಿ ಅದರ ಮೂಲವಿದ್ದಿರಲಾರದು. ಮಾನಸಿಕ ಘಟನೆಯೊಂದಕ್ಕೆ ಅದು ಸಂಕೇತ; ಆಂತರಿಕ ಜಗತ್ತಿನ ಅನುಭವವೊಂದನ್ನು ಅದು ಪ್ರತಿನಿಧಿಸುತ್ತದೆ ಮತ್ತು ಅದು ಬೆನ್ನ ಮೇಲೆರಡು ಹಕ್ಕಿಗಳಿರುವ ಪ್ರಸಿದ್ಧ ಖಡ್ಗಮೃಗದಷ್ಟೆ ಜೀವಂತವಾದ ಚಿತ್ರ. ರಹಸ್ಯಬೋಧನೆಯ ವ್ಯವಸ್ಥೆಯೊಂದಿಲ್ಲದ ಆದಿಸಂಸ್ಕೃತಿ ಯಾವುದೂ ಇರಲಿಲ್ಲ ಮತ್ತು ಅನೇಕ ಸಂಸ್ಕೃತಿಗಳಲ್ಲಿ ಈ ವ್ಯವಸ್ಥೆ ವಿಶೇಷವಾಗಿ ಬೆಳೆದಿದೆ. ಮಾನವ ಸಮಿತಿಗಳು ಮತ್ತು ಒಕ್ಕಲುಗಳು ಮನುಷ್ಯನ ದೈನಂದಿನ ಅಸ್ತಿತ್ವದಿಂದ ಪ್ರತ್ಯೇಕವಾಗಿರುವ ಗುಪ್ತಸಂಗತಿಗಳನ್ನು—ಆದಿಕಾಲದಿಂದಲೂ ಅವನ ಅತ್ಯಂತ ಮುಖ್ಯವಾದ ಅನುಭವಗಳನ್ನು ಯಾವಾಗಲೂ ರೂಪಿಸಿರತಕ್ಕವು—ಕುರಿತ ಈ ಬೋಧನೆಯನ್ನು ಕಾಪಾಡಿಕೊಳ್ಳುತ್ತವೆ. ಅವುಗಳ ಜ್ಞಾನವನ್ನು ಯುವಕರಿಗೆ ದೀಕ್ಷಾವಿಧಿಗಳಲ್ಲಿ ನೀಡಲಾಗುವುದು. ಗ್ರೀಕೊ–ರೋಮನ್ ಜಗತ್ತಿನ ನಿಗೂಢತೆಗಳು ಇದೇ ಕರ್ತವ್ಯ ನಿರ್ವಹಿಸಿದುವು ಮತ್ತು ಪ್ರಾಕ್ಕಾಲದ ಶ್ರೀಮಂತ ಪುರಾಣಪ್ರಪಂಚ ಮಾನವಿಕಾಸದ ಆರಂಭಿಕ ಘಟ್ಟಗಳಲ್ಲಿನ ಇಂಥ ಅನುಭವಗಳ ಅವಶೇಷವಾಗಿದೆ.

ಆದ್ದರಿಂದ, ಕವಿ ತನ್ನ ಅನುಭವಕ್ಕೆ ಅತ್ಯಂತ ಅನುರೂಪವಾದ ಅಭಿವ್ಯಕ್ತಿ ನೀಡುವುದಕ್ಕಾಗಿ ಪುರಾಣಪ್ರಪಂಚವನ್ನು ಆಶ್ರಯಿಸುತ್ತಾನೆಂದು ನಿರೀಕ್ಷಿಸಬೇಕು. ಅವನು ಎರವಲು ಪಡೆದ ಸಾಮಗ್ರಿಗಳೊಡನೆ ಕೆಲಸ ಮಾಡುತ್ತಾನೆಂದು ಊಹಿಸುವುದು ತೀವ್ರವಾದ ತಪ್ಪಾಗುತ್ತದೆ. ಅವನ ಸೃಜನಶಕ್ತಿಯ ಆಕರ ಆದ್ಯನುಭವ; ಅದನ್ನು ಅಳೆಯಲಾಗುವುದಿಲ್ಲವಾದ್ದರಿಂದ ಅದಕ್ಕೆ ರೂಪ ಕೊಡಬೇಕಾದರೆ ಪೌರಾಣಿಕ ಪ್ರತಿಮಾನಿರ್ಮಾಣ ಅಗತ್ಯ. ಅದು 'ಗಾಜಿನಲ್ಲಿಂಬಂತೆ ಮಸುಕಾಗಿ' ಕಂಡುಬರುವ ದರ್ಶನವಾದ್ದರಿಂದ ಅದು ತನಗೆ ತಾನೆ ಶಬ್ದಗಳನ್ನಾಗಲಿ ಪ್ರತಿಮೆಗಳನ್ನಾಗಲಿ ಕೊಡುವುದಿಲ್ಲ. ಅಭಿವ್ಯಕ್ತಿಯನ್ನು ಕಂಡುಕೊಳ್ಳಲು ಹೆಣಗತಕ್ಕದ್ದು ಒಂದು ಆಳವಾದ ಮುಂಗಾಣ್ಕೆಯಷ್ಟೆ. ಅದು ತನ್ನ ವ್ಯಾಪ್ತಿಗೆ ಬಂದ ಎಲ್ಲವನ್ನೂ ಹಿಡಿದುಕೊಂಡು ಮೇಲೆತ್ತಿ ಒಂದು ಗೋಚರರೂಪವನ್ನು ತಾಳಬಲ್ಲ ಬಿರುಗಾಳಿಯ ಹಾಗೆ. ಆ ವಿಶಿಷ್ಟ ಅಭಿವ್ಯಕ್ತಿ ದರ್ಶನದ ಸಾಧ್ಯತೆಗಳನ್ನೆಲ್ಲ ಮುಗಿಸದೆ ಅಂತಃಸತ್ವದಲ್ಲಿ ಕೊರೆಬೀಳುವುದರಿಂದ, ಕವಿ ತನ್ನ ಕೆಲವೇ ಕೆಲವು ತಿಳಿವಳಿಕೆಗಳನ್ನು ನಿವೇದಿಸಬೇಕಾದರೂ ತನ್ನ ಹತ್ತಿರ ಸಾಮಗ್ರಿಗಳ ದೊಡ್ಡ ಉಗ್ರಾಣವನ್ನಿಟ್ಟುಕೊಂಡಿರಬೇಕು. ಅದಕ್ಕಿಂತ ಹೆಚ್ಚಾಗಿ, ತನ್ನ ದರ್ಶನದ ವಿಕೃತ ವಿರೋಧಾಭಾಸವನ್ನು ಅಭಿವ್ಯಕ್ತಿಗೊಳಿಸಲೋಸುಗ ಅವನು ನಿರ್ವಹಣದುಷ್ಕರವಾದ ಮತ್ತು ವಿರೋಧಗಳಿಂದ ತುಂಬಿದ ಪ್ರತಿಮಾನಿರ್ಮಾಣವನ್ನಾಶ್ರಯಿಸಬೇಕು. ಗಯಟೆಯ ಮುಂಗಾಣ್ಕೆಗಳು ಸ್ವರ್ಗನರಕಗಳ ವ್ಯಾಪ್ತಿಯನ್ನುಳ್ಳ ಪ್ರತಿಮೆಗಳಲ್ಲಿ ಮೂರ್ತವಾಗಿವೆ; ಗಯಟೆ ಬ್ಲಾಕ್ಸ್‌ಬರ್ಗ್ ಶಿಖರವನ್ನೂ ಗ್ರೀಕ್‌ಪ್ರಾಚೀನತೆಯ ಅಧೋ

ಭಾಗಗಳನ್ನೂ ತರಲೇಬೇಕು; ವ್ಯಾಗ್ನರನಿಗೆ ನಾರ್ಡಿಕ್ ಪುರಾಣಸಮೂಹವೆಲ್ಲ ಅಗತ್ಯ, ನೀಷೆ ಪ್ರಾಚೀನ ಶೈಲಿಗೆ ಮರಳುತ್ತಾನೆ ಮತ್ತು ಪ್ರಾಗೈತಿಹಾಸಿಕ ಕಾಲಗಳ ಪೌರಾಣಿಕ ಋಷಿಯನ್ನು ಪುನಃಸೃಜಿಸುತ್ತಾನೆ; ಬ್ಲೇಕ್ ಅವರ್ಣನೀಯ ಆಕೃತಿಗಳನ್ನು ಕಂಡುಕೊಳ್ಳುತ್ತಾನೆ ಮತ್ತು ಸ್ಪಿಟ್ಟೆಲರ್ ಕಲ್ಪನೆಯ ಹೊಸ ಜೀವಿಗಳಿಗಾಗಿ ಹಳೆಯ ಹೆಸರುಗಳನ್ನು ಎರವಲು ಪಡೆಯುತ್ತಾನೆ. ಅವಾಚ್ಯಭವ್ಯವಾದುದರಿಂದ ವಿಕೃತಘೋರದವರೆಗೆ ಇದೇ ಶ್ರೇಣಿಯಲ್ಲಿ ಯಾವೊಂದು ಮಧ್ಯವರ್ತಿ ಹಜ್ಜೆಯೂ ತಪ್ಪಿಸಿಕೊಂಡಿಲ್ಲ.

ಮನೋವಿಜ್ಞಾನ ಈ ವರ್ಣರಂಜಿತ ಪ್ರತಿಮಾವಳಿಯ ಸ್ಪಷ್ಟೀಕರಣಕ್ಕಾಗಿ ಏನನ್ನೂ ಮಾಡಲಾರದು—ಹೋಲಿಕೆಗಾಗಿ ಸಾಮಗ್ರಿಗಳನ್ನು ಒಗ್ಗೂಡಿಸುವುದು ಹಾಗೂ ಅದರ ಜಿಜ್ಞಾಸೆಗಾಗಿ ಪರಿಭಾಷೆಯೊಂದನ್ನು ಒದಗಿಸುವುದರ ವಿನಾ. ಈ ಪರಿಭಾಷೆಯ ಪ್ರಕಾರ, ದರ್ಶನದಲ್ಲಿ ತೋರಿಬರತಕ್ಕದ್ದು ಸಮಷ್ಟಿ ಸುಪ್ತಪ್ರಜ್ಞೆ. ಸಮಷ್ಟಿ ಸುಪ್ತಪ್ರಜ್ಞೆಯೆಂದರೆ, ಅನುವಂಶಿಕತೆಯ ಶಕ್ತಿಗಳಿಂದ ರೂಪಿತವಾದ ಒಂದು ನಿರ್ದಿಷ್ಟ ಮನೋಧರ್ಮ; ಅದರಿಂದ ಪ್ರಜ್ಞೆ ಬೆಳೆದಿದೆ. ದೇಹದ ಭೌತಿಕ ರಚನೆಯಲ್ಲಿ ವಿಕಾಸದ ಪೂರ್ವ ಘಟ್ಟಗಳ ಕುರುಹುಗಳನ್ನು ನಾವು ಕಾಣುತ್ತೇವೆ; ಮಾನವ ಚಿತ್ತ ಕೂಡ ತನ್ನ ರಚನೆಯಲ್ಲಿ ವಿಕಾಸನಿಯಮಕ್ಕೆ ಅನುಗುಣವಾಗಿರುತ್ತದೆಂದು ನಾವು ನಿರೀಕ್ಷಿಸಬಹುದು. ಪ್ರಜ್ಞೆಯ ಗ್ರಹಣಸ್ಥಿತಿಗಳಲ್ಲಿ—ಕನಸು, ವೇದನಾಸುಪ್ತಿ ಮತ್ತು ಮಾನಸಿಕ ಅಸ್ವಸ್ಥತೆಗಳಲ್ಲಿ—ಮಾನಸಿಕ ಸರಕುಗಳು ಅಥವಾ ಪದಾರ್ಥಗಳು ಮೇಲಕ್ಕೆದ್ದು ಬಂದು ಮನೋವಿಕಾಸದ ಆದಿಸ್ತರಗಳ ಎಲ್ಲ ಚಿಹ್ನೆಗಳನ್ನೂ ತೋರುವುದು ವಾಸ್ತವಾಂಶ. ಪ್ರತಿಮೆಗಳಿಗೇ ಕೆಲವೊಮ್ಮೆ ಇಂತಹ ಆದಿಸ್ವರೂಪವಿರುತ್ತದೆ; ಎಷ್ಟರಮಟ್ಟಿಗೆಂದರೆ, ಅವು ಪ್ರಾಚೀನ, ನಿಗೂಢ ಉಪದೇಶದಿಂದ ನಿಷ್ಪನ್ನವಾದುವೆಂದು ನಾವು ಊಹಿಸಬಹುದು. ಆಧುನಿಕ ವಸ್ತ್ರ ಧಾರಣೆಮಾಡಿದ ಪೌರಾಣಿಕ ವಸ್ತುಗಳೂ ಮೇಲಿಂದ ಮೇಲೆ ಕಾಣಿಸಿಕೊಳ್ಳುತ್ತವೆ. ಈ ಸಮಷ್ಟಿ ಸುಪ್ತಪ್ರಜ್ಞೆಯ ಅಭಿವ್ಯಕ್ತಿಗಳಲ್ಲಿ ಸಾಹಿತ್ಯಾಭ್ಯಾಸದ ಪಾಲಿಗೆ ವಿಶಿಷ್ಟ ಪ್ರಾಮುಖ್ಯವುಳ್ಳದ್ದೇನೆಂದರೆ, ಅವು ಪ್ರಜ್ಞಾದೃಷ್ಟಿಗೆ ಪೂರಕವಾಗುತ್ತವೆ. ಎಂದರೆ, ಅವು ಪ್ರಜ್ಞೆಯ ಏಕಮುಖ, ವಿಪರೀತ, ಅಥವಾ ಅಪಾಯಕರ ಸ್ಥಿತಿಯನ್ನು ಒಂದು ಉದ್ದೇಶಪೂರ್ಣವಾದ ರೀತಿಯಲ್ಲಿ ಸಮತೋಲನಗೊಳಿಸುತ್ತವೆ. ಕನಸುಗಳಲ್ಲಿ ಈ ಕ್ರಿಯೆಯನ್ನು ಅದರ ಇತ್ಯಾತ್ಮಕಮುಖದಲ್ಲಿ ಬಹಳ ಸ್ಪಷ್ಟವಾಗಿ ನೋಡಬಹುದು. ಮಾನಸಿಕ ಅಸ್ವಸ್ಥತೆಯ ಸಂದರ್ಭಗಳಲ್ಲಿ ಪೂರಕಕ್ರಿಯೆ ಆಗಾಗ ಸಂಪೂರ್ಣ ಸ್ಪಷ್ಟವಾಗಿರುತ್ತದೆ, ಆದರೆ ನೇತ್ಯಾತ್ಮಕ ಮುಖದಲ್ಲಿರುತ್ತದೆ. ಉದಾಹರಣೆಗೆ, ಇಡೀ ಪ್ರಪಂಚದ ಸಂಪರ್ಕವನ್ನು ಕಡಿದುಕೊಂಡು ಅಡಗಿರುವ ವ್ಯಕ್ತಿಗಳುಂಟು; ಆದರೆ ಒಂದು ದಿನ ಅವರ ಅತ್ಯಂತ ಆತ್ಮೀಯ ರಹಸ್ಯಗಳು ಗೊತ್ತಾಗಿ ಪ್ರತಿಯೊಬ್ಬರ ಬಾಯಿಗೂ ಬೀಳುವುದನ್ನವರು ಕಂಡುಕೊಳ್ಳುತ್ತಾರೆ.

ಗಯಟೆಯ 'ಫೌಸ್ಟ್' ನಾಟಕವನ್ನು ನಾವು ಪರಿಗಣಿಸಿದರೆ ಮತ್ತು ಅದು ಅವನ ಸ್ವಂತ ಪ್ರಜ್ಞಾದೃಷ್ಟಿಗೆ ಪೂರಕವಾಗಿದೆಯೆಂಬ ಸಾಧ್ಯತೆಯನ್ನು ಬಿಟ್ಟರೆ, ನಾವು ಉತ್ತರಿಸಬೇಕಾದ ಪ್ರಶ್ನೆಯಿದು: ಅದಕ್ಕೂ ಅವನ ಕಾಲದ ಜಾಗೃತ ದೃಷ್ಟಿಗೂ ಇರುವ ಸಂಬಂಧ ಎಂಥದು? ಮಹತ್‌ಕಾವ್ಯ ಮನುಕುಲದ ಬದುಕಿನಿಂದ ತನ್ನ ಶಕ್ತಿಯನ್ನು ಪಡೆದುಕೊಳ್ಳುತ್ತದೆ; ಅದನ್ನು ವೈಯಕ್ತಿಕ ಸಂಗತಿಗಳಿಂದ ನಿಷ್ಪತ್ತಿಗೊಳಿಸಲು ನಾವು ಯತ್ನಿಸಿದರೆ ಅದರ ಅರ್ಥವನ್ನು ಸಂಪೂರ್ಣವಾಗಿ ಕಳೆದುಕೊಳ್ಳುತ್ತೇವೆ. ಸಮಷ್ಟಿ ಸುಪ್ತಪ್ರಜ್ಞೆ ಒಂದು ಜೀವಂತ ಅನುಭವವಾಗಿ ಪರಿಣಮಿಸಿದಾಗ ಮತ್ತು ಒಂದು ಯುಗದ ಜಾಗೃತದೃಷ್ಟಿಗೆ ಅನ್ವಯಗೊಂಡಾಗ, ಈ ಘಟನೆ ಆ ಯುಗದಲ್ಲಿ ಬದುಕುವ ಪ್ರತಿಯೊಬ್ಬರಿಗೂ ಮುಖ್ಯವಾಗುವ ಒಂದು ಸೃಜನಕ್ರಿಯೆಯಾಗುತ್ತದೆ. ಮಾನವ ಪೀಳಿಗೆಗಳಿಗೊಂದು ಸಂದೇಶವೆಂದು ನಿಜವಾಗಿ ಕರೆಯಬಹುದಾದುದನ್ನೊಳಗೊಂಡ ಕಲಾಕೃತಿಯೊಂದು ಉತ್ಪತ್ತಿ ಗೊಳ್ಳುತ್ತದೆ. ಹಾಗಾಗಿ 'ಫೌಸ್ಟ್' ಪ್ರತಿಯೊಬ್ಬ ಜರ್ಮನ್ ವ್ಯಕ್ತಿಯ ಹೃದಯ ದಲ್ಲೂ ಏನನ್ನೊ ಸ್ಪರ್ಶಿಸುತ್ತದೆ. ಹಾಗೆಯೆ ಡಾಂಟೆಯ ಖ್ಯಾತಿ ಅಮರವಾಗಿದೆ; ಆದರೆ *The Shepherd of Hermas* ಹೊಸ ಒಡಂಬಡಿಕೆಯ ಅನುಶಾಸನದಲ್ಲಿ ಸೇರ್ಪಡೆಗೊಳ್ಳುವುದು ತಪ್ಪಿಹೋಯಿತು. ಪ್ರತಿಯೊಂದು ಯುಗಕ್ಕೂ ಅದರದೇ ಆದ ವಿಶಿಷ್ಟ ಒಲವು, ಪೂರ್ವಗ್ರಹ ಹಾಗೂ ಮನೋವ್ಯಾಧಿ ಇರುತ್ತವೆ. ಒಂದೊಂದು ಕಾಲವೂ ಒಬ್ಬ ವ್ಯಕ್ತಿಯಂತೆ; ಅದಕ್ಕೆ ಅದರದೇ ಆದ ಜಾಗೃತ ದೃಷ್ಟಿಯ ಪರಿಮಿತಿ ಗಳಿರುತ್ತವಾದ್ದರಿಂದ ಒಂದು ಪೂರಕವಾದ ಹೊಂದಾಣಿಕೆ ಅವಶ್ಯ. ಇದು ಸಮಷ್ಟಿ ಸುಪ್ತಪ್ರಜ್ಞೆಯಿಂದ ನೆರವೇರುತ್ತದೆ; ಅದರಲ್ಲಿ ಒಬ್ಬ ಕವಿ, ದ್ರಷ್ಟಾರ ಅಥವಾ ನಾಯಕ ತನ್ನ ಕಾಲದ ಅನಭಿವ್ಯಕ್ತ ಆಕಾಂಕ್ಷೆಯಿಂದ ತಾನಾಗಿ ಮಾರ್ಗದರ್ಶನ ಗೊಳ್ಳುತ್ತಾನೆ ಮತ್ತು ಯಾವುದಕ್ಕಾಗಿ ಪ್ರತಿಯೊಬ್ಬರೂ ಕುರುಡಾಗಿ ಹಂಬಲಿಸುತ್ತ ನಿರೀಕ್ಷಿಸುತ್ತಾರೊ ಅವರ ಸಾಧನೆಗೆ ಮಾತಿನಿಂದ ಅಥವಾ ಕೃತಿಯಿಂದ ದಾರಿ ತೋರುತ್ತಾನೆ; ಈ ಸಾಧನೆ ಶಿವದಲ್ಲಿ ಅಥವಾ ಅಶಿವದಲ್ಲಿ, ಒಂದು ಯುಗದ ವ್ಯಾಧಿನಿವಾರಣೆಯಲ್ಲಿ ಅಥವಾ ವಿನಾಶದಲ್ಲಿ ಪರ್ಯವಸಾನಗೊಳ್ಳಬಹುದು.

ಒಬ್ಬನ ಸ್ವಂತಕಾಲವನ್ನು ಕುರಿತು ಮಾತನಾಡುವುದು ಯಾವಾಗಲೂ ಅಪಾಯಕಾರಿ; ಏಕೆಂದರೆ, ವರ್ತಮಾನದಲ್ಲಿ ಅಪಾಯಶಂಕೆಯಲ್ಲಿರತಕ್ಕದ್ದು ಗ್ರಹಿಸಲಾರದಷ್ಟು ವಿಶಾಲವಾಗಿರುತ್ತದೆ. ಆದ್ದರಿಂದ ಕೆಲವು ಸೂಚನೆಗಳಷ್ಟೆ ಸಾಕಾಗಬೇಕು. ಫ್ರಾನ್ಸೆಸ್ಕೊ ಕೊಲನ್ನನ ಗ್ರಂಥ ಒಂದು ಕನಸಿನ ರೂಪದಲ್ಲಿದ್ದು ಒಂದು ಮಾನವ ಸಂಬಂಧವೆಂದು ತೆಗೆದುಕೊಂಡ ನೈಸರ್ಗಿಕ ಪ್ರೇಮದ ದೈವೀಕರಣ ವಾಗಿದೆ; ಉಗ್ರವಾದ ಇಂದ್ರಿಯ ನಿಮಗ್ನತೆಯನ್ನು ಅನುಮೋದಿಸದೆ, ವಿವಾಹದ ಕ್ರಿಶ್ಚಿಯನ್ ಸಂಸ್ಕಾರವನ್ನವನು ಪೂರ್ಣವಾಗಿ ಬದಿಗಿರಿಸುತ್ತಾನೆ. ಆ ಗ್ರಂಥವನ್ನು ಬರೆದುದು ೧೪೫೩ರಲ್ಲಿ. ವಿಕ್ಟೋರಿಯನ್ ಯುಗದ ವಸಂತಸಮಯದಲ್ಲಿಷ್ಟ

ರೈಡರ್ ಹಗ್ಗಾರ್ಡ್ ಈ ವಿಷಯುವನ್ನೆತ್ತಿಕೊಂಡು, ತನ್ನದೇ ಆದ ರೀತಿಯಲ್ಲಿ ಅದನ್ನು ನಿರ್ವಹಿಸುತ್ತಾನೆ; ಅದನ್ನವನು ಕನಸಿನ ರೂಪದಲ್ಲಿ ಎರಕಹೊಯ್ಯದೆ, ನೈತಿಕ ಸಂಘರ್ಷದ ಒತ್ತಡವನ್ನು ಅನುಭವಿಸಲು ನಮಗೆ ಆಸ್ಪದವೀಯುತ್ತಾನೆ. ಗಯಟೆ, ಗ್ರೆಚೆನ್-ಹೆಲೆನ್-ಮಾಟರ್-ಗ್ಲೋರಿಯೋಸಾಳ ವಸ್ತುವನ್ನು ಫೌಸ್ಟನ ವರ್ಣರಂಜಿತ ಚಿತ್ರವಸ್ತ್ರದೊಳಕ್ಕೆ ಕೆಂಪುದಾರದಂತೆ ನೇಯುತ್ತಾರೆ. ನೀಷೆ ದೇವರ ಸಾವನ್ನು ಘೋಷಿಸುತ್ತಾನೆ ಮತ್ತು ಸ್ಪಿಟ್ಟೆಲರ್ ದೇವತೆಗಳ ವೃದ್ಧಿಕ್ಷಯಗಳನ್ನು ಋತುಗಳ ಕಥೆಯನ್ನಾಗಿ ಪರಿವರ್ತಿಸುತ್ತಾನೆ. ಅವರವರ ಪ್ರಾಮುಖ್ಯವೇನೇ ಇರಲಿ, ಈ ಒಬ್ಬೊಬ್ಬ ಕವಿಯೂ ಸಾವಿರ ಸಾವಿರ ಮಂದಿಯ ವಾಣಿಯಿಂದ ಮಾತನಾಡುತ್ತಾನೆ—ತನ್ನ ಕಾಲದ ಜಾಗೃತ ದೃಷ್ಟಿಯಲ್ಲಿನ ಬದಲಾವಣೆಗಳನ್ನು ಮುನ್ನುಡಿಯುತ್ತಾನೆ.

## ೨

## ಕವಿ

ಸೃಜನಶಕ್ತಿ ಸಂಕಲ್ಪದ ಸ್ವಾತಂತ್ರ್ಯದಂತೆ ರಹಸ್ಯವೊಂದನ್ನೊಳಗೊಂಡಿದೆ. ಮನೋವಿಜ್ಞಾನಿ ಈ ಎರಡೂ ಅಭಿವ್ಯಕ್ತಿಗಳನ್ನು ಕ್ರಿಯೆಗಳೆಂದು ವರ್ಣಿಸಬಲ್ಲ; ಆದರೆ ಅವು ಒಡ್ಡುವ ತಾತ್ವಿಕ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲಾರ. ಸೃಜನಶೀಲ ವ್ಯಕ್ತಿಯೊಂದು ಒಗಟು-ಅದನ್ನು ನಾವು ಅನೇಕ ವಿಧಗಳಲ್ಲಿ ಉತ್ತರಿಸಲು ಯತ್ನಿಸಬಹುದು, ಆದರೆ ಸದಾ ವಿಫಲರಾಗುತ್ತೇವೆ; ಈ ಸತ್ಯ, ಕಲಾವಿದನ ಹಾಗೂ ಅವನ ಕಲೆಯ ಪ್ರಶ್ನೆಯತ್ತ ಆಧುನಿಕ ಮನೋವಿಜ್ಞಾನ ಆಗೀಗ ತಿರುಗುವುದನ್ನು ತಪ್ಪಿಸಿಲ್ಲ. ಕಲಾಕೃತಿಯನ್ನು ಕಲಾವಿದನ ವೈಯಕ್ತಿಕ ಅನುಭವಗಳಿಂದ ನಿಷ್ಪತ್ತಿಗೊಳಿಸುವ ತನ್ನ ಕ್ರಮದಲ್ಲಿ ಒಂದು ಕೀಲಿಕೈಯನ್ನು ಕಂಡುಹಿಡಿದಿರುವುದಾಗಿ ಫ್ರಾಯ್ಡ್ ಆಲೋಚಿಸಿದ. ಈ ದಿಕ್ಕಿನಲ್ಲಿ ಕೆಲವು ಸಾಧ್ಯತೆಗಳಿರುವುದು ನಿಜ; ಏಕೆಂದರೆ, ನರವ್ಯಾಧಿಯಂತೆ ಒಂದು ಕಲಾಕೃತಿಯ ಮೂಲವನ್ನು ನಾವು ತೊಡಕುಗಳೆಂದು ಕರೆಯುವ ಮನೋಜೀವನದಲ್ಲಿನ ಗ್ರಂಥಿಗಳಲ್ಲಿ ಗುರುತಿಸಬಹುದೆಂಬುದು ಗ್ರಾಹ್ಯವಾಗಿತ್ತು. ನರವ್ಯಾಧಿಗಳಿಗೆ ಮಾನಸಿಕ ವಲಯದಲ್ಲೊಂದು ಹೇತುಕ ಮೂಲವಿದೆ; ಅವು ಭಾವಸ್ಥಿತಿಗಳಿಂದ ಮತ್ತು ನೈಜ ಅಥವಾ ಕಾಲ್ಪನಿಕ ಬಾಲ್ಯಾನುಭವಗಳಿಂದ ಉದ್ಭವಗೊಳ್ಳುತ್ತವೆ ಎಂಬುದು ಫ್ರಾಯ್ಡನ ಮಹಾಸಂಶೋಧನೆ. ರ್‍ಯಾಂಕ್ ಮತ್ತು ಸ್ಟೆಕೆಲ್‌ರಂತಹ ಅವನ ಕೆಲವರು ಅನುಯಾಯಿಗಳು ತತ್ಸಂಬಂಧವಾದ ವಿಚಾರ ಮಾರ್ಗಗಳನ್ನು ಹಿಡಿದು, ಮುಖ್ಯವಾದ ಫಲಿತಾಂಶಗಳನ್ನು ಸಾಧಿಸಿದ್ದಾರೆ. ಕವಿಯ ಮನೋರಚನೆ ಅವನ ಕೃತಿಯನ್ನು ಆಮೂಲಾಗ್ರವಾಗಿ ವ್ಯಾಪಿಸುತ್ತದೆಂಬುದನ್ನು ನಿರಾಕರಿಸುವಂತಿಲ್ಲ.

ವೈಯಕ್ತಿಕಾಂಶಗಳು ಕವಿಯ ಸಾಮಗ್ರಿಗಳ ಆಯ್ಕೆಯ ಮತ್ತು ಬಳಕೆಯ ಮೇಲೆ ವಿಶೇಷ ಪ್ರಭಾವ ಬೀರುತ್ತವೆ ಎಂಬ ಹೇಳಿಕೆಯಲ್ಲಿ ಹೊಸದೂ ಇಲ್ಲ. ಆದರೂ ಈ ಪ್ರಭಾವ ಎಷ್ಟು ವ್ಯಾಪಕವಾದುದು ಮತ್ತು ಯಾವ ವಿಚಿತ್ರ ಮಾರ್ಗಗಳಲ್ಲಿ ಅದು ಅಭಿವ್ಯಕ್ತಗೊಳ್ಳುತ್ತದೆ ಎಂಬುದನ್ನು ತೋರಿಸಿದ್ದಕ್ಕಾಗಿ ಫ್ರಾಯ್ಡ್ ಪಂಥಕ್ಕೆ ನಿಶ್ಚಯವಾಗಿಯೂ ಪ್ರಶಂಸೆ ಸಲ್ಲಬೇಕು.

ನರವ್ಯಾಧಿಯನ್ನು ಫ್ರಾಯ್ಡ್ ತೃಪ್ತಿಯ ನೇರಸಾಧನಕ್ಕೆ ಪ್ರತಿಯೆಂದು ತೆಗೆದುಕೊಳ್ಳುತ್ತಾನೆ. ಆದ್ದರಿಂದ ಅವನದನ್ನು ಏನೋ ಅನುಚಿತವಾದುದೆಂದು —ಒಂದು ದೋಷವೆಂದು, ತಂತ್ರವೆಂದು, ನೆಪವೆಂದು, ಐಚ್ಛಿಕ ಅಂಧತೆಯೆಂದು— ಭಾವಿಸುತ್ತಾನೆ. ಅವನ ಪಾಲಿಗೆ ಅದು ಮುಖ್ಯವಾಗಿ ಆಗಲೇಬಾರದಾಗಿದ್ದ ಒಂದು ನ್ಯೂನತೆ. ನರವ್ಯಾಧಿಯೆಂಬುದು ತೋರಿಕೆಗೆ ಒಂದು ವಿಕ್ಷೋಭೆಯಲ್ಲದೆ ಮತ್ತೇನೂ ಅಲ್ಲವಾದ್ದರಿಂದ—ಅರ್ಥರಾಹಿತ್ಯದಿಂದ ಅದು ಮತ್ತೂ ಉದ್ರೇಕಕರ —,ಅದರ ಪರವಾಗಿ ಯಾರೂ ಒಂದು ಒಳ್ಳೆಯ ಮಾತನ್ನಾಡುವುದಿಲ್ಲ. ಒಂದು ಕಲಾಕೃತಿಯನ್ನು ಕವಿಯ ದಮನಗಳ ಪರಿಭಾಷೆಯಲ್ಲಿ ವಿಶ್ಲೇಷಿಸಬಹುದಾದ ವಸ್ತುವೆಂದು ತೆಗೆದುಕೊಂಡಾಗ, ಅದು ನರವ್ಯಾಧಿಯ ಪ್ರಶ್ನಾಸ್ಪದ ಸಮೀಪಕ್ಕೆ ತರಲ್ಪಡುತ್ತದೆ. ಒಂದರ್ಥದಲ್ಲಿ ಆದಕ್ಕೆ ಒಳ್ಳೆಯ ಸಹವಾಸವೆ ಸಿಗುತ್ತದೆ; ಏಕೆಂದರೆ ಧರ್ಮ ಮತ್ತು ತತ್ತ್ವಶಾಸ್ತ್ರವನ್ನು ಫ್ರಾಯ್ಡನ ಮನೋವಿಜ್ಞಾನ ಇದೇ ಬೆಳಕಿನಲ್ಲಿ ಪರಿಗಣಿಸುತ್ತದೆ. ಈ ದೃಷ್ಟಿ ವೈಯಕ್ತಿಕ ನಿರ್ಧಾರಗಳ—ಅವಿಲ್ಲದೆ ಒಂದು ಕಲಾ ಕೃತಿಯನ್ನು ಕಲ್ಪಿಸಿಕೊಳ್ಳಲಾಗುವುದಿಲ್ಲ—ಸ್ಪಷ್ಟೀಕರಣಕ್ಕಿಂತ ಹೆಚ್ಚಿನದಾಗುವುದಿಲ್ಲ ವೆಂಬುದನ್ನು ಒಪ್ಪಿಕೊಂಡಲ್ಲಿ, ಯಾವ ಆಕ್ಷೇಪಣೆಯೂ ಏಳಲಾರದು. ಆದರೆ ಇಂತಹ ವಿಶ್ಲೇಷಣೆ ಕಲಾಕೃತಿಯನ್ನೆ ವಿವರಿಸುತ್ತದೆಂಬ ಹಕ್ಕನ್ನು ಮುಂದಿಟ್ಟಲ್ಲಿ,ಆಗ ಖಂಡಿತವಾದ ನಿರಾಕರಣೆ ಅಗತ್ಯವಾಗುತ್ತದೆ. ಒಂದು ಕಲಾಕೃತಿಯೊಳಕ್ಕೆ ನುಸುಳಿ ಕೊಳ್ಳುವ ವೈಯಕ್ತಿಕ ವೈಲಕ್ಷಣ್ಯಗಳು ಸಾರಭೂತವಾದುವಲ್ಲ; ವಾಸ್ತವವಾಗಿ, ಈ ವೈಲಕ್ಷಣ್ಯಗಳೊಡನೆ ನಾವು ಹೆಣಗಿದಷ್ಟೂ ಕಲೆಯ ಪ್ರಶ್ನೆ ಕಡಮೆಯಾಗುತ್ತದೆ. ಕಲಾಕೃತಿಯಲ್ಲಿ ಸಾರಭೂತವಾದುದೇನೆಂದರೆ, ಅದು ವೈಯಕ್ತಿಕ ವಲಯದಿಂದ ತೀರ ಮೇಲೇರಬೇಕು ಮತ್ತು ಮಾನವನಾಗಿ ಕವಿಯ ಆತ್ಮ ಹೃದಯಗಳಿಂದ ಮನುಕುಲದ ಆತ್ಮ ಹೃದಯಗಳನ್ನುದ್ದೇಶಿಸಿ ಮಾತನಾಡಬೇಕು. ಕಲಾವಲಯದಲ್ಲಿ ವೈಯಕ್ತಿಕ ಮುಖವೊಂದು ಪರಿಮಿತಿ—ಪಾಪ ಕೂಡ. ಒಂದು 'ಕಲಾ'ರೂಪ ಮೂಲಭೂತವಾಗಿ ವೈಯಕ್ತಿಕವಾಗಿದ್ದಾಗ, ಅದನ್ನೊಂದು ನರರೋಗವೆಂಬಂತೆ ಭಾವಿಸಬೇಕು. ಕಲಾವಿದರೆಲ್ಲ ಸ್ವಾನುರಕ್ತರು—ಎಂದರೆ, ಬಾಲಿಶ ಹಾಗೂ ಸ್ವರತಿ ಲಕ್ಷಣಗಳನ್ನುಳ್ಳ ಅಪ್ರಬುದ್ಧ ವ್ಯಕ್ತಿಗಳು—ಎಂಬ ಫ್ರಾಯ್ಡ್ ಪಂಥದ ಭಾವನೆಯಲ್ಲಿ ಸ್ವಲ್ಪ ಹುರುಳಿರಬಹುದು. ಈ ಹೇಳಿಕೆ ವ್ಯಕ್ತಿಯಾಗಿ ಕಲಾವಿದನ ಮಟ್ಟಿಗೆ ಮಾತ್ರ ಸಿಂಧುವಾದುದು; ಕಲಾವಿದನಾಗಿ ವ್ಯಕ್ತಿಗೆ ಅದರ ಸಂಬಂಧ

ವೇನೂ ಇಲ್ಲ. ಕಲಾವಿದನ ಅಧಿಕಾರದಲ್ಲಿ ಅವನಿಗೆ ಸ್ವರತಿಯಾಗಲಿ ಅನ್ಯರತಿಯಾಗಲಿ ಅಥವಾ ಮತ್ತಾವುದೇ ಅರ್ಥದ ರತಿಯಾಗಲಿ ಇರುವುದಿಲ್ಲ. ಅವನು ವಸ್ತುನಿಷ್ಠ ಮತ್ತು ವ್ಯಕ್ತ್ಯತೀತ—ಅಮಾನುಷ ಕೂಡ; ಏಕೆಂದರೆ, ಕಲಾವಿದನಾಗಿ ಅವನು ತನ್ನ ಕೃತಿಯೇ ಆಗಿರುತ್ತಾನೆ, ಮಾನವಜೀವಿಯಲ್ಲ.

ಪ್ರತಿಯೊಬ್ಬ ಸೃಜನಶೀಲ ವ್ಯಕ್ತಿಯೂ ವಿರುದ್ಧಪ್ರವೃತ್ತಿಗಳ ದ್ವಂದ್ವ ಅಥವಾ ಸಮನ್ವಯ. ಒಂದು ಕಡೆ ಅವನು ವೈಯಕ್ತಿಕ ಜೀವನವನ್ನುಳ್ಳ ಒಬ್ಬ ಮಾನವ ಜೀವಿ; ಮತ್ತೊಂದು ಕಡೆ, ಅವನೊಂದು ವ್ಯಕ್ತ್ಯತೀತವಾದ ಸೃಜನಾತ್ಮಕ ಕ್ರಿಯೆ. ಮಾನವಜೀವಿಯಾಗಿ ಅವನು ಸ್ವಸ್ಥ ಅಥವಾ ಅಸ್ವಸ್ಥನಾಗಿರಬಹುದಾದ್ದರಿಂದ, ಅವನ ಮಾನಸಿಕ ರಚನೆಯಲ್ಲಿ ಅವನ ವ್ಯಕ್ತಿತ್ವದ ನಿರ್ಧಾರಕಗಳನ್ನು ನಾವು ಕಂಡುಕೊಳ್ಳಬೇಕು. ಆದರೆ ಅವನ ಸೃಜನಸಾಧನೆಯನ್ನು ನೋಡಿಯೆ ಅವನನ್ನು ಕಲಾವಿದನ ಅಧಿಕಾರದಲ್ಲಿ ಅರ್ಥಮಾಡಿಕೊಳ್ಳುವುದು ಸಾಧ್ಯ. ಒಬ್ಬ ಇಂಗ್ಲಿಷ್ ಸಭ್ಯನ, ಒಬ್ಬ ಪ್ರಷ್ಯನ್ ಅಧಿಕಾರಿಯ ಅಥವಾ ಒಬ್ಬ ಜಗದ್ಗುರುವಿನ ಜೀವನ ವಿಧಾನವನ್ನು ವೈಯಕ್ತಿಕಾಂಶಗಳ ಪರಿಭಾಷೆಯಲ್ಲಿ ವಿವರಿಸಲು ಯತ್ನಿಸಿದರೆ ನಾವು ವಿಷಾದಕರವಾದ ತಪ್ಪನ್ನೆಸಗುತ್ತೇವೆ. ಆ ಸಭ್ಯ, ಅಧಿಕಾರಿ ಹಾಗೂ ಗುರು ಒಂದು ವ್ಯಕ್ತ್ಯತೀತ ಪಾತ್ರದಲ್ಲಿ ಕರ್ತವ್ಯ ನಿರ್ವಹಿಸುತ್ತಾರೆ ಮತ್ತು ಅವರ ಮನೋರಚನೆ ಒಂದು ವಿಶಿಷ್ಟ ವಸ್ತುನಿಷ್ಠತೆಯಿಂದ ಉಪಾಧಿಗೊಂಡಿದೆ. ಕಲಾವಿದ ಒಂದು ಅಧಿಕೃತ ಸ್ಥಾನದಲ್ಲಿ ಕರ್ತವ್ಯ ನಿರ್ವಹಿಸುವುದಿಲ್ಲವೆಂಬುದನ್ನು ನಾವೊಪ್ಪಬೇಕು—ತದ್ವಿರುದ್ಧವೆ ಸತ್ಯಕ್ಕೆ ಹತ್ತಿರವಾದುದು. ಆದರೂ ನಾನು ಹೆಸರಿಸುವ ಮಾದರಿಗಳನ್ನವನು ಒಂದು ವಿಷಯದಲ್ಲಿ ಹೋಲುತ್ತಾನೆ; ಏಕೆಂದರೆ ನಿಶ್ಚಿತವಾದ ಕಲಾಮನೋಧರ್ಮ ವೈಯಕ್ತಿಕ ಮನೋಜೀವನಕ್ಕೆ ವಿರುದ್ಧವಾಗಿ ಸಮಷ್ಟಿ ಮನೋಜೀವನದ ಅತಿಭಾರವನ್ನೊಳಗೊಳ್ಳುತ್ತದೆ. ಕಲೆಯೆಂಬುದು ಮಾನವ ಜೀವಿಯನ್ನು ಹಿಡಿದುಕೊಂಡು ತನ್ನ ಉಪಕರಣವನ್ನಾಗಿ ಮಾಡಿಕೊಳ್ಳುವ ಒಂದು ಬಗೆಯ ಆಂತರಿಕ ಪ್ರೇರಣೆ. ಸ್ವತಂತ್ರ ಸಂಕಲ್ಪವನ್ನುಳ್ಳ, ಸ್ವಂತ ಧ್ಯೇಯಗಳನ್ನರಸುವ ವ್ಯಕ್ತಿಯಲ್ಲ ಕಲಾವಿದ; ಕಲೆ ತನ್ನ ಉದ್ದೇಶಗಳನ್ನು ತನ್ನ ಮೂಲಕ ಈಡೇರಿಸಿಕೊಳ್ಳಲು ಅವಕಾಶವೀಯುವ ವ್ಯಕ್ತಿಯಾತ. ಮಾನವಜೀವಿಯಾಗಿ ಅವನಿಗೆ ಲಹರಿಗಳು, ಸಂಕಲ್ಪ ಹಾಗೂ ವೈಯಕ್ತಿಕ ಗುರಿಗಳಿರಬಹುದು; ಆದರೆ ಕಲಾವಿದನಾಗಿ ಅವನೊಂದು ಉನ್ನತಾರ್ಥದಲ್ಲಿ 'ಮಾನವ'—'ಸಮಷ್ಟಿ ಮಾನವ'; ಮನುಕುಲದ ಜಾಗೃತ ಮನೋಜೀವನವನ್ನು ಧಾರಣಮಾಡಿಕೊಳ್ಳುವವನು ಮತ್ತು ರೂಪಿಸುವವನು. ಈ ಕಠಿಣವಾದ ಕರ್ತವ್ಯ ನಿರ್ವಹಿಸಬೇಕಾದರೆ ಅವನು ಸುಖವನ್ನೂ ಸಾಮಾನ್ಯ ಮಾನವಜೀವಿಯ ಪಾಲಿಗೆ ಸಂಸಾರ ಸಾರಸರ್ವಸ್ವವಾಗಿರತಕ್ಕದ್ದೆಲ್ಲವನ್ನೂ ತ್ಯಾಗ ಮಾಡುವುದು ಅವಶ್ಯಕವಾಗುತ್ತದೆ.

ಹೀಗಿರುವುದರಿಂದ, ವಿಶ್ಲೇಷಣ ವಿಧಾನವನ್ನು ಬಳಸುವ ಮನೋ

ವಿಜ್ಞಾನಿಯ ಪಾಲಿಗೆ ಕಲಾವಿದ ವಿಶೇಷ ಸ್ವಾರಸ್ಯಕರ ವಸ್ತುವಾಗುವುದು ಆಶ್ಚರ್ಯಲ್ಲ. ಕಲಾವಿದನ ಬದುಕು ಘರ್ಷಣಮಯವಾಗದೆ ಗತ್ಯಂತರವಿಲ್ಲ, ಏಕೆಂದರೆ ಅವನಲ್ಲಿ ಎರಡು ಶಕ್ತಿಗಳು ಕ್ರಿಯಾನಿರತವಾಗಿವೆ—ಒಂದು ಕಡೆ, ಸುಖ ಸಂತೃಪ್ತಿ ಹಾಗೂ ಜೀವನದಲ್ಲಿ ಸುರಕ್ಷಿತತೆಯ ಸಾಮಾನ್ಯ ಮಾನವಾಕಾಂಕ್ಷೆ; ಮತ್ತೊಂದು ಕಡೆ, ಪ್ರತಿಯೊಂದು ವೈಯಕ್ತಿಕ ಬಯಕೆಯನ್ನೂ ಮೀರುವಷ್ಟು ದೂರ ಹೋಗಬಹುದಾದ ನಿಷ್ಠುರ ಸೃಜನಕಾಮನೆ. ಕಲಾವಿದರ ಬದಕುಗಳು ನಿಯತವಾಗಿ ತೀರ ಅತೃಪ್ತಿಕರವಾಗಿರುತ್ತವೆ—ದುರಂತವೆಂದು ಹೇಳಬೇಕಾಗಿಯೆ ಇಲ್ಲ; ಇದಕ್ಕೆ ಕಾರಣ, ಮಾನವೀಯ ಹಾಗೂ ವೈಯಕ್ತಿಕ ಪಾರ್ಶ್ವದಲ್ಲಿ ಅವರ ಅಧಮತೆ, ಕೆಟ್ಟ ದೈವನಿಯಾಮಕವಲ್ಲ. ವ್ಯಕ್ತಿ ಸೃಜನಾಗ್ನಿಯ ದೈವೀ ವರಕ್ಕೆ ದುಬಾರಿಯಾಗಿ ಬೆಲೆ ತೆರಬೇಕೆಂಬ ನಿಯಮಕ್ಕೆ ಅಪವಾದವೇ ಇಲ್ಲ. ನಮ್ಮಲ್ಲಿ ಪ್ರತಿಯೊಬ್ಬರಿಗೂ ಶಕ್ತಿಯ ನಿರ್ದಿಷ್ಟ ಬಂಡವಾಳ ಹುಟ್ಟಿನಿಂದಲೆ ಕೊಡಲ್ಪಟ್ಟಿರುವಂತೆ ತೋರುತ್ತದೆ. ನಮ್ಮ ರಚನೆಯಲ್ಲಿನ ಪ್ರಬಲತನು ಒತ್ತಡ ಈ ಶಕ್ತಿಯನ್ನು ಹಿಡಿದು ಸ್ವಾಧೀನ ಪಡಿಸಿಕೊಂಡು, ಅದರಿಂದ ಬೆಲೆಯುಳ್ಳದ್ದೇನೂ ಬರದಂತೆ ಬರಿದು ಮಾಡುತ್ತದೆ. ಈ ರೀತಿ ಸೃಜನಶಕ್ತಿ ಮಾನುಷ ಪ್ರೇರಣೆಗಳನ್ನು ಎಷ್ಟರಮಟ್ಟಿಗೆ ಬರಿದುಗೈಯಬಲ್ಲುದೆಂದರೆ, ವೈಯಕ್ತಿಕ ಅಹಂಭಾವ ಎಲ್ಲಬಗೆಯ ದುರ್ಗುಣಗಳನ್ನು—ನೈಷ್ಠುರ್ಯ, ಸ್ವಾರ್ಥ ಮತ್ತು ಜಂಬ ('ಸ್ವ-ರತಿ')—ಮತ್ತು ಪ್ರತಿಯೊಂದು ಬಗೆಯ ದುರ್ವ್ಯಸನವನ್ನು ಬೆಳೆಸಿಕೊಳ್ಳಲೇಬೇಕು, ಜೀವದ ಕಿಡಿಯನ್ನು ಕಾಪಾಡಿಕೊಳ್ಳುವುದಕ್ಕಾಗಿ ಮತ್ತು ತಾನು ಸಂಪೂರ್ಣವಾಗಿ ಬರಿದಾಗದಿರುವುದಕ್ಕಾಗಿ. ಕಲಾವಿದರ ಸ್ವ-ರತಿ ಹೇಗೆಂದರೆ, ತಮ್ಮ ಶೈಶವದಿಂದಲೂ ಪ್ರೀತಿಹೀನ ಜನರ ಮಾರಕ ಪ್ರಭಾವದಿಂದ ತಮ್ಮನ್ನು ರಕ್ಷಿಸಿಕೊಳ್ಳಬೇಕಾದ, ಆ ಉದ್ದೇಶಕ್ಕಾಗಿಯೆ ದುರ್ಗುಣಗಳನ್ನು ಬೆಳೆಸಿಕೊಳ್ಳುವ ಮತ್ತು ಜೀವಮಾನವೆಲ್ಲ ಬಾಲಿಶರಾಗಿ ಅಥವಾ ಅಸಹಾಯರಾಗಿ ಅಥವಾ ನೈತಿಕ ನಿಯಮ ಭಂಜಕರಾಗಿ ಉಳಿಯುವುದರ ಮೂಲಕ ಅನಂತರ ಒಂದು ಅದಮ್ಯ ಅಹಂಕೇಂದ್ರತೆಯನ್ನು ಕಾದುಕೊಳ್ಳುವ ಅಕ್ರಮಜನ್ಯ ಅಥವಾ ಅಲಕ್ಷಿತ ಶಿಶುಗಳ ಸ್ವರತಿಯಂತೆ. ಕಲಾವಿದನನ್ನು ವಿವರಿಸತಕ್ಕದ್ದು ಅವನ ಕಲೆಯೇ ಹೊರತು ಅವನ ವೈಯಕ್ತಿಕ ಬದುಕಿನ ಕೊರತೆಗಳು ಹಾಗೂ ಘರ್ಷಣೆಗಳಲ್ಲ ಎಂಬುದನ್ನು ನಾವು ಸಂದೇಹಿಸುವುದೆಂತು? ಅವು, ಅವನು ಕಲಾವಿದನೆಂಬ—ಎಂದರೆ, ಸಾಮಾನ್ಯ ಮನುಷ್ಯನಿಗಿಂತ ಉನ್ನತವಾದ ಕರ್ತವ್ಯವೊಂದಕ್ಕೆ ಹುಟ್ಟಿನಿಂದಲೆ ಆಮಂತ್ರಿತನಾದವನೆಂಬ—ಸತ್ಯದ ವಿಷಾದಕರ ಫಲಿತಾಂಶಗಳಷ್ಟೆ. ಒಂದು ವಿಶಿಷ್ಟ ಸಾಮರ್ಥ್ಯವೆಂದರೆ ಒಂದು ನಿರ್ದಿಷ್ಟ ದಿಕ್ಕಿನಲ್ಲಿ ಶಕ್ತಿಯ ದುಬಾರಿ ವ್ಯಯ—ತತ್ಪರಿಣಾಮವಾಗಿ, ಬದುಕಿನ ಮತ್ತಾವುದೋ ಪಾರ್ಶ್ವ ಬರಿದಾಗುವಿಕೆ.

ತನ್ನ ಕೃತಿ ತನ್ನೊಡನೆಯೆ ಹುಟ್ಟುತ್ತದೆ, ಬೆಳೆಯುತ್ತದೆ ಮತ್ತು ಪಕ್ವವಾಗುತ್ತದೆ ಎಂದು ಕವಿ ತಿಳಿದಿರಲಿ ಅಥವಾ ಆಲೋಚನೆಯನ್ನು ತೆಗೆದುಕೊಂಡು

ತಾನದನ್ನು ಶೂನ್ಯದಿಂದ ಉತ್ಪತ್ತಿ ಮಾಡುತ್ತೇನೆ ಎಂದು ಭಾವಿಸಲಿ—ಎರಡಕ್ಕೂ ಅಂತರವಿಲ್ಲ. ಮಗು ತಾಯನ್ನೆಂತೊ ಅಂತೆ ಅವನ ಸ್ವಂತ ಕೃತಿ ಅವನನ್ನು ಮೀರಿ ಬೆಳೆಯುತ್ತದೆ ಎಂಬ ಸತ್ಯವನ್ನು ಅವನ ಅಭಿಪ್ರಾಯ ಬದಲಿಸಲಾರದು. ಸೃಜನಕ್ರಿಯೆಗೆ ಹೆಣ್ಣುಗುಣವಿದೆ. ಸೃಜನಾತ್ಮಕ ಕೃತಿ ಸುಪ್ತಪ್ರಜ್ಞೆಯ ಆಳಗಳಿಂದ —ಮಾತೃವಲಯದಿಂದ ಎನ್ನಬಹುದು—ಉದ್ಭವಿಸುತ್ತದೆ. ಸೃಜನಶಕ್ತಿ ಮೇಲುಗೈಯಾದಾಗಲೆಲ್ಲ ಮಾನವಜೀವನ ಸುಪ್ತಪ್ರಜ್ಞೆಯಿಂದ—ಅದು ಕ್ರಿಯಾತ್ಮಕ ಸಂಕಲ್ಪಕ್ಕೆ ವಿರುದ್ಧ—ಆಳಲ್ಪಡುತ್ತದೆ ಮತ್ತು ರೂಪಗೊಳ್ಳುತ್ತದೆ; ಪ್ರಜ್ಞಾಪೂರ್ವಕ ಅಹಂಭಾವ, ಘಟನೆಗಳ ಅಸಹಾಯ ಪ್ರೇಕ್ಷಕನಷ್ಟೆ ಆಗಿದ್ದು ಒಳಪ್ರವಾಹವೊಂದರಲ್ಲಿ ಕೊಚ್ಚಿಹೋಗುತ್ತದೆ. ಪ್ರಗತಿಯಲ್ಲಿರುವ ಕೃತಿ ಕವಿಯ ಅದೃಷ್ಟವಾಗುತ್ತದೆ ಮತ್ತು ಅವನ ಮಾನಸಿಕ ಬೆಳವಣಿಗೆಯನ್ನು ನಿರ್ಣಯಿಸುತ್ತದೆ. 'ಫೌಸ್ಟ'ನ್ನು ಸೃಜಿಸುವವನು ಗಯಟೆಯಲ್ಲ; ಗಯಟೆಯನ್ನು ಸೃಜಿಸತಕ್ಕದ್ದು 'ಫೌಸ್ಟ್'. ಇದರಿಂದ ನನ್ನ ಮನಸ್ಸಿನಲ್ಲಿರತಕ್ಕದ್ದು ತೀರ ಪರಿಚಿತವಾದ ಏನೋ ಒಂದನ್ನು ಸೂಚಿಸುವ ಒಂದು ರೂಪಕವಲ್ಲ, ಸ್ಪಷ್ಟವಾಗಿ ಗೊತ್ತಿಲ್ಲದ—ಆದರೆ ಉತ್ಕಟವಾಗಿ ಜೀವಂತವಾಗಿರುವ—ಏನೋ ಒಂದನ್ನು ಪ್ರತಿನಿಧಿಸುವ ಒಂದು ಅಭಿವ್ಯಕ್ತಿ. ಇಲ್ಲಿ ಅದು ಪ್ರತಿಯೊಬ್ಬ ಜರ್ಮನನ ಹೃದಯದಲ್ಲೂ ಇರುವಂಥದು, ಅದು ಹುಟ್ಟಲು ಗಯಟೆ ನೆರವಾಗಿದ್ದಾನೆ. ಒಬ್ಬ ಜರ್ಮನ್ ಅಲ್ಲದೆ ಮತ್ತಾವನಾದರೂ 'ಫೌಸ್ಟ'ನ್ನು ಅಥವಾ Also Sprach Zarathustra ವನ್ನು ಬರೆಯುವುದನ್ನು ನಾವು ಕಲ್ಪಿಸಿಕೊಳ್ಳಬಲ್ಲೆವೆ? ಅವೆರಡೂ ಜರ್ಮನ್ ಹೃದಯದಲ್ಲಿ ಪ್ರತಿಧ್ವನಿಸುವ ಏನೋ ಒಂದನ್ನು —ಜೇಕಬ್ ಬರ್ಕ್‌ಹರ್ಟ್ ಒಮ್ಮೆ ಕರೆದಂತೆ ಒಂದು 'ಆದಿಪ್ರತಿಮೆ'ಯನ್ನು, ಒಬ್ಬ ವೈದ್ಯನ ಅಥವಾ ಲೋಕಬೋಧಕನ ಚಿತ್ರವನ್ನು—ಮಿಡಿಯುತ್ತವೆ. ಜ್ಞಾನಿಯ, ರಕ್ಷಕನ ಅಥವಾ ಉದ್ಧಾರಕನ ಆದಿಪ್ರತಿಮೆ ಮಾನವನ ಸುಪ್ತಪ್ರಜ್ಞೆಯಲ್ಲಿ ಸಂಸ್ಕೃತಿಯ ಉದಯದಿಂದಲೂ ಸುಪ್ತವಾಗಿ ಹುದುಗಿದೆ; ಕಾಲ ಕೀಲು ತಪ್ಪಿದಾಗ ಅಥವಾ ಮಾನವ ಸಮಾಜವೊಂದು ತೀವ್ರದೋಷಕ್ಕೆ ಪಕ್ಕಾದಾಗ ಅದು ಜಾಗೃತವಾಗುತ್ತದೆ. ಜನ ಹಾದಿತಪ್ಪಿದಾಗ ಅವರಿಗೆ ಒಬ್ಬ ಮಾರ್ಗದರ್ಶಿಯ ಅಥವಾ ಬೋಧಕನ ಅಥವಾ ವೈದ್ಯನ ಅಗತ್ಯದ ಅರಿವಾಗುತ್ತದೆ. ಈ ಆದಿಪ್ರತಿಮೆಗಳು ಹಲವಾರಿರುತ್ತವೆ; ಆದರೆ ಅವು ವ್ಯಕ್ತಿಯ ಕನಸುಗಳಲ್ಲಿ ಅಥವಾ ಕಲಾಕೃತಿಗಳಲ್ಲಿ ಗೋಚರಿಸುವುದಿಲ್ಲ—ಸಾಧಾರಣ ದೃಷ್ಟಿಯ ಮೊಂಡುತನದಿಂದ ಅವು ಅಸ್ತಿತ್ವಕ್ಕೆ ಬರುವತನಕ. ಏಕಪಾರ್ಶ್ವಿಕತೆ ಮತ್ತು ಹುಸಿದೃಷ್ಟಿ ಜಾಗೃತ ಜೀವನದ ಲಕ್ಷಣಗಳಾದಾಗ, ಅವು—'ಸ್ವಾಭಾವಿಕವಾಗಿ' ಎನ್ನಬಹುದು—ಕಾರ್ಯಪ್ರೇರಿತವಾಗುತ್ತವೆ ಮತ್ತು ವ್ಯಕ್ತಿಗಳ ಕನಸುಗಳಲ್ಲಿ ಹಾಗೂ ಕಲಾವಿದರ ಮತ್ತು ದ್ರಷ್ಟಾರರ ದರ್ಶನಗಳಲ್ಲಿ ಬೆಳಕಿಗೆ ಬಂದು, ತನ್ಮೂಲಕ ಯುಗದ ಮಾನಸಿಕ ಸಮತೋಲನವನ್ನು ಪುನರ್‌ರಕ್ಷಿಸುತ್ತವೆ.

ಈ ರೀತಿ ಕವಿಕೃತಿ ಅವನು ಬದುಕಿರುವ ಸಮಾಜದ ಆಧ್ಯಾತ್ಮಿಕ ಅವಶ್ಯಕತೆಯನ್ನು ಪೂರೈಸುತ್ತದೆ ಮತ್ತು ಈ ಕಾರಣದಿಂದಾಗಿ ಅವನ ಪಾಲಿಗೆ ಅವನ ಕೃತಿ ವೈಯಕ್ತಿಕ ಅದೃಷ್ಟಕ್ಕಿಂತ ಅರ್ಥಪೂರ್ಣವಾಗುತ್ತದೆ. ಅವನು ಮುಖ್ಯವಾಗಿ ತನ್ನ ಕೃತಿಯ ಉಪಕರಣವಾಗಿದ್ದುಕೊಂಡು, ಅದಕ್ಕೆ ಅಧೀನನಾಗಿರುತ್ತಾನೆ; ಅವನದನ್ನು ನಮಗೆ ವಿವರಿಸಬೇಕೆಂದು ನಾವು ನಿರೀಕ್ಷಿಸುವ ಕಾರಣವಿಲ್ಲ. ಅವನು ತನ್ನಲ್ಲಿರುವ ಅತ್ಯುತ್ತಮವಾದುದನ್ನು, ಅದಕ್ಕೆ ರೂಪುಕೊಡುವುದರಿಂದ ಅವನು ಮಾಡಿದ್ದಾನೆ; ವ್ಯಾಖ್ಯಾನವನ್ನು ಅವನು ಇತರರಿಗೆ ಮತ್ತು ಭವಿಷ್ಯಕ್ಕೆ ಬಿಡಬೇಕು. ಒಂದು ಮಹಾ ಕಲಾಕೃತಿ ಕನಸಿನಂತೆ; ಅದೆಷ್ಟೇ ಸ್ಫುಟವಾಗಿ ತೋರಿದರೂ ತನ್ನನ್ನು ವಿವರಿಸಿಕೊಳ್ಳುವುದಿಲ್ಲ ಮತ್ತು ಎಂದೂ ಅಸಂದಿಗ್ಧವಾಗುವುದಿಲ್ಲ. 'ಇದು ಸತ್ಯ' ಎಂದು ಕನಸು ಎಂದೂ ಹೇಳದು. ಪ್ರಕೃತಿ ಒಂದು ಸಸ್ಯವನ್ನು ಬೆಳೆಯಲು ಬಿಡುವಂತೆಯೆ ಅದೊಂದು ಪ್ರತಿಮೆಯನ್ನೊಡಗಿಸುತ್ತದೆ; ನಾವು ನಮ್ಮ ನಿರ್ಣಯಗಳನ್ನು ರೂಪಿಸಿಕೊಳ್ಳಬೇಕು. ಒಬ್ಬ ವ್ಯಕ್ತಿಗೆ ದುಃಸ್ವಪ್ನ ಬಿದ್ದರೆ, ಅವನು ತೀರ ಭಯಗ್ರಸ್ತನಾಗಿದ್ದಾನೆ ಇಲ್ಲವೆ ಅದರಿಂದ ತೀರ ಹೊರಗಾಗಿದ್ದಾನೆ ಎಂದರ್ಥ; ಅವನಿಗೆ ವೃದ್ಧಜ್ಞಾನಿಯ ಕನಸು ಬಿದ್ದರೆ, ಅವನು ತೀರ ಪಾಂಡಿತ್ಯ ಪ್ರವೃತ್ತನಾಗಿದ್ದಾನೆಂದು ಅರ್ಥವಾಗಬಹುದು, ಅವನಿಗೊಬ್ಬ ಶಿಕ್ಷಕನ ಅಗತ್ಯವಿದೆ ಎಂದೂ ಆಗಬಹುದು. ಮಾರ್ಮಿಕವಾಗಿ ಎರಡರ್ಥಗಳೂ ಒಂದೇ ಕಡೆ ಸೇರುತ್ತವೆ: ಕಲಾಕೃತಿ ಕಲಾವಿದನ ಮೇಲೆ ಕೆಲಸಮಾಡಿದಂತೆ ನಮ್ಮ ಮೇಲೆ ಮಾಡಲು ನಾವು ಅವಕಾಶವೀಯಬಲ್ಲವರಾದಾಗ ಅದು ತಿಳಿಯುತ್ತದೆ. ಅದರ ಅರ್ಥವನ್ನು ಗ್ರಹಿಸಬೇಕಾದರೆ, ಅವನನ್ನದು ಒಮ್ಮೆ ರೂಪಿಸಿದಂತೆ ನಮ್ಮನ್ನು ರೂಪಿಸಲು ಅದಕ್ಕೆ ಆಸ್ಪದ ಕೊಡಬೇಕು. ಆಗ ಅವನ ಅನುಭವದ ಸ್ವರೂಪ ನಮಗರ್ಥವಾಗುತ್ತದೆ. ಪ್ರಜ್ಞೆಯ ತಳದಲ್ಲಿರುವ ಸಮಷ್ಟಿ ಮನಸ್ಸಿನ ಚಿಕಿತ್ಸಕ ಹಾಗೂ ಉದ್ಧಾರಕ ಶಕ್ತಿಗಳನ್ನು, ಅದರ ಪ್ರತ್ಯೇಕತೆ ಹಾಗೂ ವೇದನಾಯುತ ದೋಷಗಳೊಡನೆ ಅವನು ಬಳಸಿಕೊಂಡಿದ್ದಾನೆ; ಎಲ್ಲರನ್ನೂ ಒಳಗೊಂಡಿರುವ, ಎಲ್ಲ ಮಾನುಷ ಅಸ್ತಿತ್ವಕ್ಕೂ ಸಾಮಾನ್ಯ ಲಯವೊಂದನ್ನೀಯುವ ಮತ್ತು ವ್ಯಕ್ತಿ ತನ್ನ ಭಾವನೆಯನ್ನೂ ಹೋರಾಟವನ್ನೂ ಸಮಗ್ರ ಮಾನವಕುಲಕ್ಕೆ ನಿವೇದಿಸಲು ಅವಕಾಶವೀಯುವ ಮಾತೃಕೆಯನ್ನು ಅವನು ಪ್ರವೇಶಿಸಿದ್ದಾನೆ—ಎಂಬುದು ನಮಗೆ ಕಂಡುಬರುತ್ತದೆ.

ಕಲಾಸೃಷ್ಟಿಯ ಮತ್ತು ಕಲಾಪರಿಣಾಮದ ರಹಸ್ಯವನ್ನು, 'ಭಾಗವಹಿಸುವ ರಹಸ್ಯ'ದ (Participation Mystique) ಸ್ಥಿತಿಗೆ — ವ್ಯಕ್ತಿ ಬದುಕದೆ ಸಮಗ್ರ ಮಾನವ ಬದುಕುವಂಥ, ಏಕಜೀವಿಯ ಸುಖದುಃಖಗಳು ಗಣನೆಗೊಳ್ಳದೆ ಮಾನವಾಸ್ತಿತ್ವವಷ್ಟೆ ಗಣನೆಗೊಳ್ಳುವಂಥ ಅನುಭವಸ್ತರಕ್ಕೆ—ಮರಳುವಿಕೆಯಲ್ಲಿ ಕಂಡುಕೊಳ್ಳಬೇಕು. ಈ ಕಾರಣದಿಂದಲೆ ಪ್ರತಿಯೊಂದು ಮಹಾ ಕಲಾಕೃತಿ

ವಸ್ತುನಿಷ್ಠವೂ ವ್ಯಕ್ತ್ಯತೀತವೂ ಆಗಿರತಕ್ಕದ್ದು; ಹಾಗಿದ್ದೂ ನಮ್ಮೆಲ್ಲರನ್ನೂ ಅಗಾಧವಾಗಿ ವಿಚಲಿತಗೊಳಿಸತಕ್ಕದ್ದು. ಈ ಕಾರಣದಿಂದಲೆ ಕವಿಯ ವೈಯಕ್ತಿಕ ಜೀವನ ಅವನ ಕಲೆಗೆ ಸಾರಪ್ರಾಯವೆನಿಸದೆ ಹೆಚ್ಚೆಂದರೆ ಅವನ ಸೃಜನಕಾರ್ಯಕ್ಕೆ ಬೆಂಬಲವೊ ಆತಂಕವೊ ಆಗಿರತಕ್ಕದ್ದು. ಅವನು ಒಬ್ಬ ಅರಸಿಕನ, ಸತ್ಪ್ರಜೆಯ, ನರ ರೋಗಿಯ, ಮೂರ್ಖನ ಅಥವಾ ಅಪರಾಧಿಯ ಹಾದಿ ಹಿಡಿಯಬಹುದು. ಅವನ ವೈಯಕ್ತಿಕ ಜೀವನ ಅನಿವಾರ್ಯವೂ ಸ್ವಾರಸ್ಯಪೂರ್ಣವೂ ಆಗಿರಬಹುದು; ಆದರೆ ಕವಿಯನ್ನದು ವಿವರಿಸುವುದಿಲ್ಲ.

ಅನು : ಸಿ.ಪಿ.ಕೆ.

ಆರ್. ಕೆ. ದಿವಾಕರ್

# ಕೋಟೆಯಿಲ್ಲದ ಗೋಡೆ!

ಮೋಟುಗೋಡೆಯ ಆಚೆ
ಒಬ್ಬ ಕಾವಲುಗಾರ— ಕತ್ತೆ !
ಒಳಗೆಲ್ಲ ಏನಿಲ್ಲ—ಬಯಲೋ ಬಯಲು!
ತಡೆದು ನಿಲ್ಲಿಸುತಾನೆ
ಏನೆಲ್ಲ ಬಂದರೂ !........
ಹಾವು ! ಹಲ್ಲಿ ! ಹಳ್ಳ !
ದಾಸವಾಳದ ಹೂವು !
ಸೇಬು, ಕಿತ್ತಳೆಹಣ್ಣು !
ಯಾವುದೋ ಬಣ್ಣದಲಿ ಅರಳಿ ಎಲೆ !........
ಯಾರ ರಕ್ಷಣೆಗಾಗಿ ಈ ಎಲ್ಲ ಎಚ್ಚರಿಕೆ ?
ಶ್ರೀ
ರಂಗಪಟ್ಟಣದಲ್ಲಿ ಸುಲ್ತಾನನಾಳಿದ್ದ !
ಹಿಂದೊಂದು ಕಾಲದಲಿ ಮೆರೆದಿತ್ತು ಹಂಪೆ !
ಎಂದೋ ಸತ್ತವರಿಗಿಂದತ್ತು ಫಲವಿಲ್ಲ—
ಮುಂದೆ ಸಾಯುುವರೆಂಬ ಅಂಜಿಕೆಯೂ ಇಲ್ಲ !
........ಬಿಟ್ಟುಬಿಡೋ ಮಹರಾಯ—
ನಾಯಿಯೋ-ಕೋಳಿಯೋ ಆಗಿ ಬದುಕುತ್ತೇನೆ!

ಜಿ. ವರದರಾಜರಾವ್

# ಸಾಧಾರಣ

೧

ಅತ್ತ ಸೌಮ್ಯ–ಇತ್ತ ಸಾಧಾರಣ
ನಡುವೆ ಜೀವಧಾರಣ!
ಹಿರಿಯರಿಟ್ಟ ಹೆಸರು ಚೆನ್ನ
ಆದರೇನು? ನಮ್ಮ ಬನ್ನ
ತಪ್ಪಲಿಲ್ಲ ಇಂದಿಗು!
ತಪ್ಪದೇನು ಎಂದಿಗು?

ಸೌಮ್ಯರಾಜ ಬಂದೆ ಬಂದ
ಆಯಿತೇನು ಆನಂದ?
ಕುದಿಯೆ ದೇಶದೇಶವೆಲ್ಲ
ವಿರಸ ಹೊರತು ಬೇರೆ ಇಲ್ಲ,
ಪ್ರಕ್ಷುಬ್ಧವಾಗಿದೆ
ಶಾಂತಿ ಹೆಸರೆ ಅಡಗಿದೆ!

ಒಂದೆ ಎರಡೆ ನಮ್ಮ ನೋವು?
ಬದುಕಿಗಿಂತ ಲೇಸು ಸಾವು
ಎನಿಸುತಿಹುದು ಜೀವನ.
ಎತ್ತ ನೋಡಲಲ್ಲಿ ಸ್ವಾರ್ಥ!
ಒಲುಮೆ ನಲುಮೆ ಎಲ್ಲ ವ್ಯರ್ಥ!
ಬರಿ ಅರಣ್ಯರೋದನ!

ಒಡಕುದನಿಯೆ ನಿತ್ಯಮಂತ್ರ
ಚಣಚಣವೂ ನವಕುತಂತ್ರ
ಅಟ್ಟಹಾಸವೆಸಗಿದೆ.

ಮನುಜಗುಣಕೆ ಬೆಲೆಯೆ ಇಲ್ಲ
ಹಣದ ತೊತ್ತು ಲೋಕವೆಲ್ಲ
ಊರೆ ನರಕವಾಗಿದೆ.

ಮುಗಿಲ ಮುಟ್ಟಿ ಸಿಡಿಯುತಿಹುದು
ಬಡವನೊಡಲ ಅಬ್ಬರ
ನೆಲಕೆ ನೆಲವೆ ನಡುಗುತಿಹುದು
ಧನಿಕಗಿಲ್ಲ ಕನಿಕರ!

ಹಳೆಯದೆಲ್ಲ ಮೂಲೆ ಪಾಲು
ಹೊಸತು ಹೆಸರು ಮೋಹಕ
ಸಂತೆಯಾಯ್ತು ಜನರ ಸಾಲು
ಯಾರು ಇಲ್ಲ ನಾಯಕ!

ಕಲಿತ ವಿದ್ಯೆ ಕೊಳೆಯುತಿಹುದು
ಬದುಕಿಗಿಲ್ಲ ಆಸರೆ
ಯುವಕರಾಸೆ ಕುಸಿಯುತಿಹುದು
ಹರೆಯದೆದೆಯೆ ಕುಗ್ಗಿರೆ.

ಕೊನೆಯೆ ಇಲ್ಲ ಕೊರತೆಗೆ
ನಿತ್ಯ ನವೆವ ಬಾಳಿಗೆ!

ಇತರರಂತೆ ತಲೆಯನೆತ್ತಿ
ನಾವು ಮೆರೆವುದೆಂದಿಗೆ?
ಎಲ್ಲರಂತೆ ಹಿರಿಮೆ ಬಿತ್ತಿ
ನಾವು ನಲಿವುದೆಂದಿಗೆ?

೨

ಸೌಮ್ಯ ರಮ್ಯವೆನಿಸಲಿಲ್ಲ
ಸರಿಯುತಿಹುದು ದೂರಕೆ.
ಸಾಧಾರಣ ಮೆಲ್ಲ ಮೆಲ್ಲ
ಸುಳಿಯುತಿಹುದು ಸನಿಹಕೆ.

ಹಿಡಿಯಲೇನು ಹುದುಗಿಹುದೋ
ಯಾರು ಬಲ್ಲರು?

ಹೆಸರಲೇನು ಅಡಗಿಹುದೋ
ಯಾರು ನುಡಿವರು ?

ಸೊಗದ ಹೆಗಲೊ ? ನೊಗದ ಹೊರೆಯೊ ?
ದಯವೊ, ದುಃಖವೋ ?
ಯುಗದ ಯುಗದ ಹಳೆಯ ಕಥೆಯೊ
ಭಯವೊ, ಭಾಗ್ಯವೋ ?

ವರುಷದೊಡೆಯ ಸಾಧಾರಣ
ಇದೋ ನಿನಗೆ ಸ್ವಾಗತ !
ಬೀರು ನಿನ್ನ ಕೃಪಾಕಿರಣ
ಮನುಜಕುಲವ ಬೆಳಗುತ !

ನೊಂದು ಬೆಂದ ಜನರು ನಾವು
ಒಂದೆ ಆಸೆ ನಮ್ಮದು.
ಹೆಚ್ಚನೇನು ಬಯಸೆವಾವು
ಒಂದೆ ಮಾತು ನಮ್ಮದು.

ಕೊರತೆ ನಮ್ಮ ಕಾಡದಂತೆ
ವಿರಸ ಮುಖವ ತಿವಿಯದಂತೆ
ಸಾಧಾರಣ ಬದುಕನಿತ್ತು
ನಡಸು ಕೈಯ ನೀಡುತ !
ಹೆಸರಿನಂತೆ ಮಹಿಮೆವೆತ್ತು
ಹರಸು ನಮ್ಮ ಸಲಹುತ !

ಆಗದಿರಲು ಸಾಧಾರಣ
ತಾನು ಅಸಾಧಾರಣ
ಅದುವೆ ಪುಣ್ಯ, ಅದುವೆ ಕರುಣ
ಸಕಲ ಭಾಗ್ಯಕಾರಣ !

ಅತ್ತ ಸೌಮ್ಯ–ಇತ್ತ ಸಾಧಾರಣ
ನಡುವೆ ಜೀವಧಾರಣ ! *

* ಬೆಂಗಳೂರಿನ ಆಕಾಶವಾಣಿಯ ಕೃಪೆಯಿಂದ.

ಚೆನ್ನಣ್ಣ ವಾಲೀಕಾರ

## ಭೂತ

ಪರೀಕ್ಷೆ ಬಂದಾಗೊಮ್ಮೆ
ಪ್ರಶ್ನೆಗುತ್ತರಿಸಲು—
ಶುರು ಮಾಡುವದೊಂದೇ
ತಡ;
ಧಿಗ್ಗನೆ ಬಂದು ಕೂಡುವದು
ನನ್ನ ಆ—
ಭೂತ.

ನಾಲಗೆಯನು ಬತ್ತಿಸಿ
ಕತ್ತಲನು ಚಿಮುಕಿಸಿ
ಮೆದುಳಿನಡುಗೆಯನುಂಡು
ಹೊರಟು ಹೋದಾಗ
ನಾ—
ಕಾಲಿ ಪೇಪರ ಕೊಟ್ಟು
ಜೋಲು ಮುಖದಿಂದ
ಮನೆಗೆ
ಬರಬೇಕಾಗುವದು.

ವರುಷವಿಡೀ ಆ ಭೂತ
ಎಲ್ಲಿ ವಾಸಿಸುವದೇನೋ
ಮತ್ತೆ ಮತ್ತೆ
ಪರೀಕ್ಷೆ ಬಂದಾಗೊಮ್ಮೆ
ತಪ್ಪದೇ ಬಂದು
ಹೀಗೆ ಪೀಡಿಸುವದು
ಹೀಗೇ ಪೀಡಿಸುವದು
ಅಂದಾಗ............

ಬಿ. ಎಸ್. ಸಣ್ಣಯ್ಯ

# ಓಲೆ ಗ್ರಂಥಗಳು

ಮಾನವನ ಬುದ್ಧಿಯ ಬೆಳವಣಿಗೆಯನ್ನು ಮೂರು ಮುಖ್ಯ ಹಂತಗಳನ್ನಾಗಿ ವಿಭಾಗಿಸಬಹುದು. ಅವಾವುವೆಂದರೆ ಮಾತನಾಡುವಿಕೆ, ರೇಖಾಚಿತ್ರಗಳನ್ನು ಬರೆಯುವಿಕೆ ಮತ್ತು ಬಣ್ಣದ ಚಿತ್ರಗಳನ್ನು ಬಿಡಿಸುವಿಕೆ. ಮಾತನಾಡುವುದಕ್ಕೆ ಕಲಿತನಂತರ ಚಿತ್ರೀಕರಣ ಪ್ರಾರಂಭವಾಯಿತೊ, ಮಾತನಾಡಲು ಬರದಿದ್ದಾಗ ತಮ್ಮ ಅಭಿವ್ಯಕ್ತಿಯನ್ನು ಮತ್ತೊಬ್ಬರಿಗೆ ವಿಶದಪಡಿಸಲು ರೇಖಾಚಿತ್ರಗಳನ್ನು ಬರೆದು ತೋರಿಸುವುದರ ಮೂಲಕ ಪ್ರಾರಂಭವಾಯಿತೊ ಎಂಬುದು ಇಲ್ಲಿ ಪ್ರಕೃತ ವಲ್ಲ. ಮಾನವನು ಕಲಿತ ಮಾತನ್ನು, ಹೊಳೆದ ಭಾವವನ್ನು, ಆದ ಅನುಭವವನ್ನು ಬರೆದಿಡಲು ಪ್ರಯತ್ನಿಸಿದನು. ಕಾಲದಿಂದ ಕಾಲಕ್ಕೆ, ಒಂದೆಡೆಯಿಂದ ಮತ್ತೊಂ ದೆಡೆಗೆ ತಮ್ಮ ಅಭಿಪ್ರಾಯಗಳನ್ನು ಕಾಯ್ದಿಡುವಲ್ಲಿ ಅಥವಾ ವಿನಿಮಯ ಮಾಡಿ ಕೊಳ್ಳುವಲ್ಲಿ, ಒಂದು ವಿಷಯವನ್ನು ಹಲವು ಜನ ಓದಿ ತಿಳಿಯುವಲ್ಲಿ ಬರವಣಿಗೆ ಬಂದು ಸೇರಿತು. ರಾಜ ಮಹಾರಾಜರುಗಳು ತಾವು ಮಾಡಿದ ಕಾಯಿದೆ ಕಟ್ಟುಗಳನ್ನು, ದಾನಧರ್ಮಾದಿಗಳನ್ನು ಶಾಶ್ವತವಾಗಿರಿಸುವಲ್ಲಿ ಬರವಣಿಗೆಯ ಆವಶ್ಯಕತೆಯುಂಟಾಯಿತು. ಈ ಎಲ್ಲ ಪ್ರಯತ್ನದ ಫಲವಾಗಿ ನಮಗೆ ದೊರಕುವ ವಿವಿಧ ರೂಪದ ಬರವಣಿಗೆಯ ವಸ್ತುಗಳಲ್ಲಿ ಓಲೆಗ್ರಂಥಗಳು ಬಹು ಮುಖ್ಯವಾದುವು. ಇವುಗಳಲ್ಲಿ ವೈದ್ಯ, ಜ್ಯೋತಿಷ, ತಾಂತ್ರಿಕ, ಕಾವ್ಯೇತಿಹಾಸಾದಿ ವಿವಿಧ ವಿಷಯಗಳು ಅಡಕವಾಗಿವೆ.

ಹೀಗೆ ವಿವಿಧ ವಿಷಯಗಳನ್ನು ಅಡಕ ಮಾಡುವಲ್ಲಿ ಈಗಿನಂತೆ ಕಾಗದ ಲೇಖನಿಗಳು ದೊರೆಯದಿದ್ದಾಗ ತಮ್ಮ ಕೈಗೆ ಸಿಕ್ಕಿದ ಕೆಲವು ಪದಾರ್ಥಗಳನ್ನು ಬರೆಯುವ ಸಾಧನಗಳನ್ನಾಗಿ ಜನರು ಉಪಯೋಗಿಸಿಕೊಂಡರು. ಅವುಗಳಲ್ಲಿ ಮುಖ್ಯವಾದುವೆಂದರೆ, ಕಲ್ಲು, ಲೋಹ, ಚರ್ಮ, ಮರ, ಮರದ ಎಲೆಗಳು, ಸಸ್ಯ ಪದಾರ್ಥಗಳು. ಜನರು ತಮ್ಮ ಬುದ್ಧಿಶಕ್ತಿಯ ಸಾಮರ್ಥ್ಯಕ್ಕನುಗುಣವಾಗಿ ಅವುಗಳನ್ನು ವಿವಿಧರೀತಿಯಲ್ಲಿ ಹದಗೊಳಿಸಿ ಬರೆಯಲು ಬಳಸಿಕೊಂಡರು. ಅವುಗಳಲ್ಲಿ ಪಪೈರಸ್ (Papyrus) ಎಂಬ ಈಜಿಪ್ಟ್‌ದೇಶದ ನದಿಪ್ರದೇಶದಲ್ಲಿ

ಬೆಳೆಯುತ್ತಿದ್ದ ಜೊಂಡುಜಾತಿಯ ಸಸ್ಯದಿಂದ ತಯಾರಿಸಿದ ಹಾಳೆಗಳನ್ನು ಯೂರೋಪ್ ದೇಶಗಳಲ್ಲಿ ಹೆಚ್ಚಾಗಿ ಉಪಯೋಗಿಸಿದರು. ಭಾರತದಲ್ಲಿ ಶಿಲೆ ಮತ್ತು ಲೋಹಗಳನ್ನು ಬಿಟ್ಟರೆ ಬರವಣಿಗೆಗೆ ಹೆಚ್ಚಾಗಿ ಉಪಯೋಗಿಸಿರುವ ವಸ್ತುಗಳೆಂದರೆ ಭೂರ್ಜಪತ್ರಗಳು ಮತ್ತು ತಾಳೆ ಅಥವಾ ಓಲೆಗರಿಗಳು.

ಈ ಓಲೆಗರಿಗಳನ್ನು ಬರವಣಿಗೆಗೆ ಉಪಯೋಗಿಸುತ್ತಿದ್ದುದನ್ನು ಪ್ಲಿನಿ (ಕ್ರಿ. ಶ. ೨೩–೭೯) ಎಂಬ ಪ್ರಕೃತಿತಜ್ಞನು (Naturalist) ಹೇಳಿದ್ದಾನೆ. ಭಾರತ ದೇಶವನ್ನು ಸಂದರ್ಶಿಸಿದ ಹ್ಯೂಯಾನ್‌ತ್ಸಾಂಗ್‌ನು (ಕ್ರಿ. ಶ. ೬೨೯–೬೪೫) ಕೊಂಕಣಪುರದ ಉತ್ತರಕ್ಕೆ ತಾಳೆಮರಗಳ ಕಾಡಿರುವುದನ್ನೂ, ಇವುಗಳ ಎಲೆಗಳನ್ನು ಜನರು ಬರವಣಿಗೆಗಾಗಿ ಉಪಯೋಗಿಸುವುದನ್ನೂ ಹೇಳಿದ್ದಾನೆ. ಸುಮಾರು ಕ್ರಿ. ಶ. ೧೦೩೦ ರಲ್ಲಿ ಭಾರತಕ್ಕೆ ಬಂದಿದ್ದ ಆಲ್‌ಬೆರೂನಿ (Alberuni)[1] ತಾಳೆ ಮತ್ತು ಭೂರ್ಜ ಪತ್ರಗಳನ್ನು ನೋಡಿದ್ದುದಾಗಿ ತಿಳಿಸಿದ್ದಾನೆ. ಆತನು ಖರ್ಜೂರ ಅಥವಾ ಉತ್ತುತ್ತೆ ಮತ್ತು ತೆಂಗಿನ ಮರಗಳನ್ನು ಹೋಲುವ ಒಂದು ಜಾತಿಯ ಮರಗಳು ದಕ್ಷಿಣದೇಶ ದಲ್ಲಿ ಬೆಳೆಯುತ್ತವೆ, ಅವುಗಳು ತಿನ್ನುವ ಹಣ್ಣುಗಳನ್ನು ಬಿಡುತ್ತವೆ, ಅವುಗಳ ಎಲೆ ಗಳು ಒಂದು ಗಜ ಉದ್ದವಾಗಿಯೂ ಮೂರು ಕೈಬೆರಳುಗಳಷ್ಟು ಅಗಲವಾಗಿಯೂ ಇವೆ ಎಂದು ತಿಳಿಸಿದ್ದಾನೆ. ಜನರು ಇವನ್ನು ತಾರಿ (ತಾಲ ಅಥವ ತಾರ) ಎಂದು ಕರೆಯುವರೆಂದೂ, ಬರವಣಿಗೆಗೆ ಉಪಯೋಗಿಸುವರೆಂದೂ, ಬರೆದ ನಂತರ ಎಲ್ಲ ಎಲೆ ಗಳನ್ನೂ ಅವುಗಳ ಮಧ್ಯದಲ್ಲಿ ಮಾಡಿದ ರಂಧ್ರದ ಮೂಲಕ ದಾರವನ್ನು ಹಾಕಿ ಒಟ್ಟಿಗೆ ಕಟ್ಟಿಡುವರೆಂದೂ ತಿಳಿಸಿದ್ದಾನೆ. ಸುಮಾರು ಕ್ರಿ. ಶ. ೧೪೪೧ರಲ್ಲಿ ಬಂದಿದ್ದ ಅಬ್ದುರ್ ರಜಾಕ್ (Abdur Razzak) ಎಂಬಾತನು ವಿಜಯನಗರದಲ್ಲಿ ಜನರು ಈ ತಾಳೆಗರಿಗಳನ್ನು ಬರೆಯಲು ಉಪಯೋಗಿಸುತ್ತಿದ್ದುದನ್ನು ನೋಡಿದುದಾಗಿ ಹೇಳಿ, ಈ ಓಲೆಗಳಲ್ಲಿ ಎರಡು ವಿಧವೆಂದೂ, ಒಂದು ತಾಲ ಮತ್ತೊಂದು ಶ್ರೀತಾಲವೆಂದೂ ತಿಳಿಸಿ ದ್ದಾನೆ. ತಾಲವು ಎರಡು ಬೆರಳು ಅಗಲವಾಗಿಯೂ, ಎರಡು ಗಜ ಉದ್ದವಾಗಿಯೂ ಇದ್ದು ಇದರ ಮೇಲೆ ಕಬ್ಬಿಣದ ಕಂಠದಿಂದ ಬರೆಯುತ್ತಿದ್ದರೆಂದೂ, ಈ ಅಕ್ಷರಗಳು ಬಣ್ಣದಿಂದ ಕೂಡಿರದೆ ಸ್ವಲ್ಪ ಬಿಳುಪಾಗಿ ಮಾತ್ರ ಕಾಣುತ್ತಿದ್ದುವೆಂದೂ ತಿಳಿಸಿದ್ದಾನೆ. ಮತ್ತೊಂದು ವಿಧವಾದ ಶ್ರೀತಾಲದ ಎಲೆಯನ್ನು ಮೊದಲು ಕಪ್ಪುಮಾಡಿ, ಅದರ ಮೇಲೆ ಲೇಖನಿಯಂತಹ ಮೃದುವಾದ ಕಲ್ಲಿನಿಂದ ಬರೆಯುತ್ತಿದ್ದರೆಂದೂ, ಇದರಲ್ಲಿ ಕಪ್ಪು ಎಲೆಯ ಮೇಲೆ ಬಿಳಿಯ ಅಕ್ಷರಗಳು ಕಾಣುತ್ತಿದ್ದುವೆಂದೂ ಹೇಳಿದ್ದಾನೆ. ಈ ರೀತಿ ಬರೆಯುತ್ತಿದ್ದುದನ್ನು ಎ. ಹ್ಯಾಮಿಲ್ಟನ್ ಎಂಬಾತನು ತಾನು ಕ್ಯಾನರ (ದಕ್ಷಿಣ ಕನ್ನಡ, ಉತ್ತರ ಕನ್ನಡ) ಮತ್ತು ದಕ್ಷಿಣ ಭಾರತದಲ್ಲಿ ಕಂಡುದಾಗಿ ಹೇಳಿ ದ್ದಾನೆ. ರಾಜೇಂದ್ರಮಿತ್ರ ಅವರು ಬಂಗಾಳದಲ್ಲಿ 'ಚಂಡಿ' ಎಂಬ ಗ್ರಂಥ ಓಲೆ ಯಲ್ಲಿರುವುದಾಗಿ ತಿಳಿಸಿದ್ದಾರೆ.

[1] Alberuni's India, ed. by Edward C. Sachau, p. 171.

ಈ ಓಲೆ ಅಥವಾ ತಾಳೆ ಗ್ರಂಥಗಳು ಭಾರತದ ವಿವಿಧ ಭಾಗಗಳಲ್ಲಿ ದೊರೆತರೂ ಒರಿಸ್ಸಾ, ಗುಜರಾತ್, ಮದರಾಸು, ಕೇರಳ ಮತ್ತು ಮೈಸೂರು ಪ್ರಾಂತ್ಯಗಳಲ್ಲಿ ಹೇರಳವಾಗಿ ದೊರೆಯುತ್ತವೆ. ಮೈಸೂರು ಕನ್ನಡ ಅಧ್ಯಯನಸಂಸ್ಥೆ ಮತ್ತು ಪ್ರಾಚ್ಯ ವಿದ್ಯಾ ಸಂಶೋಧನಾಲಯಗಳಲ್ಲಿ, ಮದರಾಸು ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ಸ್ ಲೈಬ್ರರಿ ಮತ್ತು ಅಡಿಯಾರ್ ಲೈಬ್ರರಿಗಳಲ್ಲಿ, ತಿರುವಾಂಕೂರು ಸರಸ್ವತಿಮಹಲ್ ಲೈಬ್ರರಿಯಲ್ಲಿ ಬಹುಮಟ್ಟಿಗೆ ಹಸ್ತಪ್ರತಿಗಳೆಲ್ಲವೂ ಓಲೆಯಲ್ಲಿವೆ. 'ಗುಪ್ತರ ಲಿಪಿಯಲ್ಲಿ ಬರೆದ ಹಳೆಯ ಓಲೆಗ್ರಂಥವನ್ನು (೬ನೆಯ ಶತಕ) ಜಪಾನಿನ ಹೊರಿಂಜಿ (Horinzi) ಎಂಬ ಮಠದಲ್ಲಿ ಕಾಪಾಡಲಾಗಿದೆ. ತಕ್ಲಮಕನ್ (Taklamakan) ಮರುಭೂಮಿಯಲ್ಲಿ ಇನ್ನೂ ಹಳೆಯಕಾಲದ ಓಲೆಗ್ರಂಥಗಳಿರಬಹುದೆಂದೂ, ಇದನ್ನು ನಿಖರವಾಗಿ ಹೇಳಲು ಯಾವ ಆಧಾರಸಾಹಿತ್ಯವೂ ಇಲ್ಲವೆಂದೂ, ಆದರೆ ನೇಪಾಳದಲ್ಲಿ ಗುಪ್ತ ಲಿಪಿಯ ಹಸ್ತಪ್ರತಿಗಳನ್ನು (೭ನೆಯ ಶತಕ) ನೋಡಿದುದಾಗಿಯೂ, ಗುಜರಾತಿನಲ್ಲಿರುವ ಪಟ್ಟನ್ (Pattan) ಹಸ್ತಪ್ರತಿಗಳ ಭಂಡಾರವು ಅತ್ಯಂತ ಪ್ರಾಚೀನವಾದ ಹಸ್ತಪ್ರತಿಗಳನ್ನು ಹೊಂದಿದ್ದು, ಇಲ್ಲಿ ಅತ್ಯಂತ ಪುರಾತನವಾದ ಕಾಲ ನಮೂದಿತವಾಗಿರುವ ನಿಶಿತಚೂರ್ಣಿ ಎಂಬ ಹಸ್ತಪ್ರತಿಯು ವಿಕ್ರಮ ಸಂವತ್ಸರ ೧೧೫೭ (ಕ್ರಿ.ಶ. ೧೧೦೧) ಎಂದೂ, ಇನ್ನೂ ಪುರಾತನವಾದ ಹಸ್ತಪ್ರತಿಗಳು ಇರಬಹುದಾದರೂ ಅವುಗಳಲ್ಲಿ ಕಾಲವು ಉಕ್ತವಾಗಿಲ್ಲದಿರುವುದರಿಂದ ಇಷ್ಟೇ ಸರಿ ಎಂದು ಹೇಳುವಂತಿಲ್ಲ'ವೆಂದೂ ಬರೋಡ ಓರಿಯಂಟಲ್ ಇನ್‌ಸ್ಟಿಟ್ಯೂಟ್‌ನ ನಿರ್ದೇಶಕರಾದ ಬಿ. ಭಟ್ಟಾಚಾರ್ಯರು ತಿಳಿಸಿದ್ದಾರೆ.

'ಜಯಸಲ್ಮೀರ್‌ನಲ್ಲಿ ಜೈನತತ್ತ್ವಕ್ಕೆ ಸಂಬಂಧಪಟ್ಟ ಜ್ಞಾನ ಭಂಡಾರಗಳಿವೆ. ಪುರಾತನ ಓಲೆ ಹಸ್ತಪ್ರತಿಗಳ ಸಂಗ್ರಹ ಶಂಭುನಾಥ್ ಜೈನಮಂದಿರದ ಹತ್ತಿರವಿರುವ ಕೋಟೆಯಲ್ಲಿದೆ. ಇಲ್ಲಿ ಕೆಲವು ಹಸ್ತಪ್ರತಿಗಳು ಅಸ್ತವ್ಯಸ್ತವಾಗಿ ಶಿಥಿಲವಾಗಿವೆ. ಇವುಗಳಲ್ಲಿ ಕುವಲಯಮಾಲಾ, ಮಹಾಪುರುಷ ಚರಿತ, ವಾಸುದೇವ ಹಿಂಡಿ—ಮೊದಲಾದ ಮುಖ್ಯ ಗ್ರಂಥಗಳಿವೆ. ಪಂಚಮಿಕಹ ಎಂಬ ಗ್ರಂಥದ ಹಸ್ತಪ್ರತಿಯ ಕಾಲ ವಿ. ಶ. ೧೧೦೯ (ಕ್ರಿ. ಶ. ೧೦೫೩), ಮತ್ತು ಕುವಲಯಮಾಲಾ ವಿ. ಶ. ೧೧೩೯ (ಕ್ರಿ. ಶ. ೧೦೮೨). ವಾಸುದೇವ ಹಿಂಡಿ ಗ್ರಂಥದಲ್ಲಿ ಕಾಲ ಉಲ್ಲೇಖಿತವಾಗಿಲ್ಲವಾದರೂ ಪುರಾತನವಾದುದೆಂದು ತೋರುತ್ತದೆ. ಇಲ್ಲಿರುವ ಅತ್ಯಂತ ಪುರಾತನವಾದ ಓಲೆಗ್ರಂಥ ಕ್ರಿ. ಶ. ೮೫೩ರಿಂದ ೯೮೨ರ ವರೆಗೆ' ಎಂದು ಜೋಧಪುರದ ಜಿನಸಾಗರ ಸೂರಿ ಹೇಳುತ್ತಾರೆ.

ಮೈಸೂರು ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿಗಳ ಕೋಶಾಗಾರದಲ್ಲಿರುವ, ಕಾಲ ನಮೂದಿತವಾಗಿರುವ ಪುರಾತನ ಗ್ರಂಥವೆಂದರೆ ಸುಮಾರು ಕ್ರಿ. ಶ. ೧೨೩೫ರಲ್ಲಿದ್ದ ಗುಣವರ್ಮನ ಪುಷ್ಪದಂತ ಪುರಾಣವೆಂಬ ಚಂಪೂಗ್ರಂಥ. ಇದು ೨೨.೧ ಇಂಚು ಉದ್ದವಾಗಿದ್ದು ೨ ಇಂಚು ಅಗಲವಾಗಿದೆ. ಪತ್ರದ

ಒಂದೊಂದು ಕಡೆಯಲ್ಲಿ ಸರಾಸರಿ ೯ ಪಂಕ್ತಿಗಳಿದ್ದು ಪ್ರತಿ ಪಂಕ್ತಿಯಲ್ಲಿಯೂ ೧೧೫ ಅಕ್ಷರಗಳಿವೆ. ಅಕ್ಷರಗಳು ಗುಂಡಾಗಿ ಸ್ಫುಟವಾಗಿವೆ. ಈ ಪ್ರತಿಯ ಕೊನೆಯಲ್ಲಿ "ಶ್ರೀಮತ್ಪುಷ್ಪದಂತ ಪುರಾಣವನು ಸಕವರ್ಷ ೧೩೫೮ ರಾಕ್ಷಸ ಸಂವತ್ಸರದ ಚೈತ್ರ ಶು ೩ ಬುಧವಾರದಂದುದ್ಧರಿಸಿಪಟ್ಟುದು ಮಂಗಳ ಮಹಾಶ್ರೀ" ಎಂದು ಪ್ರತಿಕಾರನು ಬರೆದಿದ್ದಾನೆ. ಎಂದರೆ ಈ ಪ್ರತಿಯ ಕಾಲ ಕ್ರಿ. ಶ. ೧೪೩೬ ಆಗುತ್ತದೆ. ಮತ್ತೊಂದು ಕಾಲ ನಮೂದಿತವಾಗಿರುವ, ಈಗ ದೊರೆತಿರುವ ಪ್ರತಿಗಳಲ್ಲಿ ಪುರಾತನವಾದ ಪ್ರತಿಯೆಂದರೆ ಕ್ರಿ. ಶ. ೯೪೧ರಲ್ಲಿದ್ದ ಪಂಪನ ಆದಿಪುರಾಣ. ಇದು ಶ್ರವಣಬೆಳಗೊಳದ ಜೈನ ಭಂಡಾರದಲ್ಲಿನ ಪ್ರತಿ. ಇದರ ಮೈಕ್ರೊಫಿಲಂ ಪ್ರತಿ ಕನ್ನಡ ಅಧ್ಯಯನ ಸಂಸ್ಥೆಯ ಕೋಶಾಗಾರದಲ್ಲಿದೆ. ಇದರ ಕಾಲ ಶಾ. ಶ. ೧೩೦೧, ಎಂದರೆ ಕ್ರಿ. ಶ. ೧೩೭೯. ಕಾಲ ನಮೂದಾಗಿರುವ ಮತ್ತೊಂದು ಪ್ರತಿಯೆಂದರೆ ಕ್ರಿ. ಶ. ೧೫೫೪ರಲ್ಲಿ ಪ್ರತಿಮಾಡಿದ ಗದುಗಿನ ನಾರಣಪ್ಪನ ಮಹಾಭಾರತದ ಪ್ರತಿ. ಇದರ ಪ್ರತಿಪತ್ರದ ಎರಡು ರಂಧ್ರಗಳಿಗೂ ಬೆಳ್ಳಿಯ ಉಂಗುರಗಳನ್ನು ಅಳವಡಿಸಲಾಗಿದೆ. ಈ ರಂಧ್ರಗಳಲ್ಲಿ ಎಲೆಗಳನ್ನು ಪೋಣಿಸಿ ಕಟ್ಟನ್ನು ಕಟ್ಟಲು ಹಾಕಿರುವ ದಾರವನ್ನು ಅತ್ತಿತ್ತ ಎಳೆಯುವಾಗ ಓಲೆಯು ಹರಿಯದಿರಲೆಂಬ ಶ್ರದ್ಧೆಯಿಂದ ಈ ಬೆಳ್ಳಿಯ ಉಂಗುರಗಳನ್ನು ಅಳವಡಿಸಿರುವುದು ಅತ್ಯಂತ ಮೆಚ್ಚುಗೆಯ ವಿಷಯವಾಗಿದೆ.

ಪ್ರಾಚ್ಯವಿದ್ಯಾಸಂಶೋಧನಾಲಯದಲ್ಲಿರುವ ದೇವೀಸ್ತೋತ್ರ ಮತ್ತು ರಾಮಾಯಣದ ಭಾಗವಾದ ಸುಂದರಕಾಂಡ ಹಸ್ತಪ್ರತಿಗಳು ಸೂಕ್ಷ್ಮಲಿಪಿಗೆ ಪ್ರಸಿದ್ಧವಾಗಿವೆ. ದೇವೀ ಸ್ತೋತ್ರದಲ್ಲಿ ಒಟ್ಟು ೯೦ ಪತ್ರಗಳಿದ್ದು ಪ್ರತಿಪತ್ರವೂ ೩⅜"×೧⅜" ಅಳತೆಯುಳ್ಳದಾಗಿದೆ. ಬರವಣಿಗೆಯ ಅಳತೆ ೨⅞" × ೧⅛". ಈ ಉದ್ದದಲ್ಲಿ ೨೫ ಅಕ್ಷರಗಳನ್ನು ಕೊರೆದಿದ್ದಾರೆ. ಅಗಲದಲ್ಲಿ ೧೮–೨೩ ಪಂಕ್ತಿಗಳಿವೆ. ತೆಲುಗು ಲಿಪಿಯಲ್ಲಿದೆ. ಸುಂದರ ಕಾಂಡ ಗ್ರಂಥ ಗ್ರಂಥಾಕ್ಷರದಲ್ಲಿದೆ. ಇದರ ಪ್ರತಿ ಪತ್ರವೂ ೪⅜" × ೧⅛" ಅಳತೆಯುಳ್ಳದಾಗಿದ್ದರೂ ಬರವಣಿಗೆಯ ಭಾಗದ ಅಳತೆ ೩⅛" × ೧⅜". ಈ ಉದ್ದದಲ್ಲಿ ೪೭ ಅಕ್ಷರಗಳಿದ್ದು, ಅಗಲದಲ್ಲಿ ೨೧–೨೫ ಸಾಲುಗಳಿವೆ. ಇವುಗಳ ಜೊತೆಗೆ ಇದೇ ಮಾದರಿಯಲ್ಲಿ ಬರೆದಿರುವ ಹೆಸರು ತಿಳಿಯದ ಯಾವುದೋ ಗ್ರಂಥದ ಒಂದು ಪತ್ರ ಮಾತ್ರ ದೊರೆತಿರುವುದರ ಅಳತೆ ೧೮" × ೧⅛". ಈ ೧⅛" ಅಗಲದಲ್ಲಿ ೨೨ ಪಂಕ್ತಿಗಳಿದ್ದು ೧೮" ಉದ್ದದಲ್ಲಿ ೪೨೦ ಅಕ್ಷರಗಳಿವೆ ಎಂದಾಗ ಬೆರಗು ಹುಟ್ಟಿ ಕುತೂಹಲ ಕೆರಳುವುದು ಸಹಜವಾಗಿದೆ.

ಈ ಎಲ್ಲ ಹಸ್ತಪ್ರತಿಗಳಿಗೆ ಪ್ರತಿಸ್ಪರ್ಧಿಯಾಗಿ ನಿಲ್ಲುವ ಮತ್ತೊಂದು ಗ್ರಂಥವೆಂದರೆ ಧವಳ ಮಹಾಗ್ರಂಥ. ಇದು ಜೈನ ಸಿದ್ಧಾಂತದರ್ಶನಕ್ಕೆ ಮೀಸಲಾಗಿಟ್ಟಿರುವ ಹಸ್ತಪ್ರತಿ. ಇದು ದಕ್ಷಿಣ ಕನ್ನಡ ಜಿಲ್ಲೆಯ ಮೂಡಬಿದರೆ ಜೈನಮಂದಿರದಲ್ಲಿದೆ. ಇದರ ವೈಶಿಷ್ಟ್ಯವೆಂದರೆ ಮೇಲೆ ಹೇಳಿದ ಎಲ್ಲ ಪ್ರತಿಗಳಂತೆ ಕೊರೆ

ಅಕ್ಷರಗಳಲ್ಲ. ಮಸಿಯನ್ನು ಉಪಯೋಗಿಸಿ ಲೇಖನಿಯ ಸಹಾಯದಿಂದ ಪತ್ರದ ಮೇಲೆ ಅಕ್ಷರಗಳನ್ನು ಬರೆಯಲಾಗಿದೆ. ಕೊರೆದು ಮಸಿಯನ್ನು ಹಾಕದಿರುವುದರಿಂದ ಸುಲಭವಾಗಿ ಅಳಿಸಬಹುದಾಗಿದೆ. ಇದರಲ್ಲಿ ಧವಳ, ಜಯಧವಳ, ಮಹಾಧವಳ ಎಂಬ ಮೂರು ಕಟ್ಟುಗಳಿವೆ. ಇದರ ಅಳತೆ ೩೪"-೩೫" × ೩"-೩೪". ಪ್ರತಿ ಪಕ್ಕದಲ್ಲಿ ೧೫–೧೬ ಪಂಕ್ತಿಗಳಿದ್ದು, ಒಂದೊಂದು ಪಂಕ್ತಿಯಲ್ಲಿಯೂ ೧೩೦ ಅಕ್ಷರಗಳಿವೆ. ಮೊದಲನೆಯದರಲ್ಲಿ ೭೭೭ ಪತ್ರಗಳೂ, ಎರಡನೆಯದರಲ್ಲಿ ೫೧೮ ಪತ್ರಗಳೂ, ಮೂರನೆಯದರಲ್ಲಿ ೨೧೯ ಪತ್ರಗಳೂ ಇದ್ದು, ಒಟ್ಟಿಗೆ ಒಂದು ಬೃಹದ್ಗ್ರಂಥವೆನ್ನಿಸಿದೆ. ಇದರಲ್ಲಿ ಬಳಸಿರುವ ಭಾಷೆ ಅರ್ಧಮಾಗಧಿ, ಲಿಪಿಯು ಕನ್ನಡ ಶಾಸನಲಿಪಿ. ಇದರ ಕಾಲ ಸುಮಾರು ೧೧ನೆಯ ಶತಮಾನವೆಂದು ತಿಳಿದುಬರುತ್ತದೆ. ಇದರ ಮತ್ತೊಂದು ವಿಶೇಷವೆಂದರೆ ವಿಷಯ ನಿರೂಪಣೆಗೆ ಸಹಾಯವಾಗಿ ಅಲ್ಲಲ್ಲಿಯೇ ಚಿತ್ರಗಳನ್ನು ಕೊಟ್ಟಿರುವುದು. ಇಂತಹ ಚಿತ್ರಗಳನ್ನು ಈ ಪ್ರತಿಯಲ್ಲಿಯೇ ಅಲ್ಲದೆ ಇತರ ಹಲವಾರು ಪ್ರತಿಗಳಲ್ಲಿ ಸುಂದರವಾಗಿ, ಕಲಾತ್ಮಕವಾಗಿ ಕಂಡರಿಸಿದ್ದಾರೆ. ಇವುಗಳಲ್ಲಿ ಮೂಡಬಿದರೆಯ ನೇಮಿಚಂದ್ರನ ನೇಮಿನಾಥಪುರಾಣವೂ ಒಂದಾಗಿದೆ.

ಹೀಗೆ ವಿವಿಧ ರೀತಿಯ ಬರವಣಿಗೆಯನ್ನೂ ಮತ್ತು ಒಂದೇ ಕೃತಿಯ ಹಲವಾರು ಪ್ರತಿಗಳನ್ನೂ ನಾವು ಕಾಣುತ್ತಿರುವುದು ಗ್ರಂಥಗಳನ್ನು ನಕಲುಮಾಡಿ ಜನರು ಉಪಯೋಗಿಸುತ್ತಿದ್ದುದರಿಂದ. ನಮಗೆ ಕೃತಿಕಾರನೇ ಬರೆದ ಪ್ರತಿಗಳು ದೊರೆಯುವುದು ದುರ್ಲಭ. ದೊರೆಯುವ ಪ್ರತಿಗಳೆಲ್ಲವೂ ನಕಲುಗಳೇ. ಇಂತಹ ನಕಲುಗಳನ್ನು ಮಾಡುವಾಗ್ಗೆ ವಿವಿಧ ಪ್ರತಿಕಾರರು ವಿವಿಧ ರೀತಿಯ ಬರವಣಿಗೆಯನ್ನು ಮಾಡಿದ್ದಾರೆ. ಆಯಾ ಭಾಷಾಗ್ರಂಥಗಳಲ್ಲಿ ಆಯಾ ಭಾಷಾಲಿಪಿಯನ್ನೇ ಸಾಮಾನ್ಯವಾಗಿ ಉಪಯೋಗಿಸಿದರೂ ಓದುಗರ ಇಚ್ಛೆಗೆ ಅನುಸಾರವಾಗಿ, ಆಯಾ ಪ್ರಾಂತ್ಯದ ವಿಭಾಗದ ಜನರ ರೂಢಿಗೆ ತಕ್ಕಂತೆ ಕನ್ನಡ ತೆಲುಗು ತುಳು ತಿಗಳಾರಿ ನಾಗರಿ ನಂದಿನಾಗರಿ ಗ್ರಂಥ–ಮೊದಲಾದ ಹಲವಾರು ಲಿಪಿಗಳನ್ನು ಕನ್ನಡ ಸಂಸ್ಕೃತ ಎಲ್ಲ ಗ್ರಂಥಗಳಲ್ಲಿಯೂ ಉಪಯೋಗಿಸಿರುವುದು ಕಂಡುಬರುತ್ತದೆ. ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ಭಾಷಾಭೂಷಣ ಹಸ್ತಪ್ರತಿಯು ಈ ಮಾದರಿಗೆ ಅತ್ಯಂತ ಉತ್ತಮ ನಿದರ್ಶನವಾಗಿದೆ. ಇದರಲ್ಲಿ ನೋಡುವುದು ಮಲೆಯಾಳಿ ಲಿಪಿಯನ್ನು, ಓದುವುದು ಸಂಸ್ಕೃತ ಭಾಷೆಯನ್ನು, ತಿಳಿಯುವುದು ಕನ್ನಡ ವ್ಯಾಕರಣವನ್ನು ಎಂದಾಗ ಹಲವರು ಆಶ್ಚರ್ಯಪಡುವುದು ಸಹಜವಾದುದೇ ಆಗಿದೆ. ನಕಲುಮಾಡುವ ವ್ಯಕ್ತಿಗಳು ಬಹುಪ್ರಯಾಸದಿಂದ ಈ ಕೆಲಸ ನಿರ್ವಹಿಸುತ್ತಿದ್ದರು. ಕೆಲವರು ಅದನ್ನೇ ಒಂದು ವೃತ್ತಿಯನ್ನಾಗಿಯೂ ಮಾಡಿಕೊಂಡಿದ್ದರು. ನಕಲುಗಳನ್ನೆತ್ತಿದ ಪ್ರತಿಕಾರರು ಹಸ್ತಪ್ರತಿಗಳ ಕೊನೆಯಲ್ಲಿ ತಂತಮ್ಮ ವಿಳಾಸಗಳನ್ನು ಕೊಡುವುದರ ಜೊತೆಗೆ ಕೆಲವರು ತಿಥಿ ವಾರ ನಕ್ಷತ್ರಗಳನ್ನೂ ಕೊಟ್ಟಿದ್ದಾರೆ. ತಪ್ಪಿದ್ದರೆ ತಿದ್ದಿಕೊಳ್ಳಿರೆಂದು ಪ್ರಾರ್ಥಿಸಿದ್ದಾರೆ.

ಯಾದೃಶಂ ಪುಸ್ತಕಂ ದೃಷ್ಟ್ವಾ ತಾದೃಶಂ ಲಿಖಿತಂ ಮಯಾ
ಅಬದ್ಧೋ ವಾ ಸುಬದ್ಧೋ ವಾ ಮಮ ದೋಷೋ ನ ವಿದ್ಯತೇ
ತಪ್ಪಂ ಬರೆದವ ಕಡುಜಡ
ನಪ್ಪಾತಂ ಬರೆದನೆಂದು ಬಯ್ಯಲ್ ಬೇಡಿಂ
ತಪ್ಪಕ್ಕು ಶುದ್ಧಮಕ್ಕುಂ
ತಪ್ಪುಳ್ಳಡೆ ತಿದ್ದಿಕೊಂಬುದುತ್ತಮ ಪುರುಷರ್

ಎಂದು ಮೊದಲಾಗಿ ವಿನಂತಿಸಿಕೊಂಡಿದ್ದಾರೆ. ವೀರಮಾಹೇಶ್ವರಾಚಾರ ಸಂಗ್ರಹವನ್ನು ಬರೆದ ಲಿಪಿಕಾರನೊಬ್ಬನು ತಾನು ಈ ಗ್ರಂಥಕ್ಕೆ ಉಪಯೋಗಿಸಿರುವ ತಾಳೆಗರಿಗಳನ್ನು ಸಂಗ್ರಹಿಸಿ ಅದರಲ್ಲಿ ಬರವಣಿಗೆಯನ್ನು ಪೂರ್ತಿಮಾಡಿರುವವರೆಗಿನ ವಿವರವನ್ನು ಗ್ರಂಥಾಂತ್ಯದಲ್ಲಿ ಕೊಟ್ಟಿದ್ದಾನೆ: "ಪಡುವಣ ದೆಸೆಯಿಂದೊಪ್ಪುತಿರ್ದ ಲವಣಾಂಬುಧಿಗೆ ಪುರ್ಬುಗಂ ಪುಟ್ಟಿದ ಹಾಂಗಿರ್ದ ಘಟ್ಟದ ಸರೋವರಂಗಳಲ್ಲೇಕ ಪಾದಚರ ಕೆದಱಿದ ಮುಂಡೆ ಮೌನದಿಂದೊಪ್ಪುತ್ತಿರ್ದ ದಿವ್ಯತಾಳ ಪತ್ರಮಂ ತಂದು ದ್ವಿತೀಯ ರಂಧ್ರವಂ ಮಾಡಿ ಬಿಂಗದ ಹೊರೆಯಂತೊಂದೊಂದಂ ಪೊಂದಿಸಿದಿಕ್ಕೆಲದ ಉಭಯಂ ಪಲಗೆಯುಪ್ಪಲೋವೆಯುಪ್ಪ ಮೂಲೆಗಳಿಂದತ್ಯಂತಲಂಕಾರವಾಗಿ ಕಣ್ಗೆ ಚೆಲ್ವಾಗೊಪ್ಪಲ್ಪಟ್ಟ ದಿವ್ಯ ಶಿವಾಲಯುವಂ ನಿರ್ಮಿಸಿದಿಂತಿರಬಾರದೆಂದು ಬಿಂದು ವಿಸರ್ಗಂ ದಡ್ಡತೆವೊಂದಿದಾವೃತೋರ್ಧ್ವ್ವರೇಫೆ ದೀರ್ಘ ಹ್ರಸ್ವದಿಂದೊಪ್ಪುತ್ತಿರ್ದ್ದ ಅಕ್ಷರಮೂರ್ತಿಗಳಂ ಲೇಖನವಂ ಮಾಡೆಂದು ಚಿಕ್ಕೈಯ್ಯನವರು ದಿವ್ಯ ಆಲೇಖಮಂ ಷಟ್ಸ್ಥಲಜ್ಞಾನ ಸಂಪನ್ನರಾದ ವಿರಕ್ತ ಅನ್ನದಾನ ದೇವರ ಹಸ್ತದಲ್ಲಿ ಪಾಲಿಸಲು ಯಿಂತೀ ಶಿವಗಣಂಗಳ ನಿರೂಪವಂ ಕೈಗೊಂಡು ಬರುವುದಕ್ಕೆ ಯನ್ನ ಕಂಗಳು ಜಿಹ್ವೆ ಕರ ಕರ್ನಂಗಳು ಗತಿ ಮತಿ ಚೈತನಕ್ಕೆ ಸಮಸ್ತ ಸದ್ಭಕ್ತ ವೀರಮಾಹೇಶ್ವರರುಗಳೇ ಕರ್ತ್ತರಾದ ಕಾರಣ ಯಿಂತಿವರ ಕರುಣ ಪ್ರಸಾದಮಂ ಕೈಕೊಂಡು ಈ ವೀರಮಾಹೇಶ್ವರಾಚಾರ ಸಂಗ್ರಹವ ಬರೆದೆನಲ್ಲದೆ ನನ್ನಿಚ್ಛೆಯೊಳಂ ನಾಂ ಬರದುದಿಲ್ಲ" ಎಂದು ಹೇಳಿರುವ ಈ ಹೇಳಿಕೆಯು, ಈ ಲಿಪಿಕಾರರಲ್ಲಿಯೂ ಮೇಧಾವಿಗಳೂ ಪ್ರತಿಭಾಸಂಪನ್ನರೂ ಇದ್ದರೆಂಬುದಕ್ಕೆ ಸಾಕ್ಷೀಭೂತವಾಗಿದೆ. ಆತನು ಮತ್ತೂ ಮುಂದುವರಿದು ಹೀಗೆ ಪ್ರತಿಮಾಡುವ ಕೆಲಸ ಎಷ್ಟು ಕಷ್ಟವೆಂಬುದನ್ನು

ಭಗ್ನಪೃಷ್ಠ ಕಟಗ್ರೀವ ಬದ್ಧದೃಷ್ಟಿರಧೋಮುಖಂ
ಕಷ್ಟೇನ ಲಿಖಿತಂ ಶಾಸ್ತ್ರಂ ಯತ್ನೇನ ಪರಿಪಾಲಯ

ಎಂಬುದರಲ್ಲಿ ಅಡಗಿಸಿದ್ದಾನೆ.

ಹೀಗೆ ಭಾರತದಲ್ಲಿ, ಅದರಲ್ಲಿಯೂ ದಕ್ಷಿಣಭಾರತದಲ್ಲಿ ಅತ್ಯಂತ ಪ್ರಸಿದ್ಧವಾಗಿ ಎಲ್ಲ ವಿಧದ ಬರವಣಿಗೆಯ ಸಾಧನವನ್ನೂ ಮೀರಿಸಿ ಸುಮಾರು ೧೮ನೆಯ ಶತಮಾನದ ಅಂತ್ಯದವರೆಗೂ ಬಳಕೆಯಲ್ಲಿದ್ದ ಓಲೆಪತ್ರಗಳು ಒದಗಿಬರುತ್ತಿದ್ದ ರೀತಿ

ಯನ್ನೂ, ಅವುಗಳ ಸೂಕ್ಷ್ಮಪರಿಚಯುವನ್ನೂ ಇಲ್ಲಿ ಸ್ವಲ್ಪಮಟ್ಟಿಗಾದರೂ ವಿವೇಚಿಸುವುದು ಅಗತ್ಯವೆಂದು ತೋರುತ್ತದೆ.

ಮೊದಲೇ ತಿಳಿಸಿದಂತೆ ಈ ಓಲೆಗರಿಯಲ್ಲಿ ಎರಡು ವಿಧ: ಒಂದು ತಾಲ (Borassus flabelliformis) ಮತ್ತೊಂದು ಶ್ರೀತಾಲ (Corypha umbraculifera Lin). ಇವುಗಳಲ್ಲಿ ತಾಳೆಗರಿಗಳನ್ನೇ ಹೆಚ್ಚಾಗಿ ಉಪಯೋಗಿಸಿರುವುದು ಕಂಡುಬರುತ್ತದೆ. ಏಕೆಂದರೆ, ಇದು ಸ್ವಲ್ಪ ಮಂದವಾಗಿ ಅಗಲವಾಗಿ ಕಬ್ಬಿಣದ ಸಲಾಕೆಯಂತಹ 'ಕಂಠ'ದಿಂದ ಕೊರೆಯಲು ಅನುಕೂಲವಾಗಿದ್ದಿತು. ಒಂದು ಬಾರಿ ಕೊರೆದ ಅಕ್ಷರಗಳು ಮತ್ತೆ ಅಳಿಸಿಹೋಗುತ್ತವೆಂಬ ಹೆದರಿಕೆ ಇರಲಿಲ್ಲ. ಕೊರೆದ ಅಕ್ಷರಗಳ ಮೇಲೆ ಕಪ್ಪುಬಣ್ಣದ ಪುಡಿಯನ್ನು ಹಚ್ಚಿದರೆ, ಆ ಬಣ್ಣವು ಕೊರೆದ ಭಾಗದಲ್ಲಿ ಸೇರಿ, ಅಕ್ಷರಗಳು ಸ್ಪಷ್ಟವಾಗಿ ಕಾಣುತ್ತಿದ್ದುವು. ಈ ಕಪ್ಪು ಬಣ್ಣ ಮಾಸಿ ಹೋದಾಗ ಮತ್ತೆ ಆ ಬಣ್ಣವನ್ನೇ ಉಪಯೋಗಿಸಿ ಚೆನ್ನಾಗಿ ಕಾಣುವಂತೆ ಮಾಡಬಹುದಾಗಿದ್ದಿತು.

ಆದರೆ ಶ್ರೀತಾಲ ಎಲೆಯು ಬಹಳ ತೆಳುವಾಗಿರುವುದರಿಂದ ಕೊರೆಯಲು ಸಾಧ್ಯವಾಗುತ್ತಿರಲಿಲ್ಲ. ಇದು ನಯವಾಗಿ ಮೃದುವಾಗಿದ್ದು ಮಸಿಯನ್ನು ಸುಲಭವಾಗಿ ಹೀರಬಲ್ಲುದಾಗಿದ್ದಿತು. ಬರೆದಾಗ ಚೆನ್ನಾಗಿ ಕಂಡರೂ, ಯಾವುದೇ ಕಾರಣದಿಂದ ಅಳಿಸಿಹೋದಾಗ, ಅದನ್ನು ಮತ್ತೆ ತುಂಬುವುದು ಸಮಸ್ಯೆಯಾಗಿ ಪರಿಣಮಿಸುತ್ತಿದ್ದಿತು. ಅಂತಹುದೇ ಮತ್ತೊಂದು ಪ್ರತಿ ದೊರೆಯದೆ ಅದನ್ನು ತುಂಬುವಂತಿರಲಿಲ್ಲ. ಆದ್ದರಿಂದಲೇ ತಾಳೆಯ ಗರಿಯನ್ನು ಶ್ರೀತಾಲಕ್ಕಿಂತ ಹೆಚ್ಚಾಗಿ ಎಲ್ಲ ಕಡೆಯೂ ಬಳಸಿದ್ದಾರೆ. ಕೆಲವು ಶ್ರೀತಾಲ ಎಲೆಗಳಲ್ಲಿಯೂ ಅಕ್ಷರಗಳನ್ನು ಕೊರೆದಿದ್ದರೂ ಇದು ಕೇವಲ ಅಲ್ಪ ಪ್ರಮಾಣದಲ್ಲಿ.

'ಈ ತಾಳೆ ಎಲೆಗಳನ್ನು ಒಣಗಿಸಿ ಬೇಯಿಸಿ ಅಥವಾ ನೀರಿನಲ್ಲಿ ನೆನೆಯಿಸಿ ಮತ್ತೆ ಒಣಗಿಸಿ, ಬೇಕಾದ ಅಳತೆಗೆ ಕತ್ತರಿಸಿ ಉಪಯೋಗಿಸುತ್ತಿದ್ದರು' ಎಂಬುದಾಗಿ ರಾಜೇಂದ್ರಲಾಲ್ ಮಿತ್ರ ಅವರು ತಿಳಿಸುತ್ತಾರೆ. 'ಗಿಡದಿಂದ ಎಲೆಯ ಮೋತೆ ಹೊರಹೊರಟು ಇನ್ನೇನು ಬಿಚ್ಚಿ ಹರಡುತ್ತವೆ ಎನ್ನುವಷ್ಟರಲ್ಲಿ ಅವುಗಳನ್ನು ಗಿಡದಿಂದ ಕತ್ತರಿಸಿ ತಂದು, ಕೊನೆಯಪಕ್ಷ ಏಳು ದಿನಗಳವರೆಗಾದರೂ ಬಿಸಿಲಿನಲ್ಲಿ ಒಣಗಿಸುತ್ತಿದ್ದರು. ಅನಂತರ ಅವುಗಳನ್ನು ಮೂರು ತಿಂಗಳವರೆಗಾದರೂ ನೆಲದಲ್ಲಿ ಹೂಳಿ, ತೆಗೆದು ಶುದ್ಧಿಗೊಳಿಸಿ, ಬೇಕಾದ ಅಳತೆಗೆ ಕತ್ತರಿಸಿ ಅಡಿಗೆಮನೆಯ ಅಟ್ಟಗಳಲ್ಲಿಡುತ್ತಿದ್ದರು. ಅವುಗಳು ಅಡಿಗೆಮನೆಯ ಹೊಗೆಯಿಂದ ಹದಗೊಳ್ಳುತ್ತಿದ್ದುವು. ಹೀಗೆ ಹದಗೊಂಡುವನ್ನು ತಮಗೆ ಬೇಕಾದಾಗ ತೆಗೆದು ಉಪಯೋಗಿಸುತ್ತಿದ್ದರು'[1] ಎಂಬುದಾಗಿ ಬಿ. ಭಟ್ಟಾಚಾರ್ಯರು ತಿಳಿಸುತ್ತಾರೆ.

---

[1]. Indian Archives, Vol. I—3, 1947.

"ಅತಿ ಪ್ರಾಚೀನ ಕಾಲದಿಂದಲೂ ತಾಳೆಯುಮರದ ಗರಿಗಳನ್ನು ಬರೆಯುವುದಕ್ಕಾಗಿ ಉಪಯೋಗಿಸುತ್ತಿದ್ದರು. ಈ ಮರ ದಕ್ಷಿಣ ಭಾರತದಲ್ಲೆಲ್ಲ ಹೇರಳವಾಗಿ ಬೆಳೆಯುತ್ತದೆ; ಪಂಜಾಬಿನಲ್ಲಿಯೂ ಈ ಮರಗಳಿವೆ. ಇದರ ಪತ್ರಗಳ ಅಗಲ ೧ ಅಂಗುಲದಿಂದ ೪ ಅಂಗುಲಗಳವರೆಗೆ ಇರುತ್ತದೆ; ಉದ್ದ ೩ರಿಂದ ೪ ಅಡಿಗಳವರೆಗೆ ಇರುವುದು. ತಾಳೆಯ ಗರಿಗಳನ್ನು ಹಸಿದಾಗಿರುವಾಗ ಕುದಿನೀರಿನಲ್ಲಿ ಬೇಯಿಸಿ ನೆರಳಲ್ಲಿ ಒಣಗಿಸಿ ನುಣುಪಾದ ಗಾರೆಯ ಕಲ್ಲಿನಿಂದ ಉಜ್ಜಿ ಮೃದುವಾಗಿ ಮಾಡುತ್ತಾರೆ; ಅದರ ಎರಡು ಪಕ್ಕಗಳೂ ಸಮತಲವಾಗುತ್ತವೆ; ಬರೆಹಕ್ಕೆ ಯೋಗ್ಯವಾಗುತ್ತವೆ."[2] ಎಂಬುದಾಗಿ ಪ್ರೊ. ಡಿ. ಎಲ್. ನರಸಿಂಹಾಚಾರ್ ಅವರು ತಿಳಿಸಿದ್ದಾರೆ.

ಗುಜರಾತ್ ದೇಶದ ಪಟ್ಟನ್ ಎಂಬ ಹಸ್ತಪ್ರತಿಗಳ ಗ್ರಂಥಭಂಡಾರದಲ್ಲಿರುವ ದೊಡ್ಡ ಅಳತೆಯ ಹಸ್ತಪ್ರತಿ ಎಂದರೆ ೩೭"×೨⅞" ಅಳತೆಯುಳ್ಳದು ಮತ್ತು ಅತ್ಯಂತ ಚಿಕ್ಕದೆಂದರೆ ೪⅞"×೧⅞" ಅಳತೆಯುಳ್ಳದು ಎಂದು ತಿಳಿದುಬರುತ್ತದೆ. ಮೈಸೂರು ಕನ್ನಡ ಅಧ್ಯಯನ ಸಂಸ್ಥೆಯಲ್ಲಿನ ಹಸ್ತಪ್ರತಿಗಳ ಕೋಶಾಗಾರದಲ್ಲಿರುವ ದೊಡ್ಡ ಹಸ್ತಪ್ರತಿಯೆಂದರೆ ಮುಮ್ಮಡಿ ಕೃಷ್ಣರಾಜ ಒಡೆಯರ ಭಾರತ ಗದ್ಯಗ್ರಂಥ. ಇದರ ಅಳತೆ ೩೬⅝"×೨⅜".

ಹೀಗೆ ವಿವಿಧರೀತಿಯ, ವಿವಿಧ ಬುದ್ಧಿಚಾತುರ್ಯದ, ಸಾಮರ್ಥ್ಯದ, ಕಸರತ್ತಿನ ಕೆಲಸಕ್ಕನುಗುಣವಾಗಿ ಓಲೆ ಗ್ರಂಥಗಳು ರಚಿತವಾಗಿವೆ. ಇಂತಹ ಗ್ರಂಥಗಳನ್ನು ಸಂರಕ್ಷಿಸುವಲ್ಲಿ ನಾವು ಅತ್ಯಂತ ಶ್ರದ್ಧೆಯಿಂದ ಮುಂದುವರಿಯಬೇಕಾದುದು ಸೂಕ್ತವೂ ಅಗತ್ಯವೂ ಆಗಿದೆ.

ರಾಸಾಯನಿಕ ವಸ್ತುಗಳನ್ನೊಳಗೊಂಡ ಕಾಗದಕ್ಕಿಂತಲೂ ಪ್ರಕೃತಿಸಹಜವಾಗಿ ಬಂದ ಓಲೆಗರಿಯು ಹೆಚ್ಚು ಬಾಳಿಕೆ ಬರುವಂತಹುದೂ, ಬಹುಬೇಗ ಹುಳುಗಳ ಹೊಡೆತಕ್ಕೆ ಬಲಿಯಾಗದುದೂ ಆದರೂ, ಶೀತೋಷ್ಣಗಳಿಂದಲೂ ಹುಳುಗಳ ಕಾಟದಿಂದಲೂ ಹೊರತಾದುದಲ್ಲ. ಇವುಗಳನ್ನು ಹಲವೆಡೆಗಳಲ್ಲಿ ಬಣ್ಣದ ಬಟ್ಟೆಗಳಿಂದ ಸುತ್ತಿಡುವುದು ರೂಢಿಯಲ್ಲಿ ಬಂದಿದೆ. ಇದರಿಂದ ಹಸ್ತಪ್ರತಿಗಳನ್ನು ಧೂಳು ಮತ್ತು ಹುಳುಗಳಿಂದ ಸಂರಕ್ಷಿಸಲು ಸಹಾಯವಾಗಿದೆ. ಸಾಮಾನ್ಯವಾಗಿ ಕೆಂಪು ಬಣ್ಣವು ಹುಳುಗಳನ್ನು ದೂರವಿಡುವ ಗುಣಗಳನ್ನು ಹೊಂದಿದೆ ಎಂದು ತಿಳಿದು ಬಂದಿದೆ. ಹಳದಿ ಬಣ್ಣವು ಅರಿಸಿನದಿಂದ ತಯಾರಿಸಿದುದಾಗಿದ್ದರೆ ಅದು ಜೀವಾಣುನಾಶಕ (Germicide)ವಾಗಬಲ್ಲುದು. ರೇಷ್ಮೆಬಟ್ಟೆಯು ಹುಳುಗಳನ್ನು ದೂರವಿಡಬಲ್ಲ ಶಕ್ತಿಯನ್ನು ಪಡೆದಿದೆ. ಆದ್ದರಿಂದಲೇ ಗ್ರಂಥಗಳನ್ನು ಸುತ್ತಿಡಲು ಬಣ್ಣದ ಮತ್ತು ರೇಷ್ಮೆಯ ಬಟ್ಟೆಯನ್ನು ಉಪಯೋಗಿಸಿದ್ದಾರೆ. ಗುಜರಾತ್‌ದೇಶದ ಪಟ್ಟನ್ ಹಸ್ತಪ್ರತಿಗಳ ಕೋಶಾಗಾರರಲ್ಲಿ ಓಲೆ ಪ್ರತಿಗಳನ್ನು ಅವುಗಳ ಆಕಾರಕ್ಕೆ ತಕ್ಕ ಮರದ

---

2. ಕನ್ನಡ ಗ್ರಂಥಸಂಪಾದನೆ—ಡಿ. ಎಲ್. ನರಸಿಂಹಾಚಾರ್, ಪುಟ ೩೭–೩೮, 1964.

ಪೆಟ್ಟಿಗೆಗಳಲ್ಲಿ ಹಾಕಿ ಇಡಲಾಗಿದೆ. ಮತ್ತೆ ಕೆಲವನ್ನು ಬಟ್ಟೆಯಲ್ಲಿ ಸುತ್ತಿ ಕಪಾಟು ಗಳಲ್ಲಿ ಜೋಡಿಸಿಡಲಾಗಿದೆ. ಇವುಗಳನ್ನು ರಕ್ಷಿಸಲು ಗೋದವಚ (Ghodavacha, Acorus Calamus)ವನ್ನು ಉಪಯೋಗಿಸುತ್ತಾರೆ. ಇದನ್ನು ಪುಡಿಮಾಡಿ ಸಣ್ಣ ಸಣ್ಣ ಚೀಲಗಳಲ್ಲಿ ತುಂಬಿ ಪ್ರತಿ ಪೆಟ್ಟಿಗೆಯಲ್ಲಿಯೂ ಇಟ್ಟಿದ್ದಾರೆ ಎಂದು ತಿಳಿದು ಬರುತ್ತದೆ.

ಓಲೆಗರಿಗಳು ಒಡೆದರೆ, ಮುರಿದರೆ ಅಥವಾ ಶಿಥಿಲವಾದರೆ ಸರಿಪಡಿಸುವುದು ಬಹು ಪ್ರಯಾಸದ ಕೆಲಸ. ಒಡೆದ ಅಥವಾ ಮುರಿದ ಓಲೆಗಳನ್ನು ಮುರಿದ ಭಾಗಗಳಿಗೆ ಕ್ವಿಕ್‌ಫಿಕ್ಸ್ ಮೊದಲಾದ ರಾಸಾಯನಿಕ ಅಂಟು ಪದಾರ್ಥಗಳನ್ನುಪ ಯೋಗಿಸಿ ಸರಿಪಡಿಸಬಹುದು. ಆದರೆ, ಟಿಸ್ಯೂ ಕಾಗದ ಮತ್ತು ಚಿಫನ್ ಬಟ್ಟೆ ಗಳನ್ನು ಕಾರ್ಬಾಕ್ಸಿ ಮಿಥಿಲ್ ಸೆಲ್ಯುಲೋಸ್ (Corbouxy Methyl Cellulose) ಎಂಬ ಅಂಟಿನ ಸಹಾಯದಿಂದ ಓಲೆಗರಿಗಳಿಗೆ ಹೊದಿಸಿ ರಕ್ಷಿಸುವುದು ಉತ್ತಮ ವೆಂದು ಹಲವಾರು ಪ್ರಯೋಗಗಳಿಂದ ಸ್ಥಿರಪಟ್ಟಿದೆ. ಇವುಗಳೆಲ್ಲಕ್ಕಿಂತಲೂ ರಕ್ಷಣೆಯ ಉತ್ತಮೋತ್ತಮ ಮಾರ್ಗವೆಂದರೆ ಹವಾನಿಯಂತ್ರಣದಲ್ಲಿ ಗ್ರಂಥಗಳನ್ನಿಡುವುದು. ಇದರಿಂದ ಹದವಾದ ಉಷ್ಣಾಂಶವನ್ನು ಕಾಪಾಡಿಕೊಂಡು ಬರುವುದಲ್ಲದೆ, ಹಸ್ತ ಪ್ರತಿಗಳಿಗೆ ಹಾನಿಕಾರಕವಾದ ಗಾಳಿಯಲ್ಲಿನ ಆಮ್ಲಗಳನ್ನು ದೂರವಿಡಲೂ ಸಹಾಯವಾಗುತ್ತದೆ. ಹಾಗೆಯೆ ದೂಳಿನಿಂದ, ಕ್ರಿಮಿಕೀಟಗಳಿಂದ ಸುಲಭವಾಗಿ ಪಾರಾಗುವುದೂ ಸಾಧ್ಯವಾಗುತ್ತದೆ. ಇದರ ಜೊತೆಗೆ ಹುಳುಗಳ ಹೊಡೆತಕ್ಕೆ ಸಿಕ್ಕಿದ ಹಸ್ತಪ್ರತಿಗಳಿಗೆ 'ಫ್ಯುಮಿಗೇಶನ್' ಮಾಡುವುದರ ಆವಶ್ಯಕತೆ ತುಂಬಾ ಅನಿವಾರ್ಯವೂ ಅತ್ಯಗತ್ಯವೂ ಆಗಿರುತ್ತದೆ.

ಈಗ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಮತ್ತು ಪ್ರಾಚ್ಯವಿದ್ಯಾ ಸಂಶೋಧನಾಲಯಗಳ ಹಸ್ತ ಪ್ರತಿಗಳ ಕೋಶಾಗಾರಗಳಲ್ಲಿ ಸ್ಥಳೀಯವಾಗಿ ಸಿದ್ಧಪಡಿಸಿದ ಒಂದು ವಿಧವಾದ ಎಣ್ಣೆಯನ್ನು ಉಪಯೋಗಿಸ ಲಾಗುತ್ತಿದೆ. ಇದು ಎಲೆಗಳನ್ನು ಮೃದುವಾಗಿಡಲು ಸಹಾಯವಾಗುವುದಲ್ಲದೆ, ಅಕ್ಷರಗಳು ಸ್ಫುಟವಾಗಿ ಕಾಣುವಂತೆ ಮಾಡುತ್ತದೆ. ಮತ್ತೆ ಸ್ವಲ್ಪಮಟ್ಟಿಗೆ ಹುಳು ಗಳನ್ನು ದೂರವಿಡಲೂ ಸಹಕಾರಿಯಾಗಿದೆ. ಆದರೆ ಈ ಎಣ್ಣೆಯನ್ನು ಬಹಳ ಹದವಾಗಿ ಉಪಯೋಗಿಸಬೇಕಾಗುತ್ತದೆ. ಇಲ್ಲದಿದ್ದಲ್ಲಿ ಬೂಷ್ಟು ಎಲ್ಲವನ್ನೂ ಆವರಿಸುತ್ತದೆ.

ಈ ತಾಳೆ ಅಥವಾ ಓಲೆ ಗ್ರಂಥಗಳನ್ನು ನಮ್ಮ ಪೂರ್ವಿಕರು ಅತ್ಯಂತ ಆಸ್ಥೆಯಿಂದ ಕಾಪಾಡಿಕೊಂಡು ಬಂದಿದ್ದಾರೆ. ಆದರೆ, ಅವುಗಳ ಮಹತ್ವವನ್ನರಿಯದ ಈಚಿನವರು ಕೆಲವೆಡೆ ಕಟ್ಟಿಗೆಗಳನ್ನಾಗಿ ಉಪಯೋಗಿಸಿದ್ದಾರೆ. ಮತ್ತೆ ಕೆಲವೆಡೆ ಬೆಲೆಯ ಅರಿವಿಲ್ಲದೆ ಔದಾಸೀನ್ಯದಿಂದ ಕೆರೆಗೊ ನದಿಗೊ ತೇಲಿಬಿಟ್ಟಿದ್ದಾರೆ. ಈಗಲೂ ಕೆಲವು ಮನೆಗಳಲ್ಲಿ, ಮಂದಿರಗಳಲ್ಲಿ ಅವುಗಳನ್ನು ಪೂಜಾಗೃಹದಲ್ಲಿಟ್ಟು

ಪೂಜಿಸುತ್ತಿರುವುದು ಕಂಡುಬರುತ್ತದೆ. ಅವುಗಳನ್ನು ತೆಗೆದುನೋಡುವ ಅವಕಾಶವೇ ಇಲ್ಲದೆ, ಗಾಳಿ ಬೆಳಕುಗಳಿಂದ ವಂಚಿಸಿ, ಅದರಲ್ಲಡಗಿರುವ ಜ್ಞಾನಸಂಪತ್ತನ್ನು ಅರಿವಿಲ್ಲದ ಹುಳುಗಳ ಪಾಲುಮಾಡುತ್ತಿರುವುದಂತೂ ನಿಜಕ್ಕೂ ವಿಷಾದನೀಯ; ಅಗತ್ಯವಾಗಿಯೂ ಖಂಡನೀಯ. ಇದಕ್ಕೂ ಮಿಗಿಲಾಗಿ ಯಾವುದೋ ಆಸೆ ಆಮಿಷಗಳಿಗೆ ತುತ್ತಾಗಿ ತಾವೇ ಅದರ ಸಂರಕ್ಷಕರೆಂದು ಹೇಳುತ್ತಾ, ಅವುಗಳ ಒಡೆತನವನ್ನು ಪಡೆದ ಕೆಲವು ವ್ಯಕ್ತಿಗಳು ತಮ್ಮ ಮನೆಯನ್ನೆ ಅವುಗಳ ಆವಾಸ ಸ್ಥಾನವನ್ನಾಗಿಮಾಡಿ, ಅರಿತೋ ಅರಿಯದೆಯೋ ಒಡೆಯರ ಮನೆಯ ಹುಳುಗಳಿಂದ ವಂಚಿಸಿ, ತಮ್ಮ ಮನೆಯ ಕೀಟಗಳಿಗೆ ಉಣಿಸನ್ನಾಗಿ ಮಾಡಿರುವುದಂತೂ ತೀರ ಶೋಚನೀಯ. ಈ ಹಸ್ತಪ್ರತಿಗಳನ್ನು ಕಾಪಾಡುವ ಹೊಣೆ ಎಂತಹ ಮಹತ್ತರವಾದುದೆಂಬುದನ್ನು ಲಿಪಿಕಾರರು ಗ್ರಂಥಾಂತ್ಯದಲ್ಲಿ ಹೇಳುವ

ಪುಸ್ತಕಂ ವನಿತಾ ವಿತ್ತಂ ಪರಹಸ್ತಗತಂ ಗತಂ
ಅಥವಾ ಪುನರಾಯಾತಂ ಜೀರ್ಣಂ ಭ್ರಷ್ಟಾ ಚ ಖಂಡಶಃ
ತೈಲಾದ್ರಕ್ಷೇಜ್ಜಲಾದ್ರಕ್ಷೇತ್ ರಕ್ಷೇಚ್ಛಿಥಿಲ ಬಂಧನಾತ್
ಮೂರ್ಖಹಸ್ತೇ ನ ದಾತವ್ಯಮೇವಂ ವದತಿ ಪುಸ್ತಕಂ

ಎಂಬ ಮಾತುಗಳಿಂದ ನಿರ್ದೇಶಿಸಬಹುದು.

ಈ ಜ್ಞಾನಸಂಪತ್ತನ್ನು ಉಳಿಸಿ ಉದ್ಧರಿಸಿ ಜನಾಂಗಕ್ಕೆ ಒದಗಿಸಬೇಕೆಂಬ ಮಹದಭಿಲಾಷೆಯಿಂದ ಕೆಲವು ಸಂಸ್ಥೆಗಳು ಸ್ಥಾಪಿತವಾಗಿ, ಅವುಗಳನ್ನು ಸಂಗ್ರಹಿಸಿ, ರಕ್ಷಣೆಗೆ ಮತ್ತು ಪ್ರಕಟನೆಗೆ ಪ್ರಯತ್ನಿಸಿ ಮುಂದುವರಿಯುತ್ತಿರುವುದು ಪ್ರಶಂಸನೀಯ. ಈ ಸಂಸ್ಥೆಗಳು ಹಸ್ತಪ್ರತಿಗಳನ್ನು ಸಂಗ್ರಹಿಸಿ ಅವುಗಳ ರಕ್ಷಣೆಯನ್ನು ಮಾಡುವುದರ ಜೊತೆಗೆ, ಅವುಗಳ ಸೂಚಿಯನ್ನು ಪ್ರಕಟಿಸಿ, ಗ್ರಂಥ ಪ್ರಕಟನಾ ಕಾರ್ಯವನ್ನು ನಿಯೋಜಿತ ರೀತಿಯಲ್ಲಿ ಕೈಗೊಂಡಿವೆ. ಮೈಸೂರಿನಲ್ಲಿನ ಕನ್ನಡ ಅಧ್ಯಯನ ಸಂಸ್ಥೆ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯ ನಾಲ್ಕು ಸಂಪುಟಗಳನ್ನು ಪ್ರಕಟಿಸಿದೆ. ಹಾಗೆಯೆ, ಮದರಾಸು ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ ಲೈಬ್ರರಿ, ತಂಜಾವೂರಿನ ಸರಸ್ವತಿ ಮಹಲ್ ಲೈಬ್ರರಿ—ಮೊದಲಾದ ಹಲವಾರು ಸಂಸ್ಥೆಗಳು ಈ ಕೆಲಸವನ್ನು ಮಾಡಿವೆ, ಮಾಡುತ್ತಿವೆ. ಈಗಾಗಲೆ ಹಲವಾರು ಗ್ರಂಥಗಳನ್ನು ಪ್ರಕಟಿಸಿ ಮೂಲೆಗುಂಪಾಗಿ ಕೊಳೆಯುತ್ತಿದ್ದ ಜ್ಞಾನಭಂಡಾರವನ್ನು ಸಾರ್ವಜನಿಕರಿಗೆ ತೆರೆದಿಟ್ಟಿವೆ. ಈ ಮಹದಭಿಲಾಷೆ ಮತ್ತೂ ಹೆಚ್ಚಾಗಿ ಕೈಗೂಡಬೇಕಾದರೆ ಜನತೆಯ ಸಹಕಾರ ಸಹಾಯ ಅತ್ಯಗತ್ಯ; ಇದು ಈಗ ದೊರೆಯುತ್ತಿದೆ; ಇನ್ನೂ ಹೆಚ್ಚಿಗೆ ದೊರೆತಲ್ಲಿ ಈ ಆಸೆ ಅಧಿಕವಾಗಿ ಈಡೇರಲು ಸಹಾಯವಾಗುತ್ತದೆ.

# ದಾನಚಿಂತಾಮಣಿ ಅತ್ತಿಮಬ್ಬೆ*

(ಪ್ರಸಾರ ನಾಟಕ)

## ಪಾತ್ರಗಳು

೧. ಮಲ್ಲಪಯ್ಯ : ಅತ್ತಿಮಬ್ಬೆ–ಗುಂಡಮಬ್ಬೆಯರ ತಂದೆ.

೨. ದಲ್ಲಪ : ನಾಗದೇವನ ತಂದೆ. ಅತ್ತಿಮಬ್ಬೆ–ಗುಂಡಮಬ್ಬೆಯರ ಮಾವ. ಚಾಳುಕ್ಯ ತೈಲಪನ ಸಚಿವ.

೩. ನಾಗದೇವ : ಅತ್ತಿಮಬ್ಬೆ–ಗುಂಡಮಬ್ಬೆಯರ ಪತಿ. ತೈಲಪನ ದಂಡ ನಾಯಕ.

೪. ತೈಲಪ : ಕಲ್ಯಾಣಿ ಚಾಳುಕ್ಯ ಸಾಮ್ರಾಜ್ಯ ಸಂಸ್ಥಾಪಕ.

೫. ಶಂಕರಗಂಡ : ಬನವಾಸಿ ನಾಡಿನ ಮಹಾಮಂಡಳಾಧೀಶ್ವರ. ತೈಲಪನ ಆಪ್ತಸಲಹೆಗಾರ.

೬. ಬಾಚರಸ : ತೈಲಪನ ಮಂತ್ರಿ.

೭. ಅರ್ಹನಂದಿ ಮಹಾಸ್ವಾಮಿಗಳು : ಅತ್ತಿಮಬ್ಬೆಯ ಕುಲಗುರುಗಳು. ಇವರ ಆದೇಶದಂತೆ ಆಕೆ ಬಸದಿಗಳ ನಿರ್ಮಾಣಕ್ಕೆ ತೊಡಗಿದಳು.

೮. ರನ್ನ : ಎರಡನೆಯ ಕವಿಚಕ್ರವರ್ತಿ. ಅತ್ತಿಮಬ್ಬೆಯ ಆಶ್ರಯ ದಲ್ಲಿ 'ಅಜಿತತೀರ್ಥಂಕರ ಪುರಾಣ'ವನ್ನು ಬರೆದ.

೯. ಅತ್ತಿಮಬ್ಬೆ : ಕಥಾ ನಾಯಿಕೆ. ನಾಗದೇವನ ಪತ್ನಿ. ಗುಂಡ ಮಬ್ಬೆಯ ಅಕ್ಕ.

೧೦. ಗುಂಡಮಬ್ಬೆ : ಅತ್ತಿಮಬ್ಬೆಯ ತಂಗಿ; ನಾಗದೇವನ ಹೆಂಡತಿ. ಪತಿ ಯೊಂದಿಗೆ ಸತಿಹೋದ ಮಹಾಸತಿ.

೧೧. ಸುನಂದಾ : ಅತ್ತಿಮಬ್ಬೆಯ ಪರಿಚಾರಿಕೆ.

ಸೈನಿಕರು, ಶ್ರಾವಕರು—ಇತ್ಯಾದಿ

ಕಾಲ : ಹತ್ತನೆಯ ಶತಮಾನ

ಸ್ಥಳ : ಕಲ್ಯಾಣ ಪಟ್ಟಣ ಮತ್ತು ಲಕ್ಕುಂಡಿ

---

* ಆಕಾಶವಾಣಿ ಕೃಪೆಯಿಂದ.

## ದೃಶ್ಯ ೧

[ಮದುವೆಯ ಮನೆ. ಮಾಂಗಲ್ಯಧಾರಣದ ಸಂಭ್ರಮ.]

ಧ್ವನಿ : ಮಂಗಳವಾದ್ಯಗಳು ಬಾರಿಸುತ್ತವೆ. ನಾಗಸ್ವರ ಮಧುರವಾಗಿ ಕೇಳಿ ಬರುತ್ತದೆ. ಅಲ್ಲಿ ನೆರೆದ ಸ್ತ್ರೀ-ಪುರುಷರ ಸದ್ದು-ಗದ್ದಲ ಮದುವೆ ಮನೆಯ ನೆನಪನ್ನು ತಂದುಕೊಡುತ್ತದೆ. ಕೆಲಹೊತ್ತು ಈ ಶಬ್ದ ಅಲೆಯಲೆಯಾಗಿಯೇ ಕೇಳಿಬರುತ್ತಿದ್ದಂತೆ ಅವನ್ನು ಭೇದಿಸಿಕೊಂಡು "ತಾರಾಬಲಂತು ಚಂದ್ರ ಬಲಂತು ದೇವೋ....ಮಮ ಜೀವನ ಹೇತುನಾ ಕಂಠೇ ಬಧ್ನೇ...." ಎಂಬ ಪುರೋಹಿತರ ಋಕ್‌ಛಂದಸ್ಸಿನ ಮಂತ್ರಘೋಷ ಕೇಳಿಬರುತ್ತದೆ. ಮಾಂಗಲ್ಯ ಧಾರಣವಾಯಿತು ಎನ್ನುವಂತೆ ಮಂಗಳವಾದ್ಯಗಳೂ ಜನರ ಸಂಭ್ರಮದ ಸದ್ದುಗದ್ದಲವೂ ಮತ್ತೊಮ್ಮೆ ಉಚ್ಚ ಸ್ವರದಲ್ಲಿ ಕೇಳಿಬಂದು ಕ್ರಮೇಣ ಕಡಿಮೆಯಾಗುತ್ತವೆ.

ಮಲ್ಲಪಯ್ಯ : (ಗದ್ಗದ ಕಂಠಿತನಾಗಿ) ಭಾವಾ! ದಲ್ಲಪಯ್ಯನವರೇ, ತಾಯಿ ಇಲ್ಲದೆ ಬೆಳಸಿದ ಅತ್ತಿಮಬ್ಬೆ-ಗುಂಡಮಬ್ಬೆಯರನ್ನು ನಿಮ್ಮ ಉಡಿಯಲ್ಲಿ ಹಾಕಿದ್ದೇನೆ. ಇನ್ನು ಮುಂದೆ ನೀವೇ ಈ ಮಕ್ಕಳ ತಂದೆ....ತಾಯಿ.... ಸರ್ವಸ್ವ.

ದಲ್ಲಪ : ಸಮಾಧಾನರಾಗಿ ಮಲ್ಲಪಯ್ಯ! ನೀವೇ ಹೀಗೆ ದುಃಖಿಸಿದರೆ? ಗೃಹಸ್ಥರ ಮನೆಯ ಹೆಣ್ಣು ಎಂದಾದರೂ ಒಂದು ದಿನ ಕುಲಕ್ಕೆ ಹೊರ ಗಾಗಲೇಬೇಕಲ್ಲವೇ?....ನನ್ನ ಮನೆ ತುಂಬುತ್ತಿರುವ ಈ ಮಹಾಲಕ್ಷ್ಮಿ ಯರನ್ನು ನನ್ನ ಎರಡು ಕಣ್ಣುಗಳಂತೆ ನೋಡಿಕೊಳ್ಳುತ್ತೇನೆ. ನೀವು ಸಮಾಧಾನ ತಂದುಕೊಳ್ಳಿ.

ಮಲ್ಲಪಯ್ಯ : ನಮ್ಮ ಈ ಎರಡು ಮನೆತನಗಳಲ್ಲಿ ಮಧುರ ಬಾಂಧವ್ಯವಾಯಿತು ಎಂಬ ಸಮಾಧಾನ ನನಗಾಗಿದೆ, ದಲ್ಲಪ್ಪಾ!

ದಲ್ಲಪ : (ತೃಪ್ತಿಯಿಂದ) ನಿಮಗಾದ ಸಮಾಧಾನದ ನೂರ್ಮಡಿ ನನಗಾಗಿದೆ, ಭಾವಾ! ಇದು ನನ್ನ ಬಹುದಿನಗಳ ಬಯಕೆಯಾಗಿತ್ತು. ಇಂದು ನೀವು ನಿಮ್ಮ ಇಬ್ಬರು ಕನ್ಯಾರತ್ನಗಳನ್ನು ನನ್ನ ಮಗನಿಗೆ ಧಾರೆಯೆರೆದು ಕೊಟ್ಟಾಗಲೇ ನನ್ನ ಬಹುದಿನಗಳ ಆಶಾಲತೆಗೂ ನೀರೆರೆದು ಧನ್ಯರಾದಿರಿ!

ಮಲ್ಲಪಯ್ಯ : ಎಲ್ಲ ಆ ಅರ್ಹಂತನ ಇಚ್ಛೆ.

ದಲ್ಲಪ : ಹೌದು. ಆ ಮಹಾಸ್ವಾಮಿಯ ಕೃಪೆಯಿಲ್ಲದಿದ್ದರೆ ಈ ದೇವಿಯರನ್ನು ನನ್ನ ಸೊಸೆಯಂದಿರಾಗಿ ಪಡೆದುಕೊಳ್ಳುವ ಸೌಭಾಗ್ಯ ನನ್ನದಾಗುತ್ತಿತ್ತೋ ಇಲ್ಲವೋ?

ಮಲ್ಲಪಯ್ಯ : (ಮಕ್ಕಳನ್ನು ಉದ್ದೇಶಿಸಿ) ಮಕ್ಕಳೇ, ಇಂದು ನೀವು ಚಾಳುಕ್ಯ ಸಾಮ್ರಾಜ್ಯದ ಮಹಾಮಂತ್ರಿ ದಲ್ಲಪ ಸಚಿವರ ಸೊಸೆಯಂದಿರು; ವೀರಾಗ್ರಣಿ ನಾಗದೇವನ ಧರ್ಮಪತ್ನಿಯರು. ಈಗ ರಾಷ್ಟ್ರನಿರ್ಮಾಣ ಕಾರ್ಯದಲ್ಲಿ ಪತಿಯೊಂದಿಗೆ ನೆರವಾಗುವ, ಜಿನಧರ್ಮವನ್ನು ಬೆಳಗುವ ಹಿರಿದಾದ ಹೊಣೆ ನಿಮ್ಮ ಮೇಲಿದೆ....ಮಗಳೇ ಅತ್ತಿಮಬ್ಬೆ, ಹಿರಿಯಳಾದ ನಿನ್ನ ಮೇಲೆ ಈ ಕರ್ತವ್ಯದ ಬಹುಭಾರ ಬಿದ್ದಿದೆ. ಅದನ್ನು ನೀನು ನಿರ್ವಹಿಸಿಕೊಂಡು ಹೋಗುವಿಯೆಂದು ನನಗೆ ವಿಶ್ವಾಸವಿದೆಯಮ್ಮಾ.

ಅತ್ತಿಮಬ್ಬೆ : (ಗದ್ಗದ ಕಂಠಿತಳಾಗಿ) ಅಪ್ಪಾ! ಜಿನಚಂದ್ರಮುನಿಗಳ ಪಾದ ಸಾಕ್ಷಿಯಾಗಿ, ನಿಮ್ಮಾಣೆಯಾಗಿ, ಹೆತ್ತಮನೆ – ಕೊಟ್ಟಮನೆಗಳೆರಡಕ್ಕೂ ನಮ್ಮಿಂದ ಯಾವ ಕಳಂಕ ಬಾರದಂತೆ ನಡೆದುಕೊಳ್ಳುತ್ತೇವೆ. ಎಂಥಾ ದುರ್ಧರ ಪ್ರಸಂಗ ಬಂದರೂ ರಾಷ್ಟ್ರದ ಏಳಿಗೆಗೆ, ಜಿನಸಮಯ ವೃದ್ಧಿಗೆ ನಮ್ಮ ಸರ್ವಸ್ವವನ್ನು ತ್ಯಾಗಮಾಡುತ್ತೇವೆ. ನಾವು ಎಲ್ಲಿದ್ದರೂ ಸರಿಯೇ —ನಿಮಗೆ ಕೀರ್ತಿಯನ್ನು ತರಲು ನಮ್ಮ ಜೀವನವನ್ನೇ ಮುಡುಪಿಡುತ್ತೇವೆ ....ಇದಕ್ಕೆ ನಿಮ್ಮ ಆಶೀರ್ವಾದವೊಂದಿದ್ದರೆ ಸಾಕು!

ಮಲ್ಲಪಯ್ಯ : (ಆನಂದೋತ್ಸಾಹದಿಂದ) ಧನ್ಯನಾದ ಮಗಳೇ, ಧನ್ಯನಾದೆ!.... ನೀವು ಪತಿಪರಾಯಣರಾಗಿ ತ್ಯಾಗದ ಮೂರ್ತಿಗಳಾಗಿ ಬಾಳಿರಿ. ಅರ್ಹಂತನು ನಿಮಗೆ ಸನ್ಮಂಗಳವನ್ನು ಮಾಡಲಿ....ನಾನಿನ್ನು ಬರುತ್ತೇನಮ್ಮಾ, ಹೋಗಿ ಬರುತ್ತೇನೆ.

ಧ್ವನಿ : ಅಗಲಿಕೆಯ ಸಂತಾಪವನ್ನು ಮನಸ್ಸಿನ ಮೇಲೆ ಬಿಂಬಿಸುವಂತೆ ಸ್ವಲ್ಪ ಕಾಲ ನವಿರಾದ ಕ್ಲಾರಿಯೊಟ್‌ವಾದನ ಕೇಳಿಬಂದು ಕ್ರಮೇಣ ಕಡಮೆಯಾಗುತ್ತದೆ.

## ದೃಶ್ಯ ೨

[ನಾಗದೇವನ ಮನೆ. ಅತ್ತಿಮಬ್ಬೆ ಶಾಂತಿಪುರಾಣವನ್ನು ಅತ್ಯಂತ ಭಾವುಕತೆಯಿಂದ ಪಾರಾಯಣ ಮಾಡುತ್ತಿರುವದು ಕೇಳಿಬರುತ್ತದೆ.]

ಅತ್ತಿಮಬ್ಬೆ : (ಭಾವಪೂರ್ಣವಾಗಿ)

ಎನಗೆ ಜಿನೇಂದ್ರಧರ್ಮಮೆ ಶರಣ್ ಮೊನೆಗೊಡ್ಡಿದ ಭೂರಿ ವೈರಿಸಾ
ಧನ ಹರಣಂ ದಲೆಂದು ಜಿನಚಂದ್ರಮುನೀಂದ್ರರ ಪಾದಮೂಲದೊಳ್
ವಿನಮಿತರಾಗಿ ಕೊಂಡುಕೊನೆವರ್ ಸಲೆ ವಾಣಿವಾಡೆಯೊಳ್ ಮಹಾ
ವನಿಪರದೇನಗಣ್ಯ ಕೃತಪುಣ್ಯಮೋ ಭಾವಿಸೆ ತನ್ಮುನೀಂದ್ರನಾ

ನಾಗದೇವ : (ಭಾವೋತ್ಕಟದಿಂದ) 'ಎನಗೆ ಜಿನೇಂದ್ರಧರ್ಮಮೆ ಶರಣ್'.... ಆಹಾ! ಎಂಥಾ ಉತ್ಕಟ ಧರ್ಮಶ್ರದ್ಧೆಯಿದು....

ಅತ್ತಿಮಬ್ಬೆ : ಬನ್ನಿ ಸ್ವಾಮಿಾ....ಬಂದು ಹೊತ್ತಾಯಿತೇ?

ನಾಗದೇವ : ಪೊನ್ನ ಕವಿಚಕ್ರವರ್ತಿಯ ಶಾಂತಿಪುರಾಣವನ್ನು ಮನದುಂಬಿ ಮಧುರ ಕಂಠದಿಂದ ಪಠಿಸುತ್ತಿರುವಾಗಲೇ ಬಂದೆ, ದೇವೀ.

ಅತ್ತಿಮಬ್ಬೆ : ಹಾಗಾದರೆ ನೀವು ಬಂದು ಹೊತ್ತಾಯಿತು ಅನ್ನಿ. ತಪ್ಪಾಯಿತು. ನಿಮ್ಮ ಬರವು ನನ್ನ ಗಮನಕ್ಕೆ ಬರಲಿಲ್ಲ....

ನಾಗದೇವ : ಇದರಲ್ಲಿ ನಿನ್ನದೇನು ತಪ್ಪು ಅತ್ತಿಮಾ? ಆತ್ಮಕ್ಕೆ ಆಧ್ಯಾತ್ಮಿಕ ಶಾಂತಿಯನ್ನು ನೀಡುವ ಶಾಂತಿಪುರಾಣವನ್ನು ನೀನು ಭಕ್ತಿಪರವಶಳಾಗಿ ಪಾರಾಯಣ ಮಾಡುತ್ತಿರುವಾಗ, ಅದನ್ನು ಕೇಳುತ್ತಾ ಹಾಗೆಯೇ ನಾನು ಚಣಕಾಲ ಯಾವುದೋ ಅನಿರ್ವಚನೀಯ ದಿವ್ಯಾನಂದವನ್ನು ಅನುಭವಿಸುತ್ತಿದ್ದೆ. ನಿನ್ನ ಆಧ್ಯಾತ್ಮಿಕ ಜೀವನದಿಂದ ನಾನೂ ಕೃತಾರ್ಥನಾಗಿದ್ದೇನೆ ದೇವೀ.

ಅತ್ತಿಮಬ್ಬೆ : ನಿಮ್ಮ ಈ ಹೊಗಳಿಕೆಯ ಮಾತಿಗೆ ನಾನು ಎಂದೆಂದಿಗೂ ಅರ್ಹಳಲ್ಲ ಸ್ವಾಮಿಾ.

ನಾಗದೇವ : ನಾನೊಂದೇ ಈ ಮಾತನ್ನು ಹೇಳಿದ್ದರೆ ಹೊಗಳಿಕೆಯ ಮಾತಾಗುತ್ತಿತ್ತು, ಅತ್ತಿಮಾ! ಆದರೆ ಲೋಕವೇ ಭಕ್ತಿಯಿಂದ ನಿನ್ನ ಗುಣಗಾನ ಮಾಡುತ್ತಿದೆ. ಕಲ್ಯಾಣ ಪಟ್ಟಣವೇ ನಿನ್ನ ಆಧ್ಯಾತ್ಮಿಕ ಜೀವನವನ್ನು ಕೊಂಡಾಡುತ್ತಿದೆ....ಅಂದಮೇಲೆ ಈ ನಾಗದೇವನ ಮಾತು ಹೊಗಳಿಕೆಯ ಮಾತೇ, ದೇವೀ?

ಅತ್ತಿಮಬ್ಬೆ : ಅಷ್ಟು ದೂರ ನನಗೆ ತಿಳಿಯದು. ನಿಮ್ಮ ಪಾದಾರವಿಂದದ ಭೃಂಗವಾಗಿ, ಅರ್ಹಂತನ ಭಕ್ತಳಾಗಿ ಈ ಕಾಯವನ್ನು ಕ್ಷಯಿಸಬೇಕೆನ್ನುವುದನಷ್ಟೇ ನಾನು ಬಲ್ಲೆ. ಉಳಿದ ಲೌಕಿಕ ವಿಚಾರ ನನಗೇಕೆ, ಸ್ವಾಮಿಾ?

ನಾಗದೇವ : (ವಿನೋದದಿಂದ) ನಿನ್ನನ್ನು ಮಾತಿನಲ್ಲಿ ಗೆಲ್ಲುವುದು ನನಗಂತೂ ಸಾಧ್ಯವಿಲ್ಲ ದೇವಿ....ಎಷ್ಟಾದರೂ ನೀನು ಮಲ್ಲಪಯ್ಯನವರ ಮಗಳಲ್ಲವೇ? (ನಗುವನು).

ಅತ್ತಿಮಬ್ಬೆ : ಇಲ್ಲಿ ನೋಡಿ, ಅಣ್ಣಿಗ ನಿಮ್ಮನ್ನೇ ನೋಡುತ್ತಿದ್ದಾನೆ.

ನಾಗದೇವ : ಎಲ್ಲಿ ತಾ ಇಲ್ಲಿ. (ಎತ್ತಿಕೊಳ್ಳುತ್ತ) ಅಮ್ಮನ ಗಂಧವಾರಣ, ಬಾ ಇಲ್ಲಿ (ಮುದ್ದಿಸುತ್ತ) ಅತ್ತಿಮಾ, ಅಣ್ಣಿಗ ಶುದ್ಧ ನಿನ್ನಂತೆಯೇ.

ಅತ್ತಿಮಬ್ಬೆ : ಊಹುಂ, ನಿಮ್ಮಂತೆಯೇ.

ನಾಗದೇವ: ಊಹುಂ, ನಿನ್ನಂತೆಯೇ. (ಇಬ್ಬರೂ ನಗುವರು.)

ಅತ್ತಿಮಬ್ಬೆ: (ಕಠಾರಿಯ ಶಬ್ದವಾಗುವುದು) ಅಪ್ಪನ ಕಠಾರಿಗೆ ಕೈಹಾಕುವೆಯಲ್ಲೋ ಕಳ್ಳಾ.

ನಾಗದೇವ: ವೀರನ ಕೈತುಡುಕುವುದು ಕಠಾರಿಗೇ ಅಲ್ಲವೇ, ದೇವೀ?....ನನ್ನ ಅಣ್ಣಿಗನನ್ನು ಕನ್ನಡದ ಒಬ್ಬ ವೀರಾಗ್ರಣಿಯನ್ನಾಗಿ ಮಾಡುತ್ತೇನೆ.

ಅತ್ತಿಮಬ್ಬೆ: ನೀವು ವೀರಾಗ್ರಣಿಯನ್ನಾಗಿ ಮಾಡಿದರೆ, ನಾನು ಒಬ್ಬ ಉತ್ತಮ ಮಗನನ್ನಾಗಿ ಮಾಡುತ್ತೇನೆ.

ನಾಗದೇವ: ಅತ್ತಿಮಾ, ಇಂಥಾ ಸಂತೋಷ ಸಮಯದಲ್ಲಿ ನಿಮ್ಮೊಂದಿಗೆ ಕೆಲ ಹೊತ್ತು ಕಳೆಯಲು ನನಗೆ ಸಮಯವಿಲ್ಲವಲ್ಲಾ ಎಂದು ನಾನು ಪರಿತಪಿಸುತ್ತಿದ್ದೇನೆ.

ಅತ್ತಿಮಬ್ಬೆ: ಅಂದರೆ....ಈಗ ನೀವು ಎಲ್ಲಿಗೋ ಹೊರಟಂತಿದೆ.

ನಾಗದೇವ: ಹೌದು ದೇವೀ. ತೈಲಪ ಚಕ್ರವರ್ತಿಗಳ ಅವಸರದ ಕರೆಬಂದಿದೆ. ಇದೋ, ನನ್ನನ್ನು ಸನ್ನಿಧಿಗೆ ಬೇಗ ಬರಲು ನಿರೂಪವನ್ನು ಕಳಿಸಿದ್ದಾರೆ.

ಅತ್ತಿಮಬ್ಬೆ: (ಆಶ್ಚರ್ಯ ಧ್ವನಿಯಲ್ಲಿ) ಈ ಅವಸರದ ಕರೆ ಏಕೆ ಸ್ವಾಮೀ?

ನಾಗದೇವ: ತೈಲಪ ಚಕ್ರವರ್ತಿಗಳು ಚಾಳುಕ್ಯ ಸಾಮ್ರಾಜ್ಯವನ್ನು ಸಂಸ್ಥಾಪಿಸಿದ ಮೇಲೆ, ಇದನ್ನು ಸಹಿಸದ ಕೆಲವು ಸಾಮಂತರು ಸಾಮ್ರಾಜ್ಯವನ್ನು ಕಬಳಿಸಲು ಹೊಂಚುಹಾಕುತ್ತಿದ್ದಾರೆ. ತಂದೆ ದಲ್ಲಪನವರು ಅಗಲಿದ ತರುವಾಯದಿಂದ ತೈಲಪ ಪ್ರಭುಗಳಿಗೆ ಅವರ ಬಲಗೈಯ ಶಕ್ತಿಯೇ ಹೋದಂತಾಗಿದೆ .... ಈಗ ಪ್ರಭುಗಳು ಯಾವ ಸಮಯಕ್ಕೆ ಯಾವ ಅರಿರಾಯರ ಮೇಲೆ ಕಾಳೆಗಕ್ಕೆ ಹೋಗುತ್ತಾರೆಯೋ ಬಲ್ಲವರಾರು?

ಅತ್ತಿಮಬ್ಬೆ: (ಶಂಕೆಯಿಂದ) ಹಾಗಾದರೆ ಈಗ ನೀವು....

ನಾಗದೇವ: ಪ್ರಭುಗಳ ಆಜ್ಞೆಯಾದರೆ ನಾಗೂ ಕಾಳೆಗಕ್ಕೆ ಹೋಗಬೇಕಾಗುತ್ತದೆ, ದೇವೀ! ಅವರ ಅನ್ನದಿಂದಲೇ ಈ ದೇಹ ಬೆಳೆದಿದೆ. ಅಂದಮೇಲೆ ಅವರ ಶ್ರೇಯೋಭಿವೃದ್ಧಿಗಾಗಿ ಆತ್ಮಾರ್ಪಣೆಮಾಡಿಕೊಳ್ಳಲು ಈ ನಾಗದೇವ ಹಿಂಜರಿಯಬೇಕೇ?....ಇಂದು ನಾನು ಜೋಳದ ಪಾಳಿಗೆ ನಿಷ್ಠೆ ತೋರದಿದ್ದರೆ ಕುಲಕ್ಕೆ ಕಳಂಕವಲ್ಲವೇ, ಅತ್ತಿಮಾ?

ಅತ್ತಿಮಬ್ಬೆ: ಸ್ವಾಮೀ! ನೀವು ಕರ್ತವ್ಯಚ್ಯುತರಾಗುವುದು ಯಾರಿಗೆ ಸಂತೋಷವಿದೆ....ವೀರಾಧಿವೀರರಾಗಿ ರಣರಂಗದಲ್ಲಿ ಕಾದಿ, ಅರಿಶಿರವ ಚಂಡಾಡಿ, ಇತ್ತಂಡದಿಂದ ಅತಿರಥಮಹಾರಥರೆಂದು ಹೊಗಳಿಸಿಕೊಳ್ಳುವ ಸೌಭಾಗ್ಯವನ್ನೇ ನಾನು ನೋಡಲು ಬಯಸುತ್ತೇನೆ....

ನಾಗದೇವ: ಭಲೇ! ದೇವೀ, ಭಲೇ! ವೀರಪತ್ನಿಗೊಪ್ಪುವ ವೀರೋಚಿತ ಮಾತನಾಡಿದೆ.....ಅತ್ತಿಮಬ್ಬೆ, ಎಲ್ಲಿ ನಿನ್ನ ತಂಗೀ....

ಅತ್ತಿಮಬ್ಬೆ: ಪೂಜೆಗೆಂದು ಬಸದಿಗೆ ಹೋಗಿ ಹೊತ್ತಾಯಿತು. ಈಗ ಬರಬಹುದು.

ನಾಗದೇವ: (ತೃಪ್ತಿಯ ಧ್ವನಿಯಲ್ಲಿ) ಈ ದೇವಿಯರನ್ನು ಪಡೆದ ನಾನೇ ಧನ್ಯ!... ದೇವೀ, ರಾಜಸಭೆಗೆ ಹೋಗಿಬರಲೇ? ನಿನ್ನ ತಂಗಿ ಬರುವುದರೊಳಗಾಗಿ ಬೇಗ ಬಂದುಬಿಡುತ್ತೇನೆ. (ಹೋಗುವನು).

## ದೃಶ್ಯ ೩

[ಚಾಳುಕ್ಯ ಸೂರ್ಮಡಿತೈಲಪನ ರಾಜಸಭೆ]

ಧ್ವನಿ: ಚಕ್ರವರ್ತಿಗಳು ರಾಜಸಭೆಗೆ ಬರುವ ಸೂಚನೆಯನ್ನು ತಿಳಿಸಲು ಕಹಳೆ, ಭೇರಿ, ಪಟಹ, ನಗಾರಿ—ಮೊದಲಾದ ಸನ್ನದ್ಧವಾದ್ಯಗಳು ಉಚ್ಚಸ್ವರದಲ್ಲಿ ಮೊಳಗುತ್ತವೆ.

ವೈತಾಳಿಗಳು: (ಗಂಭೀರ ಸ್ವರದಲ್ಲಿ)

ಮಹಾರಾಜಾಧಿರಾಜ ರಾಜ ಪರಮೇಶ್ವರ
ಪರಮಭಟ್ಟಾರಕ!
ಪಲ್ಲವಚೋಳರಟ್ಟಮಣಿಮಕುಟಾವನತಶ್ರೀಚರಣ
ಕಲ್ಯಾಣಿಚಾಳುಕ್ಯಾಭರಣ!
ಸಂಗೀತಸಾಹಿತ್ಯನಾಟ್ಯಸುಧಾಬ್ಧಿ ರಾಜಹಂಸ
ಸಕಳಶಾಸ್ತ್ರಕಳಾವತಂಸ!
ಲಾಟಗೂರ್ಜರಪ್ರತಿಹಾರತೂಲಕಾಲಪ್ರಭಂಜನ
ಚಾಳುಕ್ಯಸಾಮ್ರಾಜ್ಯಸಂವರ್ಧನ!
ಪರವೈರಿವಧೂಜನಶರಣಾಗತರಕ್ಷಕ
ಸತ್ಯಾಶ್ರಯಕುಳತಿಳಕ!
ಶ್ರೀಮನ್ನೂರ್ಮಡಿ ತೈಲಪ ಚಕ್ರೇಶ್ವರ
ವಿಜಯೀ ಭವ! ವಿಜಯೀ ಭವ!

ತೈಲಪ: (ಗಾಂಭೀರ್ಯದಿಂದ) ಮಂತ್ರಿವರ್ಯರೇ, ಸಾಮಂತ ಶ್ರೇಷ್ಠರೇ, ಬಿರುದಿನ ಭಟರೇ, ಪ್ರಿಯಬಂಧು ನಾಗರಿಕರೇ, ಗತಿಸಿಹೋಗಿದ್ದ ವಾತಾಪಿ ಚಾಳುಕ್ಯ ಸಾಮ್ರಾಜ್ಯವನ್ನು ರಾಷ್ಟ್ರಕೂಟರ ಹಸ್ತದಿಂದ ಮುಕ್ತಗೊಳಿಸಿ, ಇಂದು ಮತ್ತೊಮ್ಮೆ ಆ ಸಾಮ್ರಾಜ್ಯವನ್ನು ನಿಮ್ಮೆಲ್ಲರ ಸಹಾಯ ಸಹಕಾರಗಳಿಂದ ಸಂಸ್ಥಾಪಿಸಿ ನಾನು ಕೃತಾರ್ಥನಾಗಿದ್ದೇನೆ. ಈ ಕಾರ್ಯದಲ್ಲಿ ಅನೇಕ ವೀರರ ರಕ್ತತರ್ಪಣ ರಾಷ್ಟ್ರಕ್ಕೆ ಸಂದಿದೆಯೆಂಬುದನ್ನು ನಾನು ಬಲ್ಲೆ.

ನಿಮ್ಮ ಈ ಉತ್ಕಟವಾದ ಸ್ವಾಮಿನಿಷ್ಠೆಗೆ ನನ್ನ ಅನಂತ ವಂದನೆಗಳು.... (ಮಂತ್ರಿಯನ್ನು ಉದ್ದೇಶಿಸಿ) ಬಾಚರಸ ಮಂತ್ರಿಗಳೇ, ಇನ್ನು ಮೇಲೆ ಸಾಮ್ರಾಜ್ಯಾಭಿವೃದ್ಧಿಗೆ ಯಾವ ಆತಂಕಗಳಿಲ್ಲವಷ್ಟೇ?

ಬಾಚರಸ : (ವಿನಯದಿಂದ) ಪ್ರಭೋ, ರಾಷ್ಟ್ರಕೂಟ ದೊರೆಗಳು ಹಿಂದಿನ ತಮ್ಮ ವೈರವನ್ನು ಮರೆತು ಸವದತ್ತಿಯಲ್ಲಿ ತಮ್ಮ ಮಾಂಡಲಿಕರಸರಾಗಿದ್ದು ಕೊಂಡು ಸಾಮ್ರಾಜ್ಯಕ್ಕೆ ನಿಷ್ಠೆಯನ್ನು ತೋರಿಸುತ್ತಿರುವಾಗಲೇ ನಮ್ಮ ದೊಡ್ಡ ಆತಂಕ ತೊಡೆದಂತಾಗಿದೆ. ಇದಲ್ಲದೆ ನಮ್ಮ ಪೂರ್ವದ ದಾಯಾದಿ ಗಳಾದ ಪಲ್ಲವ, ಚೋಳರ ಉರವಣೆಯನ್ನು ಬಗ್ಗುಬಡಿದು, ಅವರನ್ನು ತಲೆ ಯೆತ್ತದಂತೆ ಮಾಡಿರುವುದರಿಂದ ರಾಜ್ಯಕ್ಕೆ ನೆಮ್ಮದಿಯೆನಿಸಿದೆ. ಇನ್ನುಳಿದ ಮಾಂಡಲಿಕರಸರೂ ಸಾಮಂತರೂ ತಮಗೆ ಭಯಭಕ್ತಿಯಿಂದ ನಡೆದು ಕೊಳ್ಳುತ್ತಿರುವುದರಿಂದ ಸಾಮ್ರಾಜ್ಯ ನಿರಾಕುಳವಾಗಿದೆ, ಪ್ರಭೋ. ಆದರೆ.... ಒಂದು ವಿಷಯ....

ತೈಲಪ : ಹೇಳಿ ಮಂತ್ರಿಗಳೇ, ಹೇಳಿ.

ಬಾಚರಸ : ಗೂರ್ಜರದೇಶದ ಪ್ರತಿಹಾರ ಮುಂಜನು ನಮ್ಮ ಗಡಿಯನ್ನು ನುಗ್ಗಲು, ನರ್ಮದಾನದಿಯ ಉತ್ತರ ದಂಡೆಯಲ್ಲಿ ತನ್ನ ಸೈನ್ಯದೊಂದಿಗೆ ಸಿದ್ಧನಾಗಿದ್ದಾ ನೆಂದು ಗುಪ್ತಚಾರರಿಂದ ತಿಳಿದುಬಂದಿದೆ, ಪ್ರಭೋ.

ತೈಲಪ : (ಉದ್ವಿಗ್ನನಾಗಿ) ಏನು? ನನ್ನೊಂದಿಗೆ ಮತ್ತೊಮ್ಮೆ ಕಾಳಗಕ್ಕೆ ಬರಲು ಆ ಪ್ರತಿಹಾರ ಮುಂಜನಿಗೆ ಧೈರ್ಯ ಎಲ್ಲಿಂದ ಬಂದಿತು?

ಶಂಕರಗಂಡ : ಅದಕ್ಕೆ ನಿಮ್ಮ ಔದಾರ್ಯವೇ ಕಾರಣ, ಪ್ರಭೋ! ಎರಡು ಸಲ ನಿಮ್ಮ ವಶನಾದ ಮುಂಜನನ್ನು ಶಿಕ್ಷಿಸದೆ ನೀವು ಮನ್ನಿಸಿ ಬಿಟ್ಟಿರುವುದರಿಂದ, ಇಂದು ಆತ ಕೊಬ್ಬಿ ನಿಮಗೇ ದ್ರೋಹವನ್ನು ಬಗೆಯುತ್ತಿದ್ದಾನೆ. ಸಲುಗೆಯ ನಾಯಿಯೆಂದು ಪ್ರೀತಿಸಲು ಹೋದರೆ ಅದು ಮೈಗೇರದೆ ಇನ್ನೇನು ಮಾಡೀತು, ಪ್ರಭೋ?

ತೈಲಪ : ಸರಿಯಾಗಿ ಹೇಳಿದಿರಿ, ಶಂಕರಗಂಡರೇ. ವಿಶ್ವಾಸಾರ್ಹರಲ್ಲದವರನ್ನು ದಂಡಿಸದೆ ನಾನು ತಪ್ಪುಮಾಡಿದೆ. ಈ ಸಲ ಮುಂಜನ ಮೇಲೆ ಉಗ್ರಕ್ರಮ ಕೈಕೊಂಡೇ ತೀರುತ್ತೇನೆ. ಇಂದು ನಮಗೆ ಯುದ್ಧ ಅನಿವಾರ್ಯ. ಆದರೆ....

ಶಂಕರಗಂಡ : ಆದರೆ....ಯೋಚನೆ ಏಕೆ ಪ್ರಭೋ?

ತೈಲಪ : ದಲ್ಲಪ ಮಂತ್ರಿಗಳು ನಮ್ಮನ್ನಗಲಿ ಹೋದಾಗಿನಿಂದ ನನ್ನ ಭುಜಬಲವೇ ಉಡುಗಿದಂತಾಗಿದೆ, ಶಂಕರಗಂಡರೇ. ಇಂದಿನ ಸೈನ್ಯದ ನಾಯಕತ್ವವನ್ನು ಯಾರಿಗೆ ನಿರ್ವಹಿಸಿಕೊಡಬೇಕೋ ನನಗೆ ತಿಳಿಯದಾಗಿದೆ.

ಶಂಕರಗಂಡ : ದಲ್ಲಪರಂತೆಯೇ ಅತುಲಪರಾಕ್ರಮಿಗಳೂ ಸ್ವಾಮಿನಿಷ್ಠರೂ ಒರಟರ ಮಲ್ಲರೂ ಆದ ನಾಗದೇವ ಈ ಕಾರ್ಯವನ್ನು ಬಹು ದಕ್ಷತೆಯಿಂದ ನಿರ್ವಹಿಸಿಕೊಂಡು ಹೋಗುತ್ತಾರೆಂದು ನನಗೆ ವಿಶ್ವಾಸವಿದೆ, ಪ್ರಭೋ.

ತೈಲಪ : ಅವರ ದೋರ್ಬಲದಲ್ಲಿ ನನಗೂ ವಿಶ್ವಾಸವಿದೆ, ಶಂಕರಗಂಡರೇ. ಆದರೆ ....ಇದಕ್ಕೆ ನಾಗದೇವ ಏನನ್ನುತ್ತಾರೋ ?

ನಾಗದೇವ : ಪ್ರಭೋ, ತಮಗೆ ನಮ್ಮ ವಂಶವೇ ಋಣಿಯಾಗಿದೆ. ಸನ್ನಿಧಿಗೆ ನಿಷ್ಠೆ ತೋರಿಸಬೇಕಾದುದು ನನ್ನ ಕರ್ತವ್ಯ. ಸಾಮ್ರಾಜ್ಯಕ್ಕೆ ನನ್ನಿಂದ ಏನಾದರೂ ಕಿಂಚಿತ್ ಸಹಾಯವಾಗುತ್ತಿದ್ದರೆ ನಾನು ಸದಾ ಸಿದ್ಧನಾಗಿದ್ದೇನೆ.

ತೈಲಪ : (ಆನಂದದಿಂದ) ಭಲೇ ನಾಗದೇವಾ, ಭಲೇ ! ನಿಮ್ಮ ತಂದೆಯವರಂತೆ ಸಾಮ್ರಾಜ್ಯದ ಮೇಲಿಟ್ಟಿರುವ ನಿಮ್ಮ ಸ್ವಾಮಿನಿಷ್ಠೆಗೆ ಪರಮಾನಂದವಾಯಿತು ನಾಳೆ ಗೂರ್ಜರರ ಮೇಲೆ ನಡೆಯುವ ಈ ದಿಗ್ವಿಜಯಕ್ಕೆ ನೀವೇ ದಂಡನಾಯಕರು—ಒಪ್ಪಿಗೆಯೇ ?

ನಾಗದೇವ : ಪ್ರಭುಚಿತ್ತ.

ಬಾಚರಸ : ನರ್ಮದೆಯ ಇಕ್ಕೆಲಗಳು ತುಂಬಿ, ಪ್ರವಾಹ ಭೋರ್ಗರೆದು ಬಂದಿರುವುದರಿಂದ ನಮ್ಮ ಸೈನ್ಯಕ್ಕೆ ಈಗ ನದಿಯನ್ನು ದಾಟುವುದು ಅಸಾಧ್ಯವಾಗಿದೆ, ಪ್ರಭೋ !

ತೈಲಪ : (ಯೋಚನಾಧ್ವನಿಯಲ್ಲಿ) ಪ್ರವಾಹ ಇಳಿಯುವವರೆಗೆ ಕಾಲವಿಲಂಬ ಮಾಡಿದರೆ ನಮ್ಮ ಕಾರ್ಯ ಕೈಗೂಡುವುದು ಕಷ್ಟವಾಗುವುದಲ್ಲ ಮಂತ್ರಿಗಳೇ!

ಶಂಕರಗಂಡ : ಇದಕ್ಕೆ ಯೋಚಿಸಬೇಕಾಗಿಲ್ಲ, ಪ್ರಭೋ. ಮಹಾಪತಿವ್ರತೆಯಾದ ಸಾಧ್ವಿಯೋರ್ವಳು ಜಿನಬಿಂಬವನ್ನು ಹೊತ್ತು ನದಿಯಲ್ಲಿ ನಡೆಯುತ್ತ ಹೋದರೆ ಪ್ರವಾಹವೂ ಶಾಂತವಾಗುತ್ತ ಹೋಗುತ್ತದೆಯೆಂದು ಶಾಸ್ತ್ರ ಸಮ್ಮತವಿದೆ. ಇಂದು ಅದರ ಪರೀಕ್ಷೆ ಆಗಿಯೇ ಹೋಗಲಿ, ಪ್ರಭೋ.

ತೈಲಪ : ಅಂಥಾ ಮಹಾಸತಿ ಯಾರಿದ್ದಾರೆ, ಶಂಕರಗಂಡರೇ ?

ಶಂಕರಗಂಡ : ನಾಗದೇವನ ಧರ್ಮಪತ್ನಿ, ಸಾಧ್ವಿಶಿರೋಮಣಿ ಅತ್ತಿಮಬ್ಬೆ ಮಹಾಪತಿಪರಾಯಣೆ. ಆ ತಾಯಿ ಜಿನಬಿಂಬವನ್ನು ಹೊತ್ತು ನಡೆದರೆ ನರ್ಮದೆ ಖಂಡಿತವಾಗಿಯೂ ನಮಗೆ ದಾರಿನೀಡುತ್ತಾಳೆ. ಈ ಮಾತು ಅತಿಶಯೋಕ್ತಿಯೆಂದು ಭಾವಿಸಬೇಡಿ, ಪ್ರಭೋ !

ತೈಲಪ : (ಆಶ್ಚರ್ಯದಿಂದ) ಹೌದೇ !....

ಶಂಕರಗಂಡ : ಹೌದು ಪ್ರಭೋ ! ಆ ತಾಯಿ ಮಾಡಿದ ಒಂದೊಂದು ಕಾರ್ಯಗಳು ಒಂದೊಂದು ಪವಾಡಗಳಾಗಿ ಮೆರೆದಿವೆ.

ತೈಲಪ : ಹೇಳಿ ಶಂಕರಗಂಡರೆ, ಆ ಸಾಧ್ವಿಯ ಪುಣ್ಯಚರಿತೆಯನ್ನು !

ಶಂಕರಗಂಡ : ಕೇಳಿ....ಒಂದು ಸಲ ಗಂಗರ ಚಾವುಂಡರಾಯ ಗೋಮಟೇಶ್ವರ ಮೂರ್ತಿಯನ್ನು ಸ್ಥಾಪಿಸಿದ ಸಮಾಚಾರ ಕೇಳಿ ಆ ಸಾಧ್ವಿ, ಕುಕ್ಕುಟೇಶ್ವರ ಜಿನನ ದರ್ಶನ ಪಡೆಯುವವರೆಗೂ ಆಹಾರ ಸೇವಿಸುವುದಿಲ್ಲವೆಂದು ಪಾದ ಚಾರಿಯಾಗಿ ಅಲ್ಲಿಗೆ ಹೋಗಲು, ಆ ತಾಯಿಯ ಆಯಾಸವನ್ನು ಕಳೆಯ ಬೇಕೆಂದು ದೇವತೆಗಳು ಆಕಾಶಮಾರ್ಗದಿಂದ ಹೂವಿನ ಮಳೆಗರೆದರು !

ತೈಲಪ : ಹ್ಹಾ ! ಎಂಥಾ ಪವಾಡ !....

ಶಂಕರಗಂಡ : ಇನ್ನೊಮ್ಮೆ ಆ ತಾಯಿ ಪೂಜಿಸುವ ಜಿನಮೂರ್ತಿ ನೀರಿನಲ್ಲಿ ಜಾರಿ ಬೀಳಲು, ಅದು ದೊರೆಯುವವರೆಗೂ ನಿರಶನವ್ರತವನ್ನು ಕೈಕೊಳ್ಳಲಾಗಿ ಎಂಟು ದಿನಗಳ ತರುವಾಯ ಅದು ಅಲ್ಲಿಯೇ ದೊರೆಯಿತು....ಭವನ ವೊಂದಕ್ಕೆ ಭುಗಿಲ್ ಎಂದು ಹಬ್ಬಿಕೊಂಡಿದ್ದ ಅಗ್ನಿ ಆ ಸಾಧ್ವಿ ಸಿಂಪಡಿಸಿದ ಜಿನನ ಪಾದೋದಕದಿಂದ ತಣ್ಣಗಾಯಿತು....ಇನ್ನೊಮ್ಮೆ ಮದಿಸಿದ ಆನೆ ಯೊಂದು ಅಂಕೆತಪ್ಪಿ, ಇದಿರಾದವರನ್ನು ಸೀಳುತ್ತ ಬರುವಾಗ ಆ ತಾಯಿಯ ದರ್ಶನದಿಂದ ಆಕೆಗೆ ಪೂರ್ತಿ ಪ-ಣಿದುಹೋಯಿತು, ಪ್ರಭೋ !

ತೈಲಪ : ಪಾವನನಾದೆ, ಶಂಕರಗಂಡರೇ, ಪಾವನನಾದೆ. ಸಾಧ್ವಿ ಅತ್ತಿಮಬ್ಬೆಯ ಪುಣ್ಯಚರಿತದಿಂದ ನಾನು ಧನ್ಯನಾದೆ. ಇಂದೇ ನಾವೆಲ್ಲರೂ ಆ ತಾಯಿಯ ಶ್ರೀಚರಣಗಳಿಗೆ ಎರಗಿ, ನರ್ಮದೆಯ ಪ್ರವಾಹವನ್ನು ಶಾಂತಗೊಳಿಸ ಬೇಕೆಂದು ಬೇಡಿಕೊಳ್ಳೋಣ....ನಡೆಯಿರಿ.

ಧ್ವನಿ : ಕೊಂಬು, ಕಹಳೆಗಳ ರಣವಾದ್ಯಗಳು ಮತ್ತೊಮ್ಮೆ ಮೊಳಗುತ್ತವೆ.

## ದೃಶ್ಯ ೪

[ನರ್ಮದೆಯ ದಂಡೆಯ ಮೇಲೆ ಸೈನಿಕರ ಕೋಲಾಹಲ]

ಧ್ವನಿ : ನರ್ಮದೆಯ ಪ್ರವಾಹ ಉಕ್ಕೇರಿ ಭೋರ್ಗರೆಯುತ್ತದೆ. ಸೆಳವಿನಿಂದ ಬರುವ ನೀರಿನ ರಭಸದ ಅಬ್ಬರ ಭೀಕರವಾಗಿದೆ. ಅಲ್ಲೋಲಕಲ್ಲೋಲವಾಗಿ ಸಂಧಿಸಿ ಬರುವ ತೆರೆಗಳ ಆರ್ಭಟ ಕಿವಿ ಕಿವುಡಾಗುವಂತಿದೆ. ಇದರ ಜೊತೆಗೆ ಸಹಸ್ರಾರು ಸೈನಿಕರ ಉತ್ಸಾಹದ ಕೂಗು, ಕೇಕೆಗಳು ಸನ್ನಿವೇಶದ ತೀಕ್ಷ್ಣತೆಯನ್ನು ಹೆಚ್ಚಿಸಿವೆ. ಚಣಕಾಲ ಹೀಗಿಯೇ ಕಳೆಯಲು, ಒಮ್ಮಿಂದೊಮ್ಮೆಲೇ ' ಅತ್ತಿಮಬ್ಬೆಗೆ ಜಯ ಜಯಾ....' ಎಂದು ಎರಡು ಮೂರು ಸಲ ಸೈನಿಕರ ಏಕಕಂಠದ ಉತ್ಸಾಹದ ಕೂಗು ದಶದಿಕ್ಕುಗಳನ್ನು

ಪ್ರತಿಧ್ವನಿಸುತ್ತದೆ. ಅದರೊಂದಿಗೆ ನದಿಯ ಪ್ರವಾಹದ ಅಬ್ಬರ ಇಳಿದು, ವಾತಾವರಣ ಶಾಂತವಾಗುತ್ತದೆ-

ಸೈನಿಕ: (ಸಂಭ್ರಮದಿಂದ) ಪ್ರಭೋ! ಪ್ರಭೋ! ಅತ್ತಿಮಬ್ಬೆ ತಾಯಿ ನೀರಿಗೆ ಇಳಿದಂತೆ ಪ್ರವಾಹದ ರಭಸವೂ ಇಳಿದುಹೋಯಿತು. ಈಗ ನದಿ ಪೂರ್ಣ ಶಾಂತವಾಗಿದೆ, ಪ್ರಭೋ!

ತೈಲಪ: ಆಹಾ! ಅತ್ತಿಮಬ್ಬೇ. ನೀನು ಮನುಷ್ಯಳಲ್ಲ ತಾಯಿ—ಸಾಕ್ಷಾತ್ ದೇವಿ! ನಿನ್ನ ಈ ಪಾವನ ಚರಿತದಿಂದ ಚಾಳುಕ್ಯ ಸಾಮ್ರಾಜ್ಯ ಪುನೀತವಾಯಿತು.

ಸೈನಿಕ: ಪ್ರವಾಹ ಪೂರ್ತಿ ಇಳಿದುದರಿಂದ ಈಗ ನಾವು ನದಿಯನ್ನು ಸುಲಭವಾಗಿ ದಾಟಬಹುದು, ಪ್ರಭೋ.

ತೈಲಪ: (ಉತ್ಸಾಹದಿಂದ) ಭಟರೇ, ನಮ್ಮ ಸೈನ್ಯ ನದಿಯನ್ನು ದಾಟಿ, ಗೂರ್ಜರ ಸೈನ್ಯದಲ್ಲಿ ನುಗ್ಗಲಿ....ಹುಂ! ಮೊಳಗಲಿ ರಣಭೇರಿಗಳು!

ಧ್ವನಿ: ಕಹಳೆ, ಶಂಖ, ಭೇರಿಗಳ ರಣವಾದ್ಯದೊಂದಿಗೆ ಸಹಸ್ರಾರು ಸೈನಿಕರ ಉತ್ಸಾಹದ ಕೂಗು ಯುದ್ಧ ಸನ್ನಿವೇಶವನ್ನು ಮನಸ್ಸಿಗೆ ತಂದು ಕೊಡುತ್ತವೆ.

## ದೃಶ್ಯ ೫

[ಅತ್ತಿಮಬ್ಬೆಯ ಮನೆ]

ಸೈನಿಕ: ತಾಯಿ, ನಾಗದೇವ ದಣಾಯಕರು ನಿನ್ನಿನ ಯುದ್ಧದಲ್ಲಿ ವೀರಸ್ವರ್ಗವನ್ನೊಂದಿದರು.

ಅತ್ತಿಮಬ್ಬೆ: (ಕಂಪಿತ ಧ್ವನಿಯಲ್ಲಿ) ಏನಂದೇ!....ಇಲ್ಲ....ಇಲ್ಲ....ಸಾಧ್ಯವಿಲ್ಲ.... ಸ್ವಾಮಿ....(ಚಿಟ್ಟನೆ ಚೀರಿ ನೆಲಕ್ಕೆ ಕುಸಿದು ಬೀಳುತ್ತಾಳೆ.)

ಸುನಂದಾ: (ಸಾಂತ್ವನ ಧ್ವನಿಯಲ್ಲಿ) ಸಮಾಧಾನ ತಂದುಕೊಳ್ಳು ಅತ್ತಿಮಬ್ಬೇ.

ಅತ್ತಿಮಬ್ಬೆ: ಬಾಳಿನ ಕಲ್ಪವೃಕ್ಷವೇ ಕಡಿದು ಹೋದಮೇಲೆ ಇನ್ನೆಲ್ಲಿಯ ಸಮಾಧಾನ, ಸುನಂದೇ?

ಸುನಂದಾ: ಜನನ-ಮರಣಗಳು ಮಾನವನಿಗೆ ಅಧೀನವಾಗಿದ್ದರೆ ಈ ದುಃಖಕ್ಕೆ ಕಾರಣವೇ ಇರುತ್ತಿರಲಿಲ್ಲ, ತಾಯಿ. ಎಲ್ಲ ಆ ಅರ್ಹಂತನ ಇಚ್ಛೆ!

ಅತ್ತಿಮಬ್ಬೆ: ನನ್ನ ಸರ್ವಸ್ವವೇ ಹರಣವಾದ ಮೇಲೆ ಈ ನಶ್ವರವಾದ ಸುಖ ನನಗೇಕೆ ಬೇಕು, ಸುನಂದಾ....ಆ ಸ್ವಾಮಿಯನ್ನು ಹಿಂಬಾಲಿಸುತ್ತೇನೆ....

ಸ್ವರ್ಗದಲ್ಲಿ ಅವರನ್ನು ಪಡೆಯುತ್ತೇನೆ....(ದೃಢಧ್ವನಿಯಲ್ಲಿ) ಹೋಗು ಸುನಂದೇ, ಹೋಗು ! ಸಹಗಮನಕ್ಕೆ ಎಲ್ಲ ಸಿದ್ಧತೆಮಾಡು... ಹುಂ ನಡೆ !

ಗುಂಡಮಬ್ಬೆ : (ಪ್ರವೇಶಿಸಿ) ನಿಲ್ಲು ಸುನಂದೇ ! ಸಹಗಮನ ಮಾಡಬೇಕಾದವಳು ನಾನು !

ಅತ್ತಿಮಬ್ಬೆ : (ಬೆರಗು ಧ್ವನಿಯಲ್ಲಿ) ತಂಗೀ ಗುಂಡಬ್ಬೇ !

ಗುಂಡಮಬ್ಬೆ : (ಗದ್ಗದ ಕಂಠದಿಂದ) ಹೌದು ಅಕ್ಕಾ ! ನಿನಗೆ ಬಾಳಿಗೊಂದು ಆಸರೆ ಇರುವಾಗ ನೀನು ಚಿತೆಯೇರುವದು ಯೋಗ್ಯವಲ್ಲ. ಅಣ್ಣಿಗದೇವನ ಪಾಲನೆ ಪೋಷಣೆಯ ಕರ್ತವ್ಯ ನಿನ್ನ ಮೇಲಿದೆಯಕ್ಕಾ !

ಅತ್ತಿಮಬ್ಬೆ : ಬದುಕಬೇಕೆನ್ನುವ ಆಸೆ, ಆಕಾಂಕ್ಷೆಗಳು ಅವರ ಹಿಂದೆಯೇ ಹೋದವು, ತಂಗೀ. ನನ್ನ ಬಾಳಿನ ರನ್ನಗನ್ನಡಿಯೇ ಒಡೆದು ನುಚ್ಚು ನೂರಾಗಿ ಹೋದಮೇಲೆ ಇನ್ನು ಬದುಕಿ ನಾನೇನು ಸಾಧಿಸಲಿ ?....ನನ್ನನ್ನು ತಡೆಯಬೇಡವಮ್ಮಾ....

ಗುಂಡಮಬ್ಬೆ : ಅಕ್ಕಾ ! ಸ್ವರ್ಗದಲ್ಲಿರುವ ಆ ಸ್ವಾಮಿಯಾಣೆ, ನನ್ನಾಣೆ—ನೀನು ಚಿತೆಯೇರಕೂಡದು....ನಮ್ಮ ವಂಶದ ಒಂದೇ ಒಂದು ಕುಡಿಯಾದ ಅಣ್ಣಿಗನನ್ನು ಸಲಹದೆ ನೀನು ಚಿತೆಯೇರಿ ಮಹಾಪರಾಧವನ್ನು ಮಾಡುತ್ತಿರುವೆ. ಸ್ವರ್ಗವಾಸಿಯಾದ ಆ ಸ್ವಾಮಿಗೆ ನಿನ್ನಿಂದ ಶಾಂತಿ ದೊರೆಯಬೇಕಾದರೆ ನೀನು ಬದುಕಿರಲೇಬೇಕು !

ಅತ್ತಿಮಬ್ಬೆ : ನನ್ನನ್ನು ಕರ್ತವ್ಯಚ್ಯುತಳನ್ನಾಗಿಮಾಡಿ, ಲೋಕನಿಂದೆಗೆ ಗುರಿ ಮಾಡಬೇಡ, ತಂಗೀ.

ಗುಂಡಮಬ್ಬೆ : ನೀನು ಬದುಕಿ, ವಂಶೋದ್ಧಾರಕನಾದ ಅಣ್ಣಿಗನನ್ನು ಪೋಷಿಸಿ, ಆತನನ್ನು ವೀರಾಗ್ರಣಿಯನ್ನಾಗಿ ಮಾಡುವುದರಲ್ಲಿಯೇ ನಿನಗೆ ಶ್ರೇಯಸ್ಸು-ಪ್ರೇಯಸ್ಸುಗಳೆರಡೂ ಇವೆಯಕ್ಕಾ !

ಅತ್ತಿಮಬ್ಬೆ : ನನಗಾದ ಈ ದುರ್ಭರ ದುಃಖವನ್ನು ಹೇಗೆ ಮರೆತು ಬದುಕಲಿ, ತಂಗೀ ?

ಗುಂಡಮಬ್ಬೆ : ಅಣ್ಣಿಗನನ್ನು ನೋಡುತ್ತ ನಿನಗಾದ ದುಃಖವನ್ನು ನೀನು ಮರೆಯಬಹುದು. ಆದರೆ ನನಗಾದ ದುಃಖವನ್ನು ಮರೆಯಲು ಈ ಬಾಳಿನಲ್ಲಿ ನನ್ನದೆಂಬುದಾದರೂ ಏನಿದೆ, ಅಕ್ಕಾ ?....ಸಂತೋಷದಿಂದ ನಾನು ಅವರೊಂದಿಗೆ ಸಹಗಮನಮಾಡುತ್ತೇನೆ....

ಅತ್ತಿಮಬ್ಬೆ : (ಅಂತಃಕರಣದಿಂದ) ಬೇಡ ತಂಗಿ, ಬೇಡಾ !....ಗುಂಡಬ್ಬೇ, ಬೇಡ ನನ್ನ ತಾಯಿ, ಬೇಡಾ !

ಗುಂಡಮಬ್ಬೆ : (ದೃಢಧ್ವನಿಯಲ್ಲಿ) ಅದು ನನ್ನ ದೃಢಸಂಕಲ್ಪ! ಈಗ ನನ್ನನ್ನು ಯಾರೂ ತಡೆಯಲಾರರು, ಅಕ್ಕಾ! (ಹೋಗುವಳು)

ಅತ್ತಿಮಬ್ಬೆ : (ದುಃಖದಿಂದ) ಗುಂಡಬ್ಬೇ! ನನ್ನ ತಂಗೀ....ಹುಟ್ಟುವಾಗ ನಾನು ಮೊದಲಾದೆ, ಸಾಯುವಾಗ ನೀನು ಮೊದಲಾಗಬೇಕೇ? ಅಯ್ಯೋ.... (ಬಿಕ್ಕಿ ಬಿಕ್ಕಿ ಅಳುವಳು).

ಧ್ವನಿ : ಶ್ಲೋಕಪೂರಿತ ಕ್ಲಾರಿಯೆಟ್ ಧ್ವನಿ ಸನ್ನಿವೇಶದ ರೌದ್ರತೆಯನ್ನು ಸೂಚಿಸುತ್ತದೆ.

## ದೃಶ್ಯ ೬

[ಅತ್ತಿಮಬ್ಬೆಯ ಮನೆ]

ಧ್ವನಿ : ಪ್ರಾತಃಕಾಲದ ಸೂಚನೆಯನ್ನು ತಿಳಿಸುವಂತೆ ಕೊಳಲಿನ ನವಿರಾದ ಧ್ವನಿ ಕೇಳಿಬರುತ್ತದೆ.

ಅತ್ತಿಮಬ್ಬೆ : (ಶಾಂತಚಿತ್ತದಿಂದ ಶ್ರುತಿಯೊಂದಿಗೆ ಪಠಿಸುತ್ತಾಳೆ.)
ಓಂ ಣಮೋ ಅರಹಂತಾಣಂ । ಓಂ ಣಮೋ ಸಿದ್ಧಾಣಂ ।
ಓಂ ಣಮೋ ಆಯಾರಿಯಾಣಂ । ಓಂ ಣಮೋ ಉವಜ್ಝಾಯಾಣಂ ।
ಓಂ ಣಮೋ ಲೋಏ ಸಬ್ಬ ಸಾಹೂಣಂ ॥

ಸುನಂದೆ : ತಾಯಿಾ ಅತ್ತಿಮಬ್ಬೇ, ಕಾಣೂರ್ಗಚ್ಛದ ಅರ್ಹನಂದಿ ಮಹಾಸ್ವಾಮಿಗಳು ಇಲ್ಲಿಗೆ ದಯಮಾಡಿಸಿದ್ದಾರೆ.

ಅತ್ತಿಮಬ್ಬೆ : (ಶಾಂತಸ್ವರದಿಂದ) ಪೂಜ್ಯರನ್ನು ಮರ್ಯಾದೆಯಿಂದ ಕರೆತರು, ಸುನಂದೇ.

ಅರ್ಹನಂದಿ : (ರನ್ನಕವಿಯೊಂದಿಗೆ ಪ್ರವೇಶಿಸುತ್ತಾರೆ.)

ಅತ್ತಿಮಬ್ಬೆ : ಪೂಜ್ಯರಿಗೆ ನಮಸ್ಕರಿಸುತ್ತೇನೆ.

ಅರ್ಹನಂದಿ : ಗುಣದಂಕಕಾರ್ತಿಯಾಗಿ, ಬೇಡುವರ ದಾನಚಿಂತಾಮಣಿಯಾಗಿ, ಕವಿವರ ಕಾಮಧೇನುವಾಗಿ, ಜಿನಧರ್ಮಪತಾಕೆಯಾಗಿ ಬಾಳು ತಾಯಿಾ.

ಅತ್ತಿಮಬ್ಬೆ : ತಮ್ಮ ಅನುಗ್ರಹ.

ಅರ್ಹನಂದಿ : ಮಗಳೇ, ನಿನ್ನ ಮನಸ್ಸು ಯಾವುದೋ ಕ್ಲೇಶಕ್ಕೆ ವಶವಾದಂತಿದೆ!

ಅತ್ತಿಮಬ್ಬೆ : (ಉದಾಸೀನ ಧ್ವನಿಯಲ್ಲಿ) ಕ್ಷಣಭಂಗುರವಾದ ಯಾವುದೋ ಆಸೆಗೆ ಬದುಕಿದ ಈ ಜೀವ, ಕ್ಲೇಶಕ್ಕೆ ವಶವಾಗಿ ಪರಿತಪಿಸದೆ ಇನ್ನೇನು ಮಾಡೀತು, ಪೂಜ್ಯರೇ?

ಅರ್ಹನಂದಿ : ಕರ್ಮರ್ಕಕ್ಕೆ ಸೋಂಕಿದ ನಿನ್ನ ಈ ಜೀವ, ದೇಹಧಾರಣಮಾಡಿದರೂ ಅದು ಸದಾ ರತ್ನತ್ರಯವನ್ನು ಆಚರಿಸಿ, ಅಣುವ್ರತಮಾರ್ಗವನ್ನು ಅನುಸರಿಸಿ, ಮಲತ್ರಯಗಳನ್ನು ಜಯಿಸಿ, ಪರಮಪವಿತ್ರವಾಗಿದೆ, ಮಗಳೇ. ನೀನು ಪುಣ್ಯಜೀವಿ.

ಅತ್ತಿಮಬ್ಬೆ : ಇಲ್ಲ ಗುರುಗಳೇ, ನಾನು ಮಹಾಪಾಪಿ! ನನ್ನ ಸೌಭಾಗ್ಯವೇ ಹೋದಮೇಲೆ ಅವರೊಂದಿಗೆ ನಾನು ಚಿತೆಯೇರಬೇಕಾಗಿತ್ತು. ಆದರೆ ಸಾಧ್ವಿ ಗುಂಡಬ್ಬೆ ಮಾದ್ರಿಯಂತೆ ಚಿತೆಯೇರಿ, ತನ್ನನ್ನು ಮುಡುಪಿ ಪುಣ್ಯಕ್ಕೆ ಭಾಜನೆಯಾದಳು....ನಾನು ಇನ್ನೂ ಬದುಕಿದ್ದೇನೆ.

ರನ್ನ : ಸಾಧ್ವಿ ಗುಂಡಬ್ಬೆ ಪತಿಯೊಂದಿಗೆ ಒಂದು ಸಲ ಚಿತೆಯೇರಿ ಪುಣ್ಯಕ್ಕೆ ಭಾಜನೆಯಾದಳೇನೋ ಸರಿ. ಆದರೆ ಕಠೋರ ವ್ರತನಿಯಮಾದಿಗಳಿಂದ ದೇಹವನ್ನು ದಹಿಸುತ್ತ ಮಾಡುತ್ತಿರುವ ನಿಮ್ಮ ಪತಿಭಕ್ತಿ ಇನ್ನೂ ಉಗ್ರವಾಗಿದೆ, ತಾಯಿ. ನಿಮ್ಮ ಈ ಸಾಧನಮಾರ್ಗ ಯಾವ ಪುಣ್ಯಚರಿತೆಗೂ ಕಡಿಮೆಯಲ್ಲ.

ಅರ್ಹನಂದಿ : ಹೌದು ಮಗಳೇ, ಈ ಕವಿವರ ಹೇಳಿದ ಮಾತು ಸತ್ಯ.

ಅತ್ತಿಮಬ್ಬೆ : (ಕುತೂಹಲದಿಂದ) ಪೂಜ್ಯರೇ, ಯಾರು ಈ ತರುಣ ಕವಿಗಳು?

ಅರ್ಹನಂದಿ : ಈ ಕವಿಯ ಪರಿಚಯ ನಿನಗೆ ಆಗಲೆಂದೇ ಇಲ್ಲಿಗೆ ಕರೆತಂದಿದ್ದೇನೆ.... 'ರನ್ನ' ಎಂಬುದು ಈತನ ಹೆಸರು. ಜಂಬೂಖಂಡಿನಾಡಿನ ಮುದವೊಳದ ನಿವಾಸಿ. ಪ್ರತಿಭಾನ್ವಿತ ಕವಿ. ಉದ್ದಾಮ ಪಂಡಿತ. ಸರಸ್ವತಿಯ ಭಂಡಾರದ ಮುದ್ರೆಯನ್ನೊಡೆಯುವ ಕವಿತಾಸಾಮರ್ಥ್ಯ ಈತನಿಗಿದೆ........ಯೋಗ್ಯ ಆಶ್ರಯವಿಲ್ಲದೆ ಈತ ಕೆಲವು ದಿನ ನಾಡ ಪರ್ಯಟನೆ ಮಾಡಿದ. ಮೊದಲು ಗಂಗರ ಚಾವುಂಡರಾಯನಲ್ಲಿ ಆಶ್ರಯ ದೊರೆಯಿತು. ತರುವಾಯ ಬನವಾಸಿನಾಡಿನ ಮಹಾಮಂಡಳಾಧೀಶ್ವರ ಶಂಕರಗಂಡನಲ್ಲಿ ಸೇವೆಸಂದಿತು. ಈಗ ಈ ಕವಿರನ್ನನಿಗೆ ಆಶ್ರಯನೀಡಿ ಈತನನ್ನು ಕೃತಾರ್ಥನನ್ನಾಗಿ ಮಾಡು, ಮಗಳೇ.

ಅತ್ತಿಮಬ್ಬೆ : ಬಡವನಿಗೆ ಬಿಳಿಯಾನೆಯನ್ನು ಸಾಕು ಎಂದಂತಾಯಿತು—ನಿಮ್ಮ ಮಾತು. ನಾನು ಬಡವಿ. ಈ ಕವಿರಾಜಶೇಖರನಿಗೆ ಆಶ್ರಯ ನೀಡುವಷ್ಟು ತ್ರಾಣವಾದರೂ ನನ್ನಲ್ಲಿ ಏನಿದೆ, ಪೂಜ್ಯರೇ?....

ಅರ್ಹನಂದಿ : ಹಾಗೆನ್ನಬೇಡ ಮಗಳೇ. ನೀಡುವ ದಾನಿಗೆ ಮನದ ಕೊರತೆಯಲ್ಲದೆ ಧನದ ಕೊರತೆಯುಂಟೇ? ಮನಸಿದ್ದಲ್ಲಿ ಮಹಾವೀರನಿದ್ದಾನೆ.... ನಿನ್ನದು ದೊಡ್ಡ ಮನಸ್ಸು. ನಿನ್ನಿಂದ ಮಾಡಬೇಕಾದ ಕಾರ್ಯ ಬಹಳಷ್ಟಿವೆ, ತಾಯಿ.

ಅತ್ತಿಮಬ್ಬೆ : ತಮ್ಮಂಥಾ ಕಾರಣಿಕಶಕ್ತಿಗಳಿರುವಾಗ ನಾನು ಮಾಡುತ್ತೇನೆ ಎಂಬುದಕ್ಕೆ ನಾನೆಷ್ಟರವಳು ಪೂಜ್ಯರೇ ?

ಅರ್ಹನಂದಿ : ಒಂದು ಮಾತು ತಾಯಿ : ನಾಗದೇವನ ಮನೆತನದವರು ಸಾಮ್ರಾಜ್ಯಕ್ಕೆ ಸಲ್ಲಿಸಿದ ಸೇವೆಯನ್ನು ನೆನೆದ ತೈಲಪನು ಮಾಸವಾಡಿ ನೂರ ನಲವತ್ತರ ಪ್ರದೇಶವನ್ನು ಅಣ್ಣಿಗದೇವನಿಗೆ ಕೊಟ್ಟು, 'ಪಡೆವಳ ತೈಲ'ನೆಂಬ ಬಿರುದನ್ನು ನೀಡಿ, ಆತನನ್ನು ತನ್ನ ಮಾಂಡಲಿಕರಸನನ್ನಾಗಿ ಮಾಡಿ ಕೊಂಡಿದ್ದಾನೆ. ಈಗ ಆತ ಲೊಕ್ಕಿಗುಂಡಿಯನ್ನೇ ತನ್ನ ನೆಲವೀಡನ್ನಾಗಿ ಮಾಡಿಕೊಳ್ಳುತ್ತಾನೆ.

ಅತ್ತಿಮಬ್ಬೆ : ಅಂತೂ ಅಣ್ಣಿಗನೂ ತನ್ನ ಪೂರ್ವಜರಂತೆ ಸಾಮ್ರಾಜ್ಯಕ್ಕೆ ಸೇವೆ ಸಲ್ಲಿಸುವ ಸುಯೋಗವೊದಗಿತಲ್ಲಾ.... ಅದೇ ಸಮಾಧಾನ ಪೂಜ್ಯರೇ.

ಅರ್ಹನಂದಿ : ಜಿನಸಮಯ ಉದ್ಧಾರಕ್ಕೆ ಇದರಿಂದ ನಿನಗೂ ಸುಯೋಗ ಲಭಿಸಿತು, ತಾಯಿ. ಲೊಕ್ಕಿಗುಂಡಿಯನ್ನೇ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು ತನ್ಮೂಲಕ ನಿನ್ನಿಂದ ಜಿನಧರ್ಮ ಬೆಳಗಲಿ ! ನಿನ್ನ ಮಣಿಹ ಸಾರ್ಥಕ ವಾಗಲಿ !

ಅತ್ತಿಮಬ್ಬೆ : (ವಿನಯದಿಂದ) ನನ್ನಿಂದ ಸಲ್ಲಬೇಕಾದ ಸೇವೆಯಾದರೂ ಏನು ಪೂಜ್ಯರೇ ?

ಅರ್ಹನಂದಿ : ಮನಮುಟ್ಟಿಮಾಡುವ ಸೇವೆ ಅರ್ಹಂತನಿಗೆ ಯಾವುದಾದರೇನು, ಮಗಳೇ ? ಆದರೆ ಒಂದು ಮಾತು..... ಜಿನಧರ್ಮ ಪ್ರಸಾರಕ್ಕೆ ಇಂದು ಬಸದಿಗಳ ನಿರ್ಮಾಣ ಹಾಗೂ ಧರ್ಮ ಗ್ರಂಥಗಳ ಪ್ರಕಾಶನ ಅತ್ಯವಶ್ಯ. ಇವೆರಡು ಕಾರ್ಯಗಳು ಮಾತ್ರ ನಿನ್ನಿಂದ ನಡೆಯಬೇಕು.

ರನ್ನ : ತಾಯಿ, ಮಲ್ಲಪಯ್ಯ ಪೊನ್ನಮಯ್ಯರ ಆದೇಶದಂತೆ ಪೊನ್ನ ಕವಿ ಚಕ್ರವರ್ತಿಗಳಿಂದ ರಚಿತವಾದ ಶಾಂತಿಪುರಾಣದ ಪ್ರತಿಗಳು ತೀರಿಹೋಗಿ ಶ್ರಾವಕಜನದುಪಾಸನೆಗೆ ಕಷ್ಟವಾಗಿದೆ. ಈಗ ಅದರ ಸಾವಿರ ಪ್ರತಿಗಳನ್ನು ಬರೆಸುವ ಕಾರ್ಯ ನಡೆಯಬೇಕಾಗಿದೆ.

ಅರ್ಹನಂದಿ : ಶಾಂತಿ ಪುರಾಣದ ಸಾವಿರ ಪ್ರತಿಗಳನ್ನು ಮಾಡಿಸುವುದರ ಜೊತೆಗೆ ರನ್ನ ಕವಿಯಿಂದಲೇ ಇನ್ನೊಂದು ತೀರ್ಥಂಕರ ಪುರಾಣವನ್ನು ಬರೆಸು, ಮಗಳೇ. ಇದರಿಂದ ಸ್ವರ್ಗವಾಸಿಯಾದ ನಿಮ್ಮ ತಂದೆಯ ಆತ್ಮಕ್ಕೆ ಶಾಂತಿ ದೊರೆಯುತ್ತದೆ.

ಅತ್ತಿಮಬ್ಬೆ : ಕವಿಗಳೇ, ಎರಡನೆಯ ತೀರ್ಥಂಕರನಾದ ಅಜಿತನಾಥ ಮತ್ತು ಎರಡನೆಯ ಚಕ್ರವರ್ತಿಯಾದ ಸಗರನನ್ನು ಕುರಿತು 'ಅಜಿತ ತೀರ್ಥಂಕರ

ಪುರಾಣ ತಿಲಕ' ಎಂಬ ಕಾವ್ಯವನ್ನು ಆದಷ್ಟು ಬೇಗ ಬರೆದು ಮುಗಿಸ ಬೇಕು.

ರನ್ನ : ಆಗಲಿ ತಾಯಿ.

ಅತ್ತಿಮಬ್ಬೆ : ಪೂಜ್ಯರೇ, ಬಸದಿಗಳನ್ನು ನಿರ್ಮಿಸುವ ಭಾರ ಹೊತ್ತಿದ್ದೇನೆ; ಜಿನ ಸಮಯವನ್ನು ಪಸರಿಸುವ ಮಣಿಹವನ್ನು ಕೈಕೊಂಡಿದ್ದೇನೆ. ಇವುಗಳನ್ನು ನನ್ನ ಜೀವನ ಪರಿಯಂತ ಸಮರ್ಪಣಾಭಾವದಿಂದ ನಿರ್ವಹಿಸಿಕೊಂಡು ಹೋಗುವಂತೆ ನನಗೆ ಸರ್ವಶಕ್ತಿಯನ್ನು ದಯಪಾಲಿಸಿ, ನನ್ನನ್ನು ಆಶೀರ್ವದಿಸಿ.

ಅರ್ಹನಂದಿ : ತಾಯಿ ನಿನ್ನ ಸಂಕಲ್ಪಿತ ಸತ್ಕಾರ್ಯಗಳಿಗೆ ಅರ್ಹಂತನು ಸನ್ಮಂಗಳವನ್ನು ಮಾಡಲಿ. ನಿನ್ನ ಪವಿತ್ರಚರಿತ್ರೆ ಇತಿಹಾಸ ಸಂಪುಟದಲ್ಲಿ ಕಲ್ಪಾಂತರಸ್ಥಾಯಿಯಾಗಿ ನಿಲ್ಲಲಿ....ನಾವಿನ್ನು ಬರುತ್ತೇವೆ. ಭದ್ರಂ ಶುಭಂ ಮಂಗಲಂ.

## ದೃಶ್ಯ ೭

ಧ್ವನಿ : ಜಿನಮಂದಿರದಲ್ಲಿ ಜಿನನ ಪ್ರಾಣಪ್ರತಿಷ್ಠಾಪನೆಮಾಡುವ ಸೂಚನೆಯನ್ನು ತಿಳಿಸುವಂತೆ ಜಾಗಟೆ, ಶಂಖ, ಗಂಟೆ, ನಗಾರಿಗಳ ಧ್ವನಿ ಕೇಳಿಬರುತ್ತದೆ. ಮಂಗಳವಾದ್ಯಗಳೂ ಮೊಳಗುತ್ತವೆ. ಋಕ್ ಛಂದಸ್ಸಿನಿಂದ ವೈದಿಕರ ಮಂತ್ರಘೋಷ ಧ್ವನಿತವಾಗುತ್ತದೆ. ಅದು ಕ್ರಮೇಣ ಕಡಮೆಯಾಗುತ್ತ ಹೋಗುತ್ತದೆ.

೧ನೆಯ ಶ್ರಾವಕ : ಬನ್ನಿ ಬನ್ನಿ, ಬೇಗ ಬನ್ನಿ. ಅದೋ ಅಲ್ಲಿ ನೋಡಿ, ಅತ್ತಿಮಬ್ಬೆ ಕಟ್ಟಿಸಿದ ಆ ಜಿನಬಸದಿಯನ್ನು ; ಅಲ್ಲಿ ನಡೆಯುತ್ತಿರುವ ತೀರ್ಥಂಕರ ಪಂಚ ಕಲ್ಯಾಣೋತ್ಸವವನ್ನು. ಏನು ಭವ್ಯ ! ಏನು ವೈಭವ ! ಆಹಾ !....

೨ನೆಯ ಶ್ರಾವಕ : ನಡ್ರಿ ನಡ್ರಿ, ಲಘು ನಡ್ರೀ. ಊಟಕ್ಕ ಹೊತ್ತಾಗತ್ತದ. ಕಂಠಪೂರ್ತಿ ಊಟ ಟೊಂಕ ತುಂಬ ನಾಣ್ಯ ಸಿಕ್ಕರ ಸಾಕು; ನಮಗ್ಯಾಕ ಬೇಕು—ಆ ಭವ್ಯ....ಆ ವೈಭವ....ನಡ್ರೀ.

೧ನೆಯ ಶ್ರಾವಕ : ಅಣ್ಣಾ, ಒಂದು ಸಲ ಅಲ್ಲಿ ನೋಡು—ಲೊಕ್ಕಿಗುಂಡಿಯ ಆ ಬ್ರಹ್ಮಜಿನ ಬಸದಿಯನ್ನು ; ಆ ಪಂಚಕಲ್ಯಾಣೋತ್ಸವವನ್ನು. ಅದು ಕುಬೇರನ ಅಲಕಾನಗರಿಯನ್ನೇ ನಿವಾಳಿಸುವಂತಿದೆಯಲ್ಲವೇ ? ಅತ್ತಿಮಬ್ಬೆ ಕಟ್ಟಿಸಿದ ಸಾವಿರದೈನೂರು ಜಿನಬಸದಿಗಳಲ್ಲಿ ಇದೇ ಅತ್ಯಂತ ಭವ್ಯವಾಗಿದೆ.

೨ನೆಯ ಶ್ರಾವಕ : ಇರಬೇಕ್ರೀ. ನಾವೆಲ್ಲಿಲ್ಲಾಂದ್ವೀ........ನಮಗ ನೋಡ್ರೀ ಮೃಷ್ಟಾನ್ನಭೋಜನ ಕೈತುಂಬ ದಕ್ಷಿಣೆ ಬಂದರೆ ಸಾಕು—ಉಳಿದುದು ನಮಗ್ಯಾಕ್ರಪಾ ?

೧ನೆಯ ಶ್ರಾವಕ : ನೀವು ಎಲ್ಲಿಂದ ಬಂದುದು ?

೨ನೆಯ ಶ್ರಾವಕ : ಬಾಳ ದೂರದಿಂದ....ಗಂಗವಾಡಿ ನಾಡಿನಿಂದ....ಅತ್ತಿಮಬ್ಬೆ ಅನ್ನಸಂತರ್ಪಣೆ ಮಾಡೋದಲ್ಲದ ಪ್ರತಿಯೊಬ್ಬ ಶ್ರಾವಕಾಗ ಒಂದು ಚಿನ್ನದ ಗಂಟೆ, ರೇಷ್ಮಿ ದುಕೂಲ, ಬಂಗಾರದ ನೀಲಾಂಜನ ಮತ್ತು ಕೈತುಂಬ ದಕ್ಷಿಣೆ ಯನ್ನ ದಾನಮಾಡ್ತಾಳಾಂತ ಕೇಳಿ ಇಷ್ಟು ದೂರ ಬಂದಿವ್ರೀ, ಅಷ್ಟೇ. ಸರ್ರೀ ನಮಗ ಹೊತ್ತಾಗುತ್ತದ....ಏ, ಬಾರೋ ಹೋಗೋಣ.

೧ನೆಯ ಶ್ರಾವಕ : ತಾಯಿ ಅತ್ತಿಮಬ್ಬೇ, ನಿನ್ನ ಪುಣ್ಯಚರಿತೆಯೊಂದಿಗೆ ನಿನ್ನ ದಾನಶೀಲತೆ ಲೋಕವಿಖ್ಯಾತವಾಯಿತಲ್ಲಾ....ಧನ್ಯೋಽಸ್ಮಿ! ಧನ್ಯೋಽಸ್ಮಿ!

ಧ್ವನಿ : ಜಿನಬಸದಿಯಲ್ಲಿಯ ಮಂಗಳವಾದ್ಯಗಳು ಮತ್ತೊಮ್ಮೆ ಎತ್ತರ ಧ್ವನಿಯಲ್ಲಿ ಕೇಳಬರುತ್ತವೆ.

ತೈಲಪ : (ಭಕ್ತಿಭಾವದಿಂದ) ತಾಯಿ ಅತ್ತಿಮಬ್ಬೇ, ಸಾವಿರದೈನೂರು ಜಿನ ಬಸದಿಗಳನ್ನು ನಿರ್ಮಿಸಿ, ಸುವರ್ಣದಾನ ಮಾಡಿ ನೀನು ದಾನಚಿಂತಾಮಣಿ ಯಾದೆ. ನಿನ್ನ ಪವಿತ್ರಚರಿತ್ರದಿಂದ ಜಿನಧರ್ಮ ಬೆಳಗಿತು....ನೀನಿರುವ ನಾಡು ಪುಣ್ಯದ ಬೀಡು; ಅಲ್ಲಿ ಅಗ್ನಿ ಸ್ಪರ್ಶಿಸದು; ವಿಷ ಸೋಂಕದು; ದುರ್ಭಿಕ್ಷೆ ಬಾರದು. ನಿನ್ನಂಥಾ ಲಲಿತಗಾತ್ರೆಯನ್ನು ಪಡೆದ ಈ ಚಾಳುಕ್ಯ ಸಾಮ್ರಾಜ್ಯ ಧನ್ಯ ! ಇದೋ ತಾಯೇ, ನಿನ್ನ ಶ್ರೀಪಾದಗಳಿಗೆ ನಮೋ ನಮಃ, ನಮೋ ನಮಃ.

ಅತ್ತಿಮಬ್ಬೆ : (ವಾತ್ಸಲ್ಯದ ಧ್ವನಿಯಲ್ಲಿ) ಏಳು ತೈಲಪಾ. ಇದೆಲ್ಲ ಭಗವತ್ಪ್ರೇರಣೆ. ನಾನು ನಿಮಿತ್ತಮಾತ್ರಳು.

ರನ್ನ : ತಾಯಿ, ನಿಮ್ಮ ಆದೇಶದಂತೆ 'ಅಜಿತತೀರ್ಥಂಕರ ಪುರಾಣತಿಲಕ' ಕಾವ್ಯವನ್ನು ಈ ಮಂಗಲ ಮುಹೂರ್ತದಲ್ಲಿ ಪರಿಸಮಾಪ್ತಿಗೊಳಿಸಿ, ನಿಮಗೆ ಸಮರ್ಪಿಸುತ್ತಿದ್ದೇನೆ.

ಅತ್ತಿಮಬ್ಬೆ : ಬಾ ಕವೀಶ್ವರಾ. ಜಿನಧರ್ಮ ಉದ್ಧಾರಕ್ಕೆ ನಿನ್ನದೂ ಒಂದು ಸೇವೆ ಸಂದಿತು....ತೈಲಪ ಮಹಾರಾಜಾ, ಈ ರನ್ನಕವೀಶ್ವರನಿಗೆ ಆಶ್ರಯ ನೀಡಿ, ನಿನ್ನ ಆಸ್ಥಾನಕವಿಯನ್ನಾಗಿ ಸನ್ಮಾನಿಸು.

ತೈಲಪ : ಈ ಕವೀಶ್ವರರ ಪರಿಚಯ ಕೇಶಿದಂಡನಾಯಕರಿಂದ ನನಗೆ ಆಗಿದೆ, ತಾಯಿ. ಇವರ ಪ್ರಗಲ್ಭ ಕವಿತಾಶಕ್ತಿಯನ್ನು ಮೆಚ್ಚಿ, ಇಷ್ಟರಲ್ಲಿ ಇವರಿಗೆ

'ಕವಿಚಕ್ರವರ್ತಿ' ಎಂಬ ಬಿರುದನ್ನು ನೀಡಿ, ಆಸ್ಥಾನಕವಿಯನ್ನಾಗಿ ಸನ್ಮಾನಿಸಲು ನಿರ್ಧರಿಸಿದ್ದೇನೆ.

ರನ್ನ : ಇದೆಲ್ಲ ನಿಮ್ಮ ಅನುಗ್ರಹ ತಾಯಿ....ವಿದ್ವತ್ತಿಗೆ ಆಶ್ರಯ ಸಿಕ್ಕದೆ, ದಿಕ್ಕು ತೋಚದೆ ತಿರುಗುತ್ತಿದ್ದ ನನಗೆ ರಾಜಾಶ್ರಯ ದೊರಕಿಸಿಕೊಟ್ಟು ನನ್ನನ್ನು ಕೃತಾರ್ಥನನ್ನಾಗಿ ಮಾಡಿದಿರಿ....ನಿಮ್ಮ ದಾನಶೀಲತೆ ಈ ಭುವಿಯಲ್ಲಿ ಮಹಾದಾನಿಗಳೆಂದು ಖ್ಯಾತಿವೆತ್ತ ಬೂತುಗ, ಅಮಳ, ಮಾರಸಿಂಹ, ಚಾವುಂಡರಾಯ, ಶಂಕರಗಂಡರಿಗಿಂತಲೂ ಮಿಗಿಲು. ತ್ಯಾಗದ ಅಪರಾವತಾರವೇ ಎನಿಸಿದ ನಿಮ್ಮ ಪೂಜ್ಯಪಾದಗಳಿಗೆ ಇದೋ ನನ್ನ ಪ್ರಣಾಮಗಳು.

ಅತ್ತಿಮಬ್ಬೆ : ಕವಿವರಾ, ಕವಿಯಾಗಿ ನನ್ನನ್ನು ಕೈವಾರಿಸಬೇಡ. ಕವಿಸ್ಥಿತಿಯಿಂದ ಇಳಿದು ಲೌಕಿಕ ದೃಷ್ಟಿಯಿಂದ ನೋಡು—ನಾನು ಆ ಘನತೆಗೆ ಅರ್ಹಳೇ?

ರನ್ನ : ಜೋಳದ ಪಾಳಿಗೆ ನಿಮ್ಮನ್ನು ಕೈವಾರಿಸುತ್ತಿಲ್ಲ, ತಾಯಿ. ಪ್ರಾಂಜಲ ಮನಸ್ಸಿನಿಂದ ಹೇಳುತ್ತಿದ್ದೇನೆ—ನಿಮ್ಮ ಚರಿತ್ರೆ ಬಿಳಿಯರಳೆಯಂತೆ ಪರಿಶುದ್ಧ; ಗಂಗಾಜಲದಂತೆ ಪಾಪನಾಶಕ; ಅಜಿತಸೇನಮುನಿಗಳ ದರ್ಶನಪಡೆದಷ್ಟು ಪಾವನ; ಕೊಪಣಾದ್ರಿಯಂತೆ ಮಂಗಳದಾಯಕ. ಇದರಲ್ಲಿ ಸಂಶಯವಿಲ್ಲ ತಾಯಿ, ಸಂಶಯವಿಲ್ಲ.

ತೈಲಪ : ಕವಿಗಳೇ, ತಾಯಿಯ ಈ ಪುಣ್ಯಚರಿತೆಯನ್ನು ಲೋಕಕ್ಕೆ ತಿಳಿಯುವಂತೆ ನೀವು ಬರೆಯಬಾರದೇಕೇ?

ರನ್ನ : ಇಲ್ಲಿ ಬನ್ನಿ ಪ್ರಭೋ........ಇದೋ ನೋಡಿ—ಲೊಕ್ಕಿಗುಂಡಿಯ ಈ ಶಾಸನವನ್ನು. ಅತ್ತಿಮಬ್ಬೆಯ ಪುಣ್ಯಚರಿತೆಯನ್ನು ಈ ಶಿಲೆಯಲ್ಲಿ ಕೆತ್ತಲಾಗಿದೆ. ಈ ಶಾಸನ ಇರುವತನಕ ಈ ತಾಯಿಯ ಹೆಸರು ಈ ಭುವಿಯಲ್ಲಿ ಆಚಂದ್ರಾರ್ಕವಾಗಿ ನಿಲ್ಲುತ್ತದೆ. ಇದಕ್ಕಿಂತಲೂ ಹೆಚ್ಚಾಗಿ ಕನ್ನಡಿಗರ ಹೃದಯಮಂದಿರದಲ್ಲಿ ಈ ತಾಯಿಯ ಪಾವನಚರಿತೆ ಚಿರಂತನವಾಗಿ ಬೆಳಗುತ್ತದೆ. ಇದಕ್ಕಿಂತಲೂ ಇನ್ನೇನುಬೇಕು, ಪ್ರಭೋ?

ಧ್ವನಿ : ನಿಧಾನವಾಗಿ ಈ ಪದ್ಯ ತೇಲಿಬರುತ್ತದೆ:

ಜಿನಪದಪಂಕಜ ಭ್ರಮರನೆಂಬ ನೆಗಳ್ತೆಯಾಂತ—
ಮಲ್ಲಪಯ್ಯನ ನೆಗಳ್ದ ಅಪ್ಪಕಬ್ಬೆಯ ಮಗಳ್,
ಸಚಿವೋತ್ತಮನಪ್ಪ ದಲ್ಲಪಯ್ಯನ ಸೊಸೆ,
ನಾಗದೇವನ ಕುಲಾಂಗನೆ, ತೈಲನ ತಾಯ್,
ಜಸಕ್ಕೆ ಭಾಜನಮೆನಿಪ್ಪ ಅತ್ತಿಮಬ್ಬೆ—
ಜಿನಶಾಸನಮಂ ಬೆಳಗುತ್ತಮಿರ್ದಪಳ್. *

* ಈ ನಾಟಕವನ್ನು ಬರೆಯುವಾಗ ಸೂಕ್ತ ಸಲಹೆಗಳನ್ನು ನೀಡಿದ ಗುರುಗಳಾದ ಪ್ರೊ. ಎಂ. ಎಂ. ಕಲಬುರ್ಗಿ ಅವರಿಗೆ ಋಣಿಯಾಗಿದ್ದೇನೆ—ಲೇ.

# ಯಾಕಮ್ಮ?

(ಒಂದು ಜಾನಪದ ಸರಸ ಸಂಭಾಷಣೆ)

"ಸೂರ್ಯನ್ಗೆ ಸುತ್ಕಟ್ಟೆ ಚಂದ್ರನ್ಗೆ ಬಟ್ಟಿಕ್ಕಿ
ನಾಂಟ್ಯ ಆಡೂ ಹೆಣ್ಣೆ ಎಲೆ ಕೊಟ್ಹೋಗು"
"ಕೂದೆಲೆ ಮಡಲೇಲವೆ ಕುಯ್ದಿಲೆ ಗಿಡಚೇಲವೆ
ಕುಯ್ಯಬಲ್ಲ ಜಾಣನಾದ್ರೆ ಕುಯ್‌ಕೊಂಡ್ಹೋಗು"

* * * *

"ಏನ್ ಮಾಡಿಯಮ್ಮ?"
"ತಲೆಕೆಚ್ಚಿ ವಲೆ ಮ್ಯಾಲ್ ಹಾಕಿನ್ನಿ
ಭೂಮಿನೆಲ್ಲಾ ಹೊಲಿಗೆಯಾಡ್ತಾ ಇನ್ನಿ"
"ನಿಮ್ಮಪ್ಪ ನಿಮ್ಮವ್ವ ಎಲ್‌ಗ್ಹೋದ್ರು?"
"ನಮ್ಮಪ್ಪ: ಎರಡ್‌ಹಾದಿ ಬಂದ್‌ಹಾದಿ ಮಾಡಿ
ಕಂಡೋರ್ಗೆ—ಹೆಂಡರ್‌ಕೊಡೂಕ್ ಹೋಗವನೆ
ನಮ್ಮವ್ವ: ಸಂತೇಗ್ ಹೋಗವಳೆ
ಬಂದರೆ–ಬರೊಲ್ಲ; ಬರದೇ ಇದ್ರೆ–ಬತ್ತಾಳೆ"

**ಕೆಲವು ಟಿಪ್ಪಣಿಗಳು :**

ಇವಳು ಈ ಊರು; ಅವನು ಆ ಊರು: ಹೊಲದ ತಲಗಳಲ್ಲಿ, ತೆವರಿತಿಟ್ಟುಗಳಲ್ಲಿ ದನ ಕರುಗಳೊಡನೆ ಸಂಧಿಸುವ ಸೌಭಾಗ್ಯ ಇಬ್ಬರಿಗೂ ಇದೆ. ಬಾಯಿಕಣ್ಣುಗಳಲ್ಲಿ ಸುತ್ತಿ ಬಳಸಿ ಬುದ್ಧಿವಂತಿಕೆಯಿಂದ ಪರಸ್ಪರ ಚಪ್ಪರಿಸುತ್ತಾರೆ.

ಇವಳು: ಮಡಿಲು ಸೇರಿದ ಎಲೆಯೆಂದು ತನ್ನ ಮದುವೆಯಾಗಿರುವ ಸ್ಥಿತಿಯನ್ನು ಸೂಚಿಸಿ ಮನೆಯಲ್ಲಿರುವ ತಂಗಿಯ ಕಡೆ ಗಮನ ಸೆಳೆಯುತ್ತಾಳೆ.

ಅಪ್ಪ: ಬೆಳೆ ತುಳಿದು ನಡೆದ ಹಾದಿಹೋಕರ ಕಾಲುದಾರಿಗೆ ಮುಳ್ಳುಕಟ್ಟುವುದಕ್ಕೆ ಹೋಗಿದ್ದಾನೆ. ಹಾಗೆ ಕಟ್ಟ ಹೀಗೆ ಬಂದರೆ ನಮ್ಮ ಉಳಿತಾಯನಿಷ್ಠ ದಾರಿಗ ಸುಮ್ಮನಾಗುವಷ್ಟು ದಡ್ಡನೆ? ಬೈಗುಳದ ಅಟ್ಟಕ್ಕೆ ಕೈಹಾಕಿ, ಸಿಕ್ಕಿದ್ದು ಸಿಗದುದ್ದು ತೆಗೆ ತೆಗೆದೆಸೆಯುತ್ತಾನೆ: ಹೆಂಡತಿ, ಗಿಂಡತಿ... ...ಇತ್ಯಾದಿ.

ಅವ್ವ: ಸಂತೆಗೆ ಹೋಗಿದ್ದಾಳೆ; ಮೋಡ ಕಟ್ಟಿರುವ ಹೊತ್ತು; ಮಳೆಬಿದ್ದು ಹೊಳೆ ಬಂದರೆ ಅವಳು ಅಲ್ಲೇ!]

'ಕವಿ': ನಾಗಹೊನ್ನಯ್ಯ

ಲಿಪಿಕಾರ: ಕಾಳೇಗೌಡ ನಾಗವಾರ

ಶ್ರೀನಿವಾಸ ಹಾವನೂರ

# '೧೯ನೇ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ':*

## ಒಂದು ಸಮೀಕ್ಷೆ

### ಬಹಿರಂಗ

ಈ ಗ್ರಂಥದಲ್ಲಿ ಕಳೆದ ಶತಮಾನದ ಪಾಶ್ಚಾತ್ಯ ವಿದ್ವಾಂಸರ, ಅಂದರೆ ಯೂರೋಪ್/ಇಂಗ್ಲಂಡದಿಂದ ಬಂದ ಮಿಶನರಿ ಜನರ ಹಾಗೂ ಅಧಿಕಾರಿಗಳ, ಸಾಹಿತ್ಯ ಕಾರ್ಯದ ವಿವರಣೆಯಿದೆ. ಇದರಲ್ಲಿ ಮೂರು ವಿಭಾಗಗಳಿದ್ದು, ಮೊದಲಿನದರಲ್ಲಿ ಅಖಿಲ ಭಾರತ ಪಟ್ಟದಲ್ಲಿ ಕಾರ್ಯವೆಸಗಿದ ಪಾಶ್ಚಾತ್ಯ ವಿದ್ವಾಂಸರ ಉಲ್ಲೇಖವಿದೆ. ಪಾಶ್ಚಾತ್ಯರ ಕನ್ನಡ ಕೆಲಸಕ್ಕೆ ಹಿನ್ನೆಲೆಯಾಗಿ ಇದು ಬರುವುದು ಕ್ರಮಪ್ರಾಪ್ತವಾದದ್ದೇ. ಆದರೆ ಈ ವಿವರಣೆಯು ಒಟ್ಟಿನ ಗ್ರಂಥದ ಅರ್ಧದಷ್ಟು (ಎಂದರೆ ಮೊದಲಿನ ೨೫೦ ಪುಟಗಳಲ್ಲಿ ಮತ್ತು ಇತರ ಕಡೆಗಳಲ್ಲಿ) ಭಾಗವನ್ನು ಆಕ್ರಮಿಸಿದೆಯಾದ್ದರಿಂದ, ಪುಸ್ತಕದ ಮುಖ್ಯ ವಿಷಯದ ವಿವೇಚನೆಗೆ ನ್ಯಾಯವಾದ ಪ್ರಾಧಾನ್ಯ ದೊರೆತಿಲ್ಲ.

ಮುಂದಿನ ಎರಡು ಭಾಗಗಳಲ್ಲಿ ಕರ್ನಾಟಕದ ಮಿಶನರಿಗಳ ಕ್ರೈಸ್ತ ಸಾಹಿತ್ಯದ ಮತ್ತು ಇತರ ಕನ್ನಡ ಗ್ರಂಥಗಳ ರಚನೆಯ ವಿವರಗಳಿವೆ. ೫೦೦ಕ್ಕೂ ಮಿಕ್ಕಿದ ಪಾಶ್ಚಾತ್ಯ ಜನರ ವಾಙ್ಮಯ ಕಾರ್ಯದ ಹಾಗೂ ಇತರ ಪೂರಕ ಅಂಶಗಳ ವಿವರಗಳನ್ನು ಈ ಪುಸ್ತಕದ ಪ್ರತಿ ಪುಟದಲ್ಲಿಯೂ ಗಿಡಿದು ತುಂಬಲಾಗಿದೆ. ಲೇಖಕರು ವಿಷಯ ಸಂಗ್ರಹಕ್ಕೆ ತುಂಬಾ ಪರಿಶ್ರಮ ಪಟ್ಟಿದ್ದಾರೆ.

ಈ ಗ್ರಂಥದಲ್ಲಿ ೨೫ ಅಧ್ಯಾಯಗಳಿವೆಯಾದರೂ ಒಂದಕ್ಕೂ ಶೀರ್ಷಿಕೆಯಿಲ್ಲ. ಅಲ್ಲದೆ, ಒಂದು ಅಧ್ಯಾಯದಿಂದ ಇನ್ನೊಂದು ಅಧ್ಯಾಯಕ್ಕೆ ಕ್ರಮಬದ್ಧವಾದ ಹೊಂದಿಕೆಯಿಲ್ಲ. ೧೭ನೆಯ ಅಧ್ಯಾಯವು 'ಕರ್ನಾಟಕದ ಅಂದಿನ ವ್ಯಾಪ್ತಿ ಮತ್ತು ಮೇರೆ'ಯಿಂದ ಆರಂಭವಾಗಿ 'ವ್ಯಾಕರಣ ಗ್ರಂಥ'ಗಳವರೆಗೆ ಬಂದು

---

* ಲೇಖಕರು : ಐ. ಮಾ. ಮುತ್ತಣ್ಣ, ೧೯೬೯, ಪು. ೩೨ + ೫೮೧ + ೧೯, ರೂ. ೩೦

ನಿಲ್ಲುತ್ತದೆ. ಮುಂದೆ, ೧೮ನೆಯ ಅಧ್ಯಾಯವು ಮತ್ತೆ 'ಕರ್ನಾಟಕ ಭೂಪಠ' ದಿಂದ ಆರಂಭವಾಗುತ್ತದೆ.

ಪ್ರತಿ ಅಧ್ಯಾಯದಲ್ಲಿ ಹಲವು ಉಪಶೀರ್ಷಿಕೆಗಳಿವೆ. ಅಷ್ಟರಿಂದ ಆ ಅಧ್ಯಾಯದ ಮುಖ್ಯ ವಿಷಯವೇನೆಂಬುದು ಸ್ಪಷ್ಟವಾಗುವುದಿಲ್ಲ. ಮಾದರಿಗೆ ಒಂದು ಅಧ್ಯಾಯದ ಉಪಶೀರ್ಷಿಕೆಗಳನ್ನು ಇಲ್ಲಿ ಕೊಡುತ್ತೇವೆ :

"ಅಧ್ಯಾಯ ೨೧ : ಭಾಷಾಶಾಸ್ತ್ರಜ್ಞ ಕಾಲ್ಡ್ವೆಲ್; ಕನ್ನಡ ಮತ್ತು ಲ್ಯಾಟಿನ್ ಗ್ರಂಥಕರ್ತ ಬೌಟ್ಲೊ; ಸೇಂಡರ್ಸನ್ ಇವನ ನಿಘಂಟು, ಪೌರಾಣಿಕ ಗ್ರಂಥಗಳು, ಕತೆ ಪುಸ್ತಕಗಳು, ಜೈಮಿನಿ ಭಾರತ ಭಾಷಾಂತರ ಇತ್ಯಾದಿ; ವೂರ್ತ್ ಇವನ 'ಕಾವ್ಯಮಾಲಿಕೆ', ಛಂದೋಶಾಸ್ತ್ರ ; ಕೀಸ್, ಸ್ಟೀವನ್‌ಸನ್, ಗೋವರ್ ಇವರು ; ಕೊಂಕಣಿ, ತುಳು, ಕೊಡವ ಮತ್ತು ಬಡಗ ಭಾಷೆಗಳ ಮೇಲೆ ಮೇನರ್, ಬರ್ನೆಲ್, ರಿವೆರಾ ಇವರು." (ಪು. ೪೫೨).

ಇದರಲ್ಲಿ ಉಕ್ತರಾದ ವಿವಿಧ ಮಿಶನರಿಗಳು ಬೇರೆ ಬೇರೆ ಮಿಶನ್ ಸಂಸ್ಥೆಗಳಿಗೆ ಸಂಬಂಧಿಸಿದವರು. ಅವರ ಪುಸ್ತಕಗಳ ವಿಷಯದಲ್ಲಿ ಸಹ ಯಾವುದೇ ರೀತಿಯ ಏಕಸೂತ್ರತೆ ಕಂಡುಬರುವುದಿಲ್ಲ. ಇನ್ನೊಂದು ಮಾತೆಂದರೆ ಪರಿವಿಡಿ ಯಲ್ಲಿಯ ಉಪಶೀರ್ಷಿಕೆಗಳಿಗೂ ಅಧ್ಯಾಯಗಳಲ್ಲಿ ಬರುವ ಉಪಶೀರ್ಷಿಕೆಗಳಿಗೂ ಪರಸ್ಪರ ಹೊಂದಿಕೆಯಿಲ್ಲ. ಅಧ್ಯಾಯಗಳಲ್ಲಿದ್ದವುಗಳು ಶಾಸ್ತ್ರೀಯ ಗ್ರಂಥಕ್ಕೆ ಸೂಕ್ತವಾದವುಗಳೇನಲ್ಲ. ಕೆಲವು ನಮೂನೆಗಳಿವು :

"ಭಾರತೀಯ ಮತ್ತು ಐರೋಪ್ಯಾ ವಿಧ್ವಾಂಸರು ಬಿಕ್ಕಿ ಬಿಕ್ಕಿ ಅತ್ತರು." (ವಿಲಿಯಂ ಜೋನ್ಸ್‌ನನ್ನು ಕುರಿತು) (ಪು. ೧೬೬).

"ವಿಲಿಯಂ ಕ್ಯಾರಿ—ಇವನಾರು ಎಂದು ಗೊತ್ತೆ ?" (ಪು. ೧೭೯).

"ಎಲೊ ಯುವಕನೆ, ಕುಳಿತುಕೊ ಎಂದು ಆರ್ಭಟಕೊಳಗಾದನು" (ಅದೇ ಪುಟ).

"ಸಾಹಿತ್ಯದಲ್ಲಿ ಹೇಗೊ ಹಾಗೆಯೇ ವ್ಯವಸಾಯದಲ್ಲೂ" (ಪು ೧೮೫).

"ಮೋಕ್ಷಕ್ಕೆ ಮೂಲ — ಮ್ಯಾಕ್ಸ್ ಮುಲ್ಲರ್ — ಭಾರತೀಯರಂದರು" (ಪು. ೨೦೭).

"ತನ್ನ ಜನಾಂಗವನ್ನೆ ತೆಗಳಿದರೂ 'ಕಲೆಯು ಕಲೆಗಾಗಿ'—ಜಾನ್‌ಫ್ಲೀಟ್." (ಪು. ೫೧೨).

ಈ ಗ್ರಂಥದಲ್ಲಿ ೪೫ ಛಾಯಾಚಿತ್ರಗಳಿವೆ. ಅವು ಮುಖ್ಯತಃ ವಿದೇಶೀ ಲೇಖಕರ ಮತ್ತು ಕಳೆದ ಶತಮಾನದ ಹಳೆಯ ಮುದ್ರಿತ ಗ್ರಂಥಗಳ ಪ್ರತಿಕೃತಿ ಗಳಾಗಿವೆ. ವಿವಿಧ ಲೇಖಕರ ಛಾಯಾಚಿತ್ರಗಳನ್ನಂತೂ ಬೇರೆ ಬೇರೆ ಪುಸ್ತಕಗಳಿಂದ ಪುನರ್ಮುದ್ರಿಸಿದ್ದಾರೆ. ಆದರೂ ಮುತ್ತಣ್ಣನವರು 'ಎಲ್ಲಾ ಚಿತ್ರಗಳ ಹಕ್ಕು ಗ್ರಂಥಕರ್ತರಿಗೆ ಸೇರಿವೆ' ಎಂದೂ 'ಭಾವಚಿತ್ರಗಳನ್ನು ಉಪಯೋಗಿಸುವವರು

Copy right ಖಾನೂನನ್ನು ಅಕ್ಷರಶಃ ಪಾಲಿಸಬೇಕೆಂದೂ' ಹೇಳಿದ್ದಾರೆ. ತಾವೇ ಬೇರೆಯವರ ಪುಸ್ತಕಗಳಿಂದ ಪುನರ್ಮುದ್ರಿಸಿ ಕಾಪಿರೈಟನ್ನು ತಮ್ಮ ಹತ್ತಿರ ಇಟ್ಟುಕೊಳ್ಳಬಯಸಿದ ಈ ಲೇಖಕರಿಗೆ ಆ ಕಾನೂನಿನ ಮೂಲಭೂತ ಅಂಶವು ಸಹ ಗೊತ್ತಿಲ್ಲವೆಂದು ಹೇಳಬೇಕಾಗುತ್ತದೆ. ಕಿಟೆಲ್ ಕೋಶದ ಒಂದು ಪುಟವನ್ನು ಪ್ರಸ್ತುತ ಗ್ರಂಥದಲ್ಲಿ ಪುನರ್ಮುದ್ರಿಸಲಾಗಿದೆಯಷ್ಟೆ. ಅದರ ಹಕ್ಕು ಬಾಸೆಲ್ ಮಿಶನ್‌ದವರಿಗೆ ಸೇರಿದುದು; ಮುತ್ತಣ್ಣನವರದಲ್ಲ. ಅದರಂತೆ 'ಮಹಾರಾಜಾ ಕಾಲೇಜಿನವರ ಕೃಪೆಯಿಂದ' ಪುನರ್ಮುದ್ರಿಸಲಾದ ಬಿ. ಎಲ್. ರೈಸನ ಛಾಯಾ ಚಿತ್ರದ ಹಕ್ಕು ಮುತ್ತಣ್ಣನವರದೆನ್ನಲಾದೀತೆ?

ಚಿತ್ರಗ್ಗಳಿಗೆ ಕೊಟ್ಟಿರುವ ಶಿರೋನಾಮೆಗಳು ಅನೇಕ ಕಡೆ ತಪ್ಪಿವೆ. 'ರೆ. ಮ್ಯಾಗ್ಲಿಂಗನು 1854ರಲ್ಲಿ ಪ್ರಕಟಿಸಿದ ಕೊಡಗಿನ ರಾಜೇಂದ್ರನಾಮೆ' ಇದರ ಮೊದಲ ಪುಟದ ಛಾಯಾಚಿತ್ರವನ್ನು ಕೊಡಲಾಗಿದೆ. ಆದರೆ ಅದರ ಪ್ರಕಟನ ವರ್ಷವು ೧೮೫೭. ಈ ಅಂಶವು ಪುಸ್ತಕದಲ್ಲಿಯೆ ಎದ್ದು ಕಾಣುವಂತಿರುವಾಗ, ಈ ತಪ್ಪು ಆಗಬಾರದಿತ್ತು. ೧೯೦೪ರಲ್ಲಿ ಮುಂಬಯಿ ಕಾಂಗ್ರೆಸ್ ಅಧಿವೇಶನದ ವೇಳೆಗೆ ತೆಗೆದ ಚಿತ್ರವನ್ನು ಮೂಡಿಸುತ್ತ 'ಭಾರತೀಯರಿಗೆ ದೇಶಾಭಿಮಾನವನ್ನು ಹುಟ್ಟಿಸಲು ಕಾರಣೀಭೂತರಾದ ಅಂದಿನ ಪಾಶ್ಚಾತ್ಯ ಧುರೀಣರು' ಎಂಬ ಶಿರೋನಾಮೆಯನ್ನು ಕೊಟ್ಟಿದ್ದಾರೆ. ಆದರೆ ಅಲ್ಲಿ ಕೊಟ್ಟಿರುವ ೧೧ ಜನರ ಹೆಸರುಗಳಲ್ಲಿ ಕೇವಲ ನಾಲ್ಕು ಜನ ಪಾಶ್ಚಾತ್ಯರಿದ್ದಾರೆ.

ಪುಸ್ತಕದ ತುಂಬೆಲ್ಲ ಭಾಷಾದೋಷಗಳು, ಅಸ್ಪಷ್ಟ ವಿಚಾರಗಳು, ಪುನರುಕ್ತಿಗಳು ಹಾಗೂ ಅಚ್ಚಿನ ದೋಷಗಳು ಹರಡಿಕೊಂಡಿವೆ. ವಿಷಯ ಸಂಗ್ರಹಕ್ಕಾಗಿ "ದಕ್ಷಿಣ ಹಿಂದೂಸ್ಥಾನದ ಹಲವು ಪ್ರಧಾನ ಗ್ರಂಥಭಂಡಾರಗಳನ್ನು ಶೋಷಣೆ ಮಾಡಿದೆನು" ಎಂದು ನಿವೇದಿಸಿದ್ದಾರೆ (ಪು. XII). ಶೋಧನೆಮಾಡಿದೆನು ಎಂದು ಹೇಳಬಯಸಿದ್ದರೆಂದು ಕಾಣುತ್ತದೆ ಮೆಕೆನ್ಸಿಯು 'ನೂರಾರು ದೇವಾಲಯಗಳನ್ನೂ ಬ್ರಾಹ್ಮಣ, ಜೈನ ಮತ್ತು ವೀರಶೈವ ಮಠಗಳನ್ನೂ ಪ್ರಾಚೀನ ಗ್ರಂಥಗಳಿಗಾಗಿ 'ಕೊಳ್ಳೆ ಹೊಡೆದನು' ಎಂದಿದ್ದಾರೆ! "ಫ್ಲೀಟ್ ಅವನು ಸಾಧಿಸಿದ ಅನ್ವೇಷಣೆಗಿಂತ ಎಷ್ಟೋ ಮಿಗಿಲಾಗಿ ಕರ್ನಾಟಕದ ಬಗ್ಗೆ ದುಡಿದನೆಂಬುದಕ್ಕೆ ಅವನ Epigraphia Carnatica ಮತ್ತಿತರ ಗ್ರಂಥಗಳೇ ಸಾಕ್ಷಿಯಾಗಿವೆ." (ಪು. ೫೧೯). ಈ ವಾಕ್ಯದಲ್ಲಿ ಫ್ಲೀಟನ ಆದಾವ ಗುಣವನ್ನು ಎತ್ತಿ ಹಿಡಿಯಬಯಸಿದ್ದಾರೆಂಬುದು ಸ್ಪಷ್ಟವಾಗುವಂತಿಲ್ಲ. ಮೇಲಾಗಿ, E.C.ಯ ಸಂಪುಟಗಳು ಅವನ ಗ್ರಂಥಗಳೇ ನಲ್ಲ. ಇತ್ತ ಪುನರುಕ್ತಿಯು ಯಾವುದೊಂದು ವಿಚಾರ ಮಂಡನೆಯಲ್ಲಿ, ಅದರಂತೆ ವಿವಿಧ ಗ್ರಂಥಗಳ ಹಾಗೂ ಲೇಖಕರ ಬಗೆಗಿನ ಮಾಹಿತಿಯಲ್ಲಿ ಅಲ್ಲದೆ, ಅವತರಣಿಕೆಗಳಲ್ಲಿ ಸಹ ಕಂಡುಬರುತ್ತದೆ.

ಈ ಗ್ರಂಥದಲ್ಲಿ ಅಗಣಿತವಾದ ಮಾಹಿತಿಯಿದೆಯಷ್ಟೆ. ಅವುಗಳಲ್ಲಿ ಒಂದಕ್ಕೂ

ಆಕರವನ್ನು ಸೂಚಿಸದಿದ್ದುದು ಸೋಜಿಗದ ಸಂಗತಿಯಾಗಿದೆ. ಅವರು ಉಲ್ಲೇಖಿಸಿದ ನೂರಾರು ಅಂಶಗಳು ಮನದಟ್ಟಾಗಬೇಕಾದರೆ, ಆಕರಗಳನ್ನು ಹೇಳಲೇಬೇಕಾಗುತ್ತದೆ. ೧೮ನೇ ಶತಮಾನದಲ್ಲಿದ್ದ ಚಾರ್ಲ್ಸ್ ಬೂನ್ ಎಂಬ ಗವರ್ನರನ ಬಗ್ಗೆ ಬರೆಯುತ್ತ, "ಈಗ ನರ್ಮದೆವರೆಗಿನ ಪಶ್ಚಿಮ ಕರಾವಳೀ ಸೀಮೆಗಳವರೆಗೂ ಇದ್ದ ಜನರು ಕನ್ನಡ ಭಾಷೆಯನ್ನೇ ಆಡುತ್ತಿದ್ದರೆಂದೂ ಒಂದು ಸಂದರ್ಭದಲ್ಲಿ ಕನ್ನಡವೇ ಬೊಂಬಾಯಿಯಲ್ಲಿ ಅಧಿಕೃತವಾದ ದೇಶೀಯ ಭಾಷೆಯಾಗಿತ್ತೆಂದೂ ತಿಳಿದುಬಂದಿದೆ" ಎನ್ನುತ್ತಾರೆ. ಸಂದಿಗ್ಧವಾದ, ಅದರೂ ವಿಚಾರಣೀಯವಾದ ಈ ಹೇಳಿಕೆಗೆ ಆಧಾರಕೊಟ್ಟಿದ್ದರೆ, ಬೇರೆ ಸಂದರ್ಭಗಳಲ್ಲಿ ಅದರ ಪ್ರಯೋಜನ ಪಡೆಯಬಹುದಿತ್ತು. ಅಲ್ಲದೆ, ಅನೇಕ ಗ್ರಂಥಗಳಿಂದ ನೇರವಾದ ಅವತರಣಿಕೆಗಳನ್ನು ಕೊಟ್ಟಿರುವರಷ್ಟೆ. ಕೆಲವೆಡೆ ಅವನ್ನು ಯಾರು ಹೇಳಿದ್ದಾರೆಂಬುದರ ಉಲ್ಲೇಖವೇ ಇಲ್ಲ. (ಉದಾಹರಣೆಗೆ, ಪು. ೩೩೮). ಅಂದಾಗ ಆ ಮಾತಿಗೆ ಯಾವ ಬೆಲೆ ಬಂದೀತು? ಸಂಶೋಧನ ಗ್ರಂಥವೊಂದರಲ್ಲಿ ಆಕರಗಳನ್ನು ಹೇಳದೆ ಹೋದರೆ ಅದನ್ನು ಅಧಿಕಾರಯುಕ್ತವಾದುದೆಂದು ಒಪ್ಪಲು ಹಿಂದೆ ಮುಂದೆ ನೋಡಬೇಕಾಗುವುದು.

ಹೀಗೆ, ಆಕರಗಳನ್ನು ಹೇಳದಿದ್ದರೂ, ಅವು ಯಾವುವೆಂಬುದನ್ನು ಕಂಡುಹಿಡಿಯುವುದು ಬಹುಮಟ್ಟಿಗೆ ಸಾಧ್ಯವಿದೆ. ಕನ್ನಡ ಲೇಖಕ/ಪುಸ್ತಕಗಳ ಬಗ್ಗೆ ಹೇಳಿದ ಅನೇಕ ವಿವರಗಳು, ಎಲ್ ಡಿ. ಬಾರ್ನೆಟ್‌ನಿಂದ ಸಿದ್ಧಗೊಂಡ ಬ್ರಿಟಿಷ್ ಮ್ಯೂಜಿಯಂ ಕನ್ನಡ ಪುಸ್ತಕಗಳ ಕೆಟಲಾಗಿನಲ್ಲಿ ದೊರೆಯುತ್ತವೆ. ಅದರಲ್ಲಿ ೧೮೧೭ರಿಂದ ೧೯೦೮ರ ವರೆಗಿನ ಕನ್ನಡ ಪುಸ್ತಕಗಳ ವಿವರಗಳಿವೆ. ಬಾರ್ನೆಟ್ ಮುಂಬಯಿ ಪ್ರಾಂತದಲ್ಲಿ ಅಧಿಕಾರಿಯಿದ್ದಾಗ ಕನ್ನಡವನ್ನು ಚೆನ್ನಾಗಿ ಕಲಿತಿದ್ದನು. ಮತ್ತು ಪ್ರತಿಯೊಂದು ಪುಸ್ತಕವನ್ನು ಪರಿಶೀಲಿಸಿ ಈ ಸೂಚಿಯನ್ನು ಸಿದ್ಧಪಡಿಸಿರುವನಾದ್ದರಿಂದ ಅದರಲ್ಲಿ ಬಂದ ವಿಷಯಗಳ ಪ್ರಾಮಾಣ್ಯವನ್ನು ಶಂಕಿಸಬೇಕಾದದ್ದೇ ಇಲ್ಲ. Linguistic Survey of India ಇದರ ೪ನೆಯ ಸಂಪುಟದಲ್ಲಿಯೂ ಮುತ್ತಣ್ಣನವರು ಕೊಟ್ಟ ಕೆಲವು ಮಹತ್ವದ ವಿವರಗಳಿವೆ.

ನೂರಾರು ಪಾಶ್ಚಾತ್ಯರ ನಾಮನಿರ್ದೇಶನ ಈ ಗ್ರಂಥದಲ್ಲಿ ಬಂದಿದೆಯಷ್ಟೆ. ಆ ಹೆಸರುಗಳನ್ನು ಇಂಗ್ಲಿಷ್‌ನಲ್ಲಿಯೆ ಕೊಡಬೇಕೆಂಬುದು ಮುತ್ತಣ್ಣನವರ ಅಪೇಕ್ಷೆ. 'ಮುಂದಿನ ಪೀಳಿಗೆಗೆ ಆ ಇಂಗ್ಲಿಷ್ ಹೆಸರುಗಳ ಬರವಣಿಗೆ ಕ್ರಮವನ್ನು ಕಾದಿಡುವ ಸಲುವಾಗಿ' ಹಾಗೆ ಬರೆದದ್ದರ ಕಾರಣ ಕೊಟ್ಟಿದ್ದಾರೆ. ಇಂಗ್ಲಿಷ್ ವ್ಯಾಸಂಗವು ಕಡಮೆಯಾಗುತ್ತ ನಡೆದಿದ್ದು ಕ್ಷಿಪ್ರದಲ್ಲಿಯೇ ಆ ಭಾಷೆ ಭಾರತದಿಂದ ತೊಲಗಿಬಿಟ್ಟರೆ, ಮುಂದೇನು ಗತಿ—ಎಂಬ ಭಯವೇನೊ!

ಮುತ್ತಣ್ಣನವರು ಬಹುತರ ಎಲ್ಲ ಹೆಸರುಗಳನ್ನೂ ಇಂಗ್ಲಿಷ್‌ನಲ್ಲಿ ಕೊಟ್ಟಿದ್ದರೂ, ಅನೇಕ ಕಡೆಗೆ ಅವುಗಳ ಕನ್ನಡ ರೂಪವನ್ನು ಕಾಣಿಸಿದ್ದಾರೆ.

ಆದರೆ ಅವುಗಳ ಉಚ್ಚಾರ ಹಾಗೂ ಅಕ್ಷರಿಕೆಯಲ್ಲಿ ಸಾಕಷ್ಟು ತಪ್ಪುಗಳಾಗಿವೆ. ಈ ಕೆಲವನ್ನು ಗಮನಿಸಬಹುದು :

| ಮೂಲ | ಈ ಪುಸ್ತಕದಲ್ಲಿ ಬಂದ ರೂಪ | ತಕ್ಕಮಟ್ಟಿಗೆ ಸರಿಯಾದ ರೂಪ |
|---|---|---|
| Buchanan | ಬುಚಾನನ್ | ಬುಕನನ್ |
| Würth | ವೂರ್ತ್ | ವೆರ್ತ್ |
| Luthi | ಲ್ಯೂಟಿ | ಲೂಥಿ (ತಿ) |
| Hulstz | ಹಲ್ಸ್ಟ್ಸೆಜ್ | ಹಲ್ಷ್ |
| Gover | ಗವಾರ್ | ಗೋವರ್ |
| Bouteloup | ಬೌಟ್ಲೋ | ಬೌತಲೂ |

ಇದು ಉಚ್ಚಾರಕ್ಕೆ ಸಂಬಂಧಿಸಿದ ಮಾತಾಯಿತು. ಇನ್ನು ಕೆಲವೆಡೆ ಸ್ವಂತ ಹೆಸರು, ಅಡ್ಡ ಹೆಸರು ಇವುಗಳ ವ್ಯತ್ಯಾಸವನ್ನು ತಿಳಿದುಕೊಳ್ಳದಿದ್ದುದರಿಂದ, ಪ್ರಮಾದಗಳಾಗಿವೆ. ಕಾನ್ಸ್ಟೆಂ ಝೂ ಜಿ. ಇ. ಬೆಸ್ಕಿ ಎಂಬವನು ೧೭ನೇ ಶತಮಾನದಲ್ಲಿ ತಮಿಳು ನಾಡಿನಲ್ಲಿದ್ದ ಓರ್ವ ಸುಪ್ರಸಿದ್ಧ ಮಿಶನರಿ. ಆ ಭಾಷೆಯಲ್ಲಿ ಕ್ರೈಸ್ತ ಸಾಹಿತ್ಯವನ್ನೂ ಕೋಶ–ವ್ಯಾಕರಣಗಳನ್ನೂ 'ಪರಮಾರ್ಥ ಗುರುವಿನ ಕಥೈ' ಎಂಬುದನ್ನೂ ರಚಿಸಿದ್ದಾನೆ. ಬೆಸ್ಕಿಯ ಹೆಸರು ದಕ್ಷಿಣ ಭಾರತದಲ್ಲಿ ಬಹು ಕಾಲದಿಂದ ಸುಪರಿಚಿತವಾದುದು. ಅವನ ಹಲವು ಕೃತಿಗಳು ಭಾರತದ ಹತ್ತಾರು ಭಾಷೆಗಳಲ್ಲಿ ಅನುವಾದಗೊಂಡಿವೆ. ಕನ್ನಡದಲ್ಲಿ ಅವನ ಕ್ರೈಸ್ತಮತೀಯ ಕೃತಿಗಳಲ್ಲದೆ, ಪರಮಾರ್ಥ ಗುರುವಿನ ಕತೆಯೂ ಅನುವಾದಗೊಂಡಿದೆ. ಕಳೆದ ಶತಮಾನದಲ್ಲಿ ಅದನ್ನು ಅನುವಾದಿಸಿದವರು ಜೆ. ಬ್ಯಾರಿಲ್ ಹಾಗೂ ಆರ್. ನರಸಿಂಹಾಚಾರ್ಯರು. ಆದರೆ ಮುತ್ತಣ್ಣನವರ ಗ್ರಂಥದಲ್ಲಿ ಅದೆಲ್ಲ ತಿರುವು ಮುರುವಾಗಿದೆ. ಅವನ ಹೆಸರನ್ನು 'ಬೆಸ್ಸಿ ಕಾಸ್ಟಾನ್ಜಾ' ಎಂದು ಓದಿದುದಲ್ಲದೆ, ಅವನ ಬಗ್ಗೆ ಬಂದ ಹೇಳಿಕೆ ಇಂತಿದೆ :

"ಇವನು ಕನ್ನಡದಲ್ಲಿ ತನ್ನ ಧರ್ಮವನ್ನು ಮತ್ತು ಮತವನ್ನು ಕುರಿತು ಬರೆದ ಪುಸ್ತಕಗಳು ಬರೇ ಒಂದೆರಡು ಮಾತ್ರವಾಗಿದ್ದರೂ ಅವು ಬಹುಕಾಲ ಹಲವು ಕ್ರೈಸ್ತಗುಡಿಗಳಲ್ಲಿ ಪಠಿಸಲ್ಪಡುತ್ತಿದ್ದಂಥವುಗಳಾಗಿದ್ದವು....Beschi Castanza ಇವನು 1847ರ ಕಾಲದಲ್ಲಿ George Weigle ಮತ್ತು H. Moegling ಇವರು ರಚಿಸಿದ "ಕ್ರೈಸ್ತಗೀತಗಳು" ಎಂಬ ಪುಸ್ತಕಕ್ಕೆ ತನ್ನ ಮುದ್ರೆಯನ್ನು ಒತ್ತಿದ್ದನು. ಆದರ ನಂತರ ಎಲ್ಲೆಲ್ಲೂ ಉಪನ್ಯಾಸಗಳು ಮತ್ತು ಭಾಷಣಗಳಲ್ಲಿಯೇ ತನ್ನ ಕಾಲವನ್ನು ಕಳೆದನು....Benjamin L. Rice ಇವನಿಂದ ಬರೆಯಲ್ಪಟ್ಟದೆಂದೆನ್ನಲಾದ "ಪರಮಾರ್ಥ ಗುರುವಿನ ಕತೆ"ಯೆಂಬ 119 ಪುಟಗಳ ಪುಸ್ತಕದಲ್ಲೂ

Beschi Castanza ಇವನ ಕೈವಾಡವಿತ್ತೆಂದೂ ಅದರ ಹೆಚ್ಚಿನ ಭಾಗವನ್ನು ಇವನೇ ಬರೆದನೆಂದೂ ಹೇಳಲಾಗಿದೆ. ಕ್ರಿ.ಶ. 1877ರಲ್ಲಿ ಪ್ರಕಟವಾದ ಈ ಪುಸ್ತಕವು Rev. J. Bereille ಇವನು ತಮಿಳು ಭಾಷೆಯಲ್ಲಿ ಬರೆದುದರ ಕನ್ನಡಾನುವಾದವಾಗಿದೆ." (ಪು. ೨೯೨-೯೩).

ಈ ಪುಸ್ತಕದಿಂದ ಒಂದು ಅವತರಣಿಕೆಯನ್ನು ಸಹ ಕೊಟ್ಟಿರುವುದರಿಂದ ಮುತ್ತಣ್ಣನವರು ಅದನ್ನು ಕಣ್ಣಾರೆ ನೋಡಿರಬೇಕು. ಆ ಪುಸ್ತಕದ ಮುಖಪುಟದಲ್ಲಿಯೇ ಕಾಣಿಸಲಾದ 'A tale originally written in Tamil by the Celebrated Father Beschi, now translated into Canerese, and accompanied by an English translation, Edited by Rev. J. Bareille' ಎಂಬುದನ್ನು ಗಮನಿಸದಿದ್ದುದು ಆಶ್ಚರ್ಯಕರವಾಗಿದೆ.

ದೇಶೀಯ ಹೆಸರುಗಳನ್ನು ಬರೆಯುವಲ್ಲಿಯೂ ಅನೇಕ ತಪ್ಪುಗಳಾಗಿವೆ. ಬಾಲಾಚಾರ್ಯ [ಬಾಳಾಚಾರ್ಯ] ಸಕ್ಕರಿ, ಟುರಮರಿ [ತುರಮರಿ], ಬಿ. ಹರಿ ಸಾಮಂತ [ಆಬಾಜಿ ಹರಿ ಸಾಮಂತ], ರಾ. ಪ್ರಭಾಕರ [ರಾಮಚಂದ್ರ ಪ್ರಭಾಕರ ಜೋಶಿ], ಘೊಂಡೊ ನರಹರಿರಾಯ [ಘೋಂಡೋ ನರಸಿಂಹ ಮುಳಬಾಗಲ], ರಂಗೋ ಕಟ್ಟಿ [ವೆಂಕಟ ರಂಗೋ ಕಟ್ಟಿ], ಶ್ರೀರಾಮ ಅನಂತ್ [ಶ್ರೀರಾಮ ಅನಂತ ಮೂಡಭಟ್ಕಳಕರ]— ಇವನ್ನು ಓದುವಾಗ ಹಿಡಿದು ಬಿಟ್ಟಂತಾಗುತ್ತದೆ. ಅಬದ್ಧವಾದ ರೀತಿಯಲ್ಲಿ ಲೇಖಕರ ಹೆಸರನ್ನು ಬರೆಯುವುದಾದರೆ ಅದು ಆ ಲೇಖಕರಿಗೆ ಅನ್ಯಾಯ ಬಗೆದಂತೆಯೇ ಸೈ.

ಪುಸ್ತಕಗಳ ಹೆಸರುಗಳನ್ನು ಹೇಳುವಾಗಲೂ ತುಂಬಾ ವಿಪರ್ಯಾಸಗಳು ಕಂಡುಬರುತ್ತವೆ. ವೆಂಕಟಾಧ್ವರಿಯ ಸುಪ್ರಸಿದ್ಧ ಸಂಸ್ಕೃತ ಕೃತಿಯಾದ 'ವಿಶ್ವಗುಣಾದರ್ಶ'ವು ಇಲ್ಲಿ 'ವಿಶ್ವಗುಂಡ ದರ್ಶನ'ವಾಗಿದೆ! ಕ್ಯಾಪ್ಟನ್ ಬೆಸ್ಟ್ ಇವನ 'ಪೈಮಾಯನೆಯ ಲೆಖ್ಖದ ವಿವರ' ಎಂಬ ಪುಸ್ತಕವು ಜಮೀನುಗಳ ಅಳತೆ ಮಾಡುವುದರ ಕೈಪಿಡಿಯಾಗಿದೆ. ಮುತ್ತಣ್ಣನವರು ಅದರ ಹೆಸರನ್ನು 'ಪಾಯ ಮಾನಸಿಕ ಲೆಖ್ಖದ ವಿವರವು' ಮತ್ತು 'ಪಾಯಮಾನಸಿಕ ವ್ಯಾಯಮಾನ'ವೆಂದೂ ಕರೆದಿದ್ದಾರೆ (ಪು. ೪೩೭). ಆ ಪುಸ್ತಕದ ಒಂದೆರಡು ಪುಟಗಳ ಛಾಯಾಚಿತ್ರಗಳನ್ನು ಕೊಟ್ಟಿದ್ದಾರೆ. ಅಂದಮೇಲೆ ಪುಸ್ತಕವು ಕಣ್ಣೆದುರಿಗಿದ್ದಾಗ ಅದರ ಹೆಸರನ್ನು ಸರಿಯಾಗಿ ನಮೂದಿಸಬಹುದಿತ್ತಲ್ಲವೆ?

ಲೇಖಕರ ಹಾಗೂ ಪುಸ್ತಕಗಳ ಹೆಸರಿನಲ್ಲಿ ಕಂಡುಬಂದ ಇವೆಲ್ಲ ಪ್ರಮಾದಗಳ ಮುಂದೆ, ಐರೋಪ್ಯಾ, ಜನಪ್ರೀಯ, ಠೀಕಿಸು, ಆರ್ಶೀಯ ಮುಂತಾದ ಅಕ್ಷರಿಕೆಯ ತಪ್ಪುಗಳು ಮೇಲಿಂದ ಮೇಲೆ ಕಂಡುಬಂದರೂ, ಅವು ಮಹತ್ವದವಲ್ಲವೆನಿಸುತ್ತವೆ.

ಹೆಸರುಗಳ ಹಿಂದೆ ಹಚ್ಚುವ ರೆವ್ಹರೆಂಡ್, ಡಾಕ್ಟರ್ ಮುಂತಾದ ಗೌರವ ಸೂಚಕ ಪದಗಳ ಕಡೆಗೂ ಮುತ್ತಣ್ಣನವರು ಗಮನವಿತ್ತಿಲ್ಲ. ಬಳ್ಳಾರಿಯಲ್ಲಿ

ಮಿಶನ್ ಕೇಂದ್ರವನ್ನು ತೆರೆದು ಕನ್ನಡದ ಆದ್ಯ ಮಿಶನರಿಯೆನಿಸಿದ್ದ ಜಾನ್ ಹ್ಯಾಂಡ್ಸ್ ಡಾಕ್ಟರೇಟ್ ಪದವಿಯನ್ನೇನೂ ಪಡೆದಿರಲಿಲ್ಲ. ಟಿ. ಜಿ. ಮಾಬೆನ್ ಎಂಬ ದೇಶೀ ಕ್ರಿಸ್ತೀಯನು ಹೈಸ್ಕೂಲಿನಲ್ಲಿ ಶಿಕ್ಷಕನಿದ್ದನು. ಆದಕಾರಣ ಅವನನ್ನು ರೆವರೆಂಡ್ ಟಿ. ಜಿ. ಮಾಬೆನ್ ಎಂದು ಕರೆದುದು ತಪ್ಪೆನಿಸುತ್ತದೆ. ಕಿಟೆಲ್ ಹೆಸರಿನ ವಿಷಯದಲ್ಲಂತೂ ಅಪರಾಧವೇ ಆಗಿದೆ. ಮುತ್ತಣ್ಣನವರಿಗೆ ಕನ್ನಡ ಸಾಹಿತ್ಯದಲ್ಲಿ ಅಭಿರುಚಿ ಹುಟ್ಟಿಸಲು ಮತ್ತು ಪ್ರಸ್ತುತ ಗ್ರಂಥವನ್ನು ರಚಿಸಲು ಪ್ರೇರಣೆಯಿತ್ತ ಕಿಟೆಲ್‌ನ ಹೆಸರು ಬಂದಲ್ಲೆಲ್ಲ ಅವನನ್ನು ಫರ್ನಾಂಡಿಸ್ ಕಿಟೆಲ್ ಎಂದು ಕರೆಯಲಾಗಿದೆ. ಅವನ ಕನ್ನಡ ಕೋಶವನ್ನು ಮೊದಲುಗೊಂಡು, ಇನ್ನು ಹಲವು ಕೃತಿಗಳ ಮುಖಪುಟದಲ್ಲಿ ಫರ್ಡಿನಾಂಡ್ ಎಂಬುದು ಉಕ್ತವಾಗಿಯೇ ಇದ್ದರೂ ಮುತ್ತಣ್ಣನವರು ಗಮನಿಸಲಿಲ್ಲವೇಕೆ? ಅಲ್ಲದೆ, ಫರ್ನಾಂಡಿಸ್ ಎಂಬುದು ಕ್ರಿಶ್ಚಿಯನ್ನರಲ್ಲಿ ಅಡ್ಡಹೆಸರಾಗಿ ಬರುವುದೇ ಹೆಚ್ಚು.

## ಅಂತರಂಗ

ಇದುವರೆಗೆ ಪುಸ್ತಕದ ಬಾಹ್ಯಸ್ವರೂಪವನ್ನು ಪರಾಮರ್ಶಿಸಲಾಯಿತು. ಇನ್ನೀಗ, ಆದರಲ್ಲಿ ಬಂದ ವಿವಿಧ ವಿಷಯಗಳ ಸತ್ಯಾಸತ್ಯತೆಯನ್ನು ಪರಿಶೀಲಿಸೋಣ. 'ಗ್ರಂಥಕರ್ತ' ಎಂಬುದರಲ್ಲಿ ಹಲವಾರು ಬಗೆಗಳಿವೆ. ಮೂಲ ಲೇಖಕ, ಅನುವಾದಕ, ಸಂಪಾದಕ, ಸಂಕಲನಕಾರ, ಪರಿವರ್ತನಕಾರ, ಪರಿಷ್ಕರಿಸಿದವ—ಇತ್ಯಾದಿ. ಮುತ್ತಣ್ಣನವರು ಈ ಸಾಮಾನ್ಯ ಭೇದಗಳನ್ನು ಗಮನಿಸಿಯೇ ಇಲ್ಲ. ನಮಗೆ ನಿಶ್ಚಿತವಾಗಿ ಗೊತ್ತಿರುವ ಇಂಥ ಕೆಲವು ತಪ್ಪುಗಳನ್ನು ಇಲ್ಲಿ ಕೊಡುತ್ತಿದ್ದೇವೆ.

ಬಿ. ಎಲ್. ರೈಸನು ೧೮೪೫ರಲ್ಲಿ 'ಪರಂಜ್ಯೋತಿಯೂ ಕೃಪೆಯೂ' ಎಂಬುದನ್ನು ಕನ್ನಡಕ್ಕೆ ಅನುವಾದಿಸಿದನಂತೆ (ಪು. ೪೮೦). ಆದರೆ ರೈಸ್ ಅದನ್ನು ಪರಿಶೋಧಿಸಿ ಪ್ರಕಟಿಸಿದ್ದಾನೆ. "ಬೊಂಬಾಯಿ ಆಧಿಪತ್ಯದ ವಿದ್ಯಾ ಇಲಾಖೆಯಲ್ಲಿದ್ದ John Mc Cullock ಇವನು ಹಲವು ಕನ್ನಡ ಮತ್ತು ಭೂಗೋಳಶಾಸ್ತ್ರ ಪಠ್ಯಪುಸ್ತಕಗಳನ್ನು ಬರೆದನು" ಎಂದು ಪುಟ ೪೩೪ರಲ್ಲಿ ಉಕ್ತವಾಗಿದೆ. ಅವನು ಬರೆದದ್ದು ಕೇವಲ ಇಂಗ್ಲಿಷ್‌ನಲ್ಲಿ. ಆ ಕೃತಿಗಳನ್ನು ದೇಶಭಾಷೆಗಳಿಗೆ ಸೂಕ್ತವಾದ ರೀತಿಯಲ್ಲಿ ಸಂಗ್ರಹಿಸಿ ಮರಾಠೀ ಗುಜರಾತೀ ಮತ್ತು ಕನ್ನಡ ಭಾಷೆಗಳಲ್ಲಿ ಅನುವಾದಿಸಿ ಪ್ರಕಟಿಸಲಾಯಿತಲ್ಲದೆ ಅವನೇ ಕನ್ನಡದಲ್ಲಿ ಬರೆಯಲಿಲ್ಲ. "ಕ್ರಿ.ಶ. ೧೮೫೭ರಲ್ಲಿ J. G. Duff ಇವನು ಭೂಗೋಳಶಾಸ್ತ್ರದ ಪಠ್ಯಪುಸ್ತಕಗಳನ್ನು ಮರಾಠೀ ಮತ್ತು ಕನ್ನಡದಲ್ಲಿ ಸಂಭಾಷಣೆಯ ರೂಪದಲ್ಲಿ ಬರೆದದ್ದು, ಉತ್ತರ ಕರ್ನಾಟಕದ ಶಾಲೆಗಳಲ್ಲಿ ಬಳಸಲಾಗಿತ್ತು. ೧೮೬೮ರಲ್ಲಿ D. A. Esdaile ಇವನು ಮಹಾರಾಷ್ಟ್ರದ ಭೂಗೋಳ ಮತ್ತು ಚರಿತ್ರೆಯನ್ನು ಕನ್ನಡದಲ್ಲಿ ಬರೆದಿದ್ದು, ೧೦೪ ಪುಟ

ಗಳಲ್ಲಿ ಸಂಭಾಷಣೆಯ ರೂಪದಲ್ಲಿ ಬೆಂಗಳೂರು ವೆಸ್ಲೀ ಮುದ್ರಣಾಲಯದಿಂದ ಪ್ರಕಟವಾಯಿತು" ಎಂಬುದು ಮುತ್ತಣ್ಣನವರ ಒಕ್ಕಣಿಕೆಯಾಗಿದೆ. ನಿಜಸಂಗತಿಯೆಂದರೆ ಜೇಮ್ಸ್ ಡಫ್ ಎಂಬುವನು ಮರಾಟರ ಇತಿಹಾಸವನ್ನು ವಿಶದವಾಗಿ ರಚಿಸಿದ್ದು ಅದನ್ನು ಎಸ್‌ಡೇಲ್ ಸಂಗ್ರಹಿಸಿದನು. ಮೂಲದ ಆ ಇಂಗ್ಲಿಷ್ ಸಂಗ್ರಹವನ್ನು ಅನುವಾದಿಸಲಾಯಿತು. ಅನುವಾದಕನ ಹೆಸರು ಹೇಳಿಲ್ಲ. ಬ್ರಿ. ಮ್ಯೂ. ಕನ್ನಡ ಪುಸ್ತಕಗಳ ಪಟ್ಟಿಯಲ್ಲಿ ಅದರ ದಾಖಲೆ ಇಂತಿದೆ :

Esdaile (D.A.). Catechism of the Geography and History of Maharashtra. ಮಹಾರಾಷ್ಟ್ರ ವರ್ಣನೆ ಚರಿತ್ರೆಗಳ ಪ್ರಶ್ನೋತ್ತರಗಳು [Translated from Esdaile's epitome of J. G. Duff's History of the Mahrattas] pp. 104. Wesleyan Mission Press, Bangalore, 1857.

ಮುತ್ತಣ್ಣನವರು ಆ ಪುಸ್ತಕ ಅಥವಾ ಈ ಸೂಚಿಯಲ್ಲಿ ಬಂದ ದಾಖಲೆ—ಇವನ್ನು ಪರಿಶೀಲಿಸಿಯೂ ಅಂಥ ತಪ್ಪನ್ನು ಮಾಡಬಾರದಿತ್ತು.

ಈ ವಿಷಯದಲ್ಲಿಯ ಇನ್ನೊಂದು ಪ್ರಮಾದವೆಂದರೆ, ಬಿ. ಮಲ್ಲಪ್ಪನು ಬಾಣನ ಕಾದಂಬರಿಯನ್ನು ೮೧೭ ಪುಟಗಳಲ್ಲಿ ಭಾಷಾಂತರಿಸಿ ಪ್ರಕಟಿಸಿದನೆಂದು ಹೇಳಿದುದು. (ಪು. ೩೮೩). ಬಿ. ಮಲ್ಲಪ್ಪನವರು ನಾಗವರ್ಮನ ಚಂಪೂ ಗ್ರಂಥವಾದ ಕನ್ನಡ ಕಾದಂಬರಿಯನ್ನು ಸಂಪಾದಿಸಿದರೆಂಬುದು, ಬಹುಜನ ಸಾಹಿತ್ಯಿಕರು ತಿಳಿದಿದ್ದ ಸಂಗತಿಯೇ ಆಗಿದೆ. ಅದರಂತೆ ಮುದ್ರಾಮಂಜೂಷದ ವಿಷಯ (ಪು. ೪೬೪). ಮುತ್ತಣ್ಣನವರ ಪ್ರಕಾರ, ಜೆ. ಸ್ಟೀಫನ್ಸನ್‌ನು ಮುದ್ರಾಮಂಜೂಷವೆಂಬ ಸಂಸ್ಕೃತ ಕೃತಿಯನ್ನು ಭಾಷಾಂತರಿಸಿದುದರ ಫಲಶ್ರುತಿಯದು ! ಅಲ್ಲಿ ಕೆಂಪುನಾರಾಯಣನ ಪ್ರಸ್ತಾಪವೇ ಇಲ್ಲ.

ಲೇಖಕರ ಹಾಗೂ ಕೃತಿಗಳ ವರ್ಷವನ್ನು ಉಲ್ಲೇಖಿಸುವಲ್ಲಿ ನೂರಾರು ತಪ್ಪುಗಳಾಗಿವೆ. ಪ್ರತಿ ಪುಟದಲ್ಲಿಯೂ ಕೃತಿರಚನೆಯ ಇಲ್ಲವೆ ಲೇಖಕನಿಗೆ ಸಂಬಂಧಿಸಿದ ವರ್ಷ ಇದ್ದೇ ಇದೆ. ಆ ದಿಶೆಯಲ್ಲಿ ಹೀಗೆ ಅಗಣಿತ ತಪ್ಪುಗಳಾಗಿರುವಾಗ, ಸರಿಯಿರಬಹುದಾದವುಗಳ ವಿಷಯದಲ್ಲಿಯೂ ಸಾಶಂಕರಾಗುತ್ತೇವೆ. ಕೆಲವನ್ನು ಮಾತ್ರ ಇಲ್ಲಿ ಕಾಣಿಸಲಾಗಿದೆ.

"ಕ್ರಿ.ಶ. ೧೬ನೇ ಶತಮಾನಾಂತ್ಯದಲ್ಲಿ ಬ್ರಿಟಿಶರು ಮುದ್ರಾಯಂತ್ರವನ್ನು ತಂದು ಕಲ್ಕತ್ತದಲ್ಲಿ ಇಟ್ಟರು. ಅನಂತರ ಐವತ್ತು ವರ್ಷಗಳಲ್ಲಿ ಬೊಂಬಾಯಿ ಮತ್ತು ಮದ್ರಾಸಗಳಲ್ಲೂ ಅವು ಇಡಲ್ಪಟ್ಟವು." (ಪು. ೨೪೬).

ಇದು ಸರ್ವಥಾ ಸರಿಯಲ್ಲ. ೧೬ನೇ ಶತಮಾನದಲ್ಲಿ ಬ್ರಿಟಿಷರ ಪ್ರಭಾವ ಇಲ್ಲವೆ ಆಡಳಿತವೆಂಬುದು ಇದ್ದಿತೆಲ್ಲಿ ? ಅವರು ಮುದ್ರಾಯಂತ್ರವನ್ನು ತಂದುದು ೧೮ನೇ ಶತಮಾನದ ಕೊನೆಯಲ್ಲಿ. ಕ್ರಿ.ಶ. ೧೭೭೮ರಲ್ಲಿ ಮೊದಲ ಪುಸ್ತಕ ಅವರಿಂದ ಹೊರ

ಬಂದಿತು. ಇನ್ನು ಮೊತ್ತ ಮೊದಲಿನ ಕನ್ನಡ ಮೊಳೆಗಳ ತಯಾರಿಕೆಯ ವಿಷಯದಲ್ಲಿ ಗಿಲ್‌ಕ್ರಿಸ್ಟ್ ಎಂಬವನ ಪ್ರಸ್ತಾಪ ಬಂದಿದೆ. (ಪು. ೨೬೬). ಆ ಕಾರ್ಯವನ್ನು ಮೊದಲಿಗೆ ಕೈಕೊಂಡವನು ವಿಲಿಯಮ್ ಕೇರಿ. ಕನ್ನಡ ಮುದ್ರಣ ವಿಚಾರವಾಗಿ ಈ ಪುಸ್ತಕದಲ್ಲಿ ಇನ್ನೂ ಹಲವು 'ಅಘಟಿತ' ಘಟನೆಗಳಿವೆ. ೧೮೧೫ರಲ್ಲಿ ಹಳೆ ಮೈಸೂರ ಸರಕಾರವು ಬೆಂಗಳೂರಲ್ಲಿ ಸರಕಾರೀ ಮುದ್ರಣಾಲಯವೊಂದನ್ನು ಸ್ಥಾಪಿಸಿ ಕನ್ನಡ ಮತ್ತು ಇಂಗ್ಲಿಷ್ ಮುದ್ರಣ ಕೆಲಸ ನಡೆಸತೊಡಗಿತಂತೆ (ಪು. ೨೬೬). ಆದರೆ ಅದರ ಪ್ರಥಮ ವರ್ಷ ೧೮೪೧-೪೨ ಎಂಬುದು, ಮೈಸೂರ ಗಜೆಟಿಯರ್ (ರೈಸ್ ಸಂಪಾದಿತ) ಮತ್ತು ಕನ್ನಡದ ಆದ್ಯಪತ್ರಿಕೆ 'ಮಂಗಳೂರ ಸಮಾಚಾರ' (೧೮೪೩) ಇವುಗಳಲ್ಲಿ ಸ್ಪಷ್ಟವಾಗಿ ಉಲ್ಲೇಖಗೊಂಡಿದೆ- ಅದರಂತೆ ಬಾಸೆಲ್ ಮಿಶನ್ ಪ್ರೆಸ್ ೧೮೩೪ರಲ್ಲಿ ಸ್ಥಾಪನೆಯಾಯಿತೆಂದು ತಪ್ಪಾಗಿ ಹೇಳಲಾಗಿದೆ. ಅದರ ಸರಿಯಾದ ವರ್ಷ ೧೮೪೧.

ಜಿ. ಎ. ವರ್ಥ್ 'ಪ್ರಾಕ್ಕಾವ್ಯ ಮಾಲಿಕೆ'ಯನ್ನು ಸಂಪಾದಿಸಿದ್ದು ಅದೊಂದು ಮಹತ್ವಪೂರ್ಣ ಕಾವ್ಯ ಸಂಕಲನವೆನಿಸಿದೆ. ಅದರ ಸಂಪಾದನ ಕಾರ್ಯವು ೧೮೬೦ರ ಸುಮಾರಿಗೆ ಮುಗಿಯಿತು. ಅಸ್ವಾಸ್ಥ್ಯದ ಮೂಲಕ ವರ್ಥ್ ಸ್ವದೇಶಕ್ಕೆ ಹಿಂತಿರುಗಿದನಾದ್ದರಿಂದ ಗ್ಯಾರೆಟ್ ಅದನ್ನು ಬೆಂಗಳೂರಲ್ಲಿಯ ಸರಕಾರೀ ಮುದ್ರಣಾಲಯದಲ್ಲಿ ಅಚ್ಚುಹಾಕಿಸಿದನು. (ಪುಟಗಳು ೫೭೭). ಅದು ಮರು ಮುದ್ರಣವನ್ನು ಕಾಣಲೆ ಇಲ್ಲ. ಈ ಕುರಿತು ಮುತ್ತಣ್ಣನವರ ಹೇಳಿಕೆ ಮಾತ್ರ ಬೇರೆಯೇ ಆಗಿದೆ:

"G. A. Wurth ಇವನ ಕಾವ್ಯಮಾಲಿಕೆಯು ೧೮೬೫ರಿಂದಲೇ ಶಾಲೆಗಳಲ್ಲಿ ಪಠ್ಯಪುಸ್ತಕವಾಗಿಯೂ ಉಪಯೋಗಿಸಲ್ಪಟ್ಟಿತು. ೧೮೭೫ರಲ್ಲಿ ಇದರ ಎರಡನೇ ಮುದ್ರಣವಾದಾಗ ಅದು ೫೭೭ ಪುಟಗಳ ಗ್ರಂಥವಾಯಿತು." (ಪು. ೪೬೦).

ಕಳೆದ ಶತಮಾನದಲ್ಲಿದ್ದ ಪಾಶ್ಚಾತ್ಯ ಲೇಖಕರಲ್ಲಿ ಮೊದಲಿಗೆ ಬಂದವರಾರು, ಅನಂತರದವರು ಯಾರು ಎಂಬುದರ ಸರಿಯಾದ ತಿಳಿವಳಿಕೆಯಿಲ್ಲದ್ದರಿಂದ, ತಾಳಮೇಳವಿಲ್ಲದ ಕೆಲವು ಅಭಿಪ್ರಾಯಗಳು ವ್ಯಕ್ತವಾಗಿವೆ. ಬಳ್ಳಾರಿಯ ಮಿಶನ್ ಕೇಂದ್ರದಲ್ಲಿ, ಮೊದಲಿಗೆ ಬಂದವ ರೀವ್ (೧೮೧೯-೧೮೩೪), ಅನಂತರ ಬಂದವನು ರೀಡ್ (೧೮೩೦-೧೮೪೧). (ಆಧಾರ: Memoirs of John Reid ಎಂಬ ಕೃತಿ). ಅವರಿಬ್ಬರಿಗೆ ಸಂಬಂಧಿಸಿದ ಮುತ್ತಣ್ಣನವರ ಹೇಳಿಕೆ ಇಂತಿದೆ:

"ಜಾನ್ ರೀಡ್ ಇವನು ಇಂಗ್ಲಿಷ್‌ನಲ್ಲಿ ಬರೆದಿದ್ದ Old Testament ಇದನ್ನೇ William Reeve ಇವನು ೧೮೩೦ರ ಅನಂತರ "ಮೋಸೆಯ ಮೊದಲನೇ ಕಾಂಡವು" ಎಂದು ಕನ್ನಡದಲ್ಲಿ ಬರೆದನೆಂಬುದನ್ನೂ ಇಲ್ಲಿ ಗಮನಿಸಬೇಕಾಗಿದೆ" (ಪು. ೨೭೪).

ಬೈಬಲಿನ ಆದಿಕಾಂಡವೆನಿಸಿದ Old Testamentನ್ನು ಇಂಗ್ಲಿಷ್‌ಗೆ ಅನುವಾದಿಸಿ ನೂರಾರು ವರ್ಷಗಳು ಸಂದಿದ್ದು, ೧೬ನೇ ಶತಮಾನದಿಂದ King

James Version ಎಂಬ ಹೆಸರಿನಿಂದ ಇಂಗ್ಲಿಷ್ ಬೈಬಲಿನ ಅಧಿಕೃತ ಆವೃತ್ತಿಯು ಇಂಗ್ಲಿಷ್ ಜನರಲ್ಲಿ ಸಾರ್ವತ್ರಿಕವಾಗಿ ಬಳಕೆಯಲ್ಲಿದ್ದಿತು. ಅದನ್ನು ಜಾನ್‌ರೀಡ್ ಇಂಗ್ಲಿಷ್‌ನಲ್ಲಿ ಬರೆದದ್ದೇಕೆ—ಎಂದು ಕೇಳಕೂಡದು!

ಮುಂದುವರಿದು, "ರೀಡ್‌ನಿಂದ ರಚಿತವಾದ ಕನ್ನಡ ಬೈಬಲ್ ಹೊತ್ತಗೆಗಳು ಹಲವು ಇವೆ" ಎನ್ನುತ್ತಾರೆ (ಪು. ೨೭೪). ಬೈಬಲ್ ಇರುವುದು ಒಂದೇ! ಇಂಥ ಹೇಳಿಕೆಯನ್ನು ಇನ್ನೂ ಅನೇಕರಿಗೆ ಅನ್ವಯಿಸಿ ಮಾಡಿದ್ದಾಗಿದೆ. ಈ ಪ್ರಮಾದದ ಹಿನ್ನಲೆಯೆಂದರೆ, ಬೈಬಲ್ ಅನುವಾದ ರಚನೆ ಹಾಗೂ ಒಟ್ಟಿನ ಕ್ರೈಸ್ತ ಮತೀಯ ಸಾಹಿತ್ಯ ನಿರ್ಮಿತಿ— ಇವುಗಳ ಸ್ಪಷ್ಟಕಲ್ಪನೆ ಇಲ್ಲದುದು. ಕ್ರೈಸ್ತಸಾಹಿತ್ಯ ಪುಸ್ತಕಗಳ ಪ್ರಸ್ತಾಪ ಬರುವಲ್ಲೆಲ್ಲ ಬೈಬಲ್ ಹೊತ್ತಗೆಗಳು ಎಂದು ಕರೆದುದು ವಿಚಿತ್ರವಾಗಿ ಕಾಣುತ್ತದೆ. ಇನ್ನೊಂದೆಡೆ "Dr. Moegling ಇವನೂ ತನ್ನ ಸಮಕಾಲೀನ ಕ್ರೈಸ್ತ ವಿದ್ವಾಂಸರ ಆದರ್ಶಕ್ಕನುಗುಣವಾಗಿ ಕನ್ನಡದಲ್ಲಿ ಸಂಪೂರ್ಣ ಬೈಬಲನ್ನು ಬರೆದು ಕನ್ನಡ ಬೈಬಲ್ ಸಾಹಿತ್ಯ ವೃಕ್ಷಕ್ಕೆ ಮತ್ತೊಂದು ಕೊನರನ್ನು ಸೇರಿಸಿದನು" ಎಂದು ಉದ್ಗಾರವೆತ್ತಿದ್ದಾರೆ. (ಪು. ೨೮೨). ಸಮಗ್ರ ಬೈಬಲನ್ನು ಕನ್ನಡದಲ್ಲಿ ಏಕಮೇವವಾಗಿ ಅನುವಾದಿಸಿದ ಯಾರೊಬ್ಬ ಮಿಷನರಿಯೂ ಹುಟ್ಟಲಿಲ್ಲ.

ಕಾಲಮಾನದಲ್ಲಿ ಹೆಚ್ಚು ಕಡಿಮೆಯಾದುದಕ್ಕೆ ಇನ್ನೊಂದು ಮಾದರಿ. "ಡೆಪ್ಯುಟಿ ಚೆನ್ನಬಸಪ್ಪನನ್ನು ತನ್ನ ಸ್ಥಾನದಲ್ಲಿ ಮೇಲಕ್ಕೆ ಏರಿಸಿ ಪ್ರೋತ್ಸಾಹಿಸಲು ಕಾರಣನಾದವನು ಈ Rev. F. Zeigler." (ಪು. ೩೨೫). ಝಿಗ್ಲರಿನಿಗಿಂತ ಚನ್ನಬಸಪ್ಪನು ಹಿರಿಯನು. ಝಿಗ್ಲರ್ ಧಾರವಾಡಕ್ಕೆ ಬರುವುದಕ್ಕೆ ೩-೪ ವರ್ಷ ಮುಂಚೆಯೇ ಚೆನ್ನಬಸಪ್ಪನು ಡೆಪ್ಯುಟಿ ಎಜ್ಯುಕೇಶನಲ್ ಇನಸ್ಪೆಕ್ಟರ್ ಹುದ್ದೆಯನ್ನು ಸ್ವೀಕರಿಸಿದ್ದನು. ಈ ಬಗೆಯ ತಪ್ಪು ಅಭಿಮತಗಳಿಗೆ ಮಕುಟಪ್ರಾಯವಾಗಿರುವ ಈ ಹೇಳಿಕೆಯನ್ನು ಗಮನಿಸಬೇಕು:

"ಕಾಲ್ಡವೆಲ್‌ನಿಗೆ ಬೇರೆ ಬೇರೆ ಭಾಷೆಗಳ ಪರಿಚಯವನ್ನು ಮಾಡಿಕೊಟ್ಟು ಅವನ ಗ್ರಂಥಕ್ಕೆ ಶಬ್ದಸಂಪತ್ತನ್ನು ಒದಗಿಸಿದವರಲ್ಲಿ Dr. F. Kittel ಇವನೂ ಒಬ್ಬನು" (ಪು. ೫೭೦).

ಮುತ್ತಣ್ಣನವರು ಅನೇಕ ಪುಸ್ತಕಗಳನ್ನು ಪರಿಶೀಲಿಸಲಾಗದೆ ಬಾರ್ನೆಟ್‌ನಂತಹರು ಸಿದ್ಧಪಡಿಸಿದ ಸೂಚಿಗಳಿಂದ, ಅಂದಾಜಿನ ಮೇಲೆ ಆ ಪುಸ್ತಕವನ್ನು ಬಣ್ಣಿಸಹೋಗಿದ್ದಾರೆ. ಹಾಗೆ ಮಾಡುವಾಗ ಅನೇಕ ಕಡೆಗೆ ಹಾಸ್ಯಾಸ್ಪದವೆನಿಸುವಂತಹ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

"'ವಿಲಿಯಮೆಂಬವನ ಚರಿತ್ರೆ' ಎಂಬ ೬೯ ಪುಟಗಳ ಪುಸ್ತಕವು ಇಂಗ್ಲೆಂಡಿನ ರಾಜ ಮೊದಲನೇ ವಿಲಿಯಮನನ್ನು ಕುರಿತು ಬರೆದದ್ದು, ಚರಿತ್ರ ಪಾಠಕ್ಕೆ ಉಪಯೋಗಿಸಲ್ಪಟ್ಟಿತು" (ಪುಟ. ೪೧೨). ವಿಲಿಯಮ್ ಎಂಬ ಹೆಸರನ್ನು ನೋಡಿ, ಮುತ್ತಣ್ಣನವರು ತಮ್ಮ ಊಹನೆಯ ಕುದುರೆಯನ್ನು ಬಹುದೂರ ಓಡಿಸಿದರು.

ಆದರೆ ಆ ಪುಸ್ತಕವು 'ಚಿಕ್ಕ ವಿಲಿಯಮ್' ಎಂಬುದಾಗಿ ಬೈಬಲಿನಲ್ಲಿ ಬರುವ ಕತೆಯಾಗಿದೆ. ಅಂತೆಯೇ ಬಾರ್ನೆಟ್ ಅದನ್ನು ಕ್ರಿಶ್ಚಿಯನ್ ಸಾಹಿತ್ಯದಲ್ಲಿ ಕಾಣಿಸಿದ್ದಾನೆ. ಮುಂದೆ ೪೮೯ನೆಯ ಪುಟವೊಂದರಲ್ಲಿಯೇ ಈ ತೆರನಾದ ಮೂರು ಅಸತ್ಯವಾದ ವಿವರಗಳಿವೆ. ಸ್ಯಾಮುಯೆಲ್ ಅಬ್ಬೆಜನು Bazar Book ಎಂಬ ಸ್ವಮತೀಯ ಗ್ರಂಥವನ್ನು ಅನುವಾದಿಸಿದನು. Bazar ಎಂದು ಬಂದಿದೆಯೆಂದ ಮೇಲೆ ಅದು 'ಸಂತೆ ಲೆಕ್ಕಗಳ ವ್ಯವಹಾರಗಳನ್ನು ತಿಳಿಸುವ' ಪುಸ್ತಕವೇ ಇರಬೇಕೆಂದು ಮುತ್ತಣ್ಣನವರು ತರ್ಕಿಸಿದರು. ಆದರಂತೆ 'Practical advice against a far spread disease' ಮತ್ತು ಫಲಾಹಾರ ಅಥವಾ ಲಕ್ಷ್ಯಕ್ಕೆ ತಕ್ಕವಾದ್ದು' ಎಂಬ ಶೀರ್ಷಿಕೆಗಳನ್ನು ಕಂಡು ಅವು ವೈದ್ಯಕೀಯ ಇಲ್ಲವೆ ಆರೋಗ್ಯಶಾಸ್ತ್ರಕ್ಕೆ ಸಂಬಂಧಿಸಿದ ಪುಸ್ತಕಗಳೇ ಆಗಿರಬೇಕೆಂದು ನಿರ್ಧರಿಸಲಾಯಿತು. ಆದರೆ ಅವು ಕೂಡ ಕ್ರೈಸ್ತಮತೀಯ ಪುಸ್ತಕಗಳೇ ಆಗಿವೆ.

'ಕರ್ನಾಟಕ ವಾಗ್ವಿಧಾಯಿನಿ' ಎಂಬ ಸಾಹಿತ್ಯಿಕ ಪತ್ರಿಕೆಯೊಂದು ಕಳೆದ ಶತಮಾನದಲ್ಲಿ ಹಳೆಯ ಮೈಸೂರಿನ ಪ್ರದೇಶದಿಂದ ಹೊರಡುತ್ತಿದ್ದಿತಂತೆ. ಅದರ ಉಲ್ಲೇಖ ಮೇಲಿಂದ ಮೇಲೆ ಬರುತ್ತದಲ್ಲದೆ, ಮುತ್ತಣ್ಣನವರು ಮೊಗ್ಲಿಂಗ್ ಮುಂತಾದ ಪ್ರಮುಖ ಲೇಖಕರನ್ನು ಅದಕ್ಕೆ ತಳುಕುಹಾಕಿದ್ದಾರೆ. ಇಷ್ಟೊಂದು ಪ್ರಸಿದ್ಧವಾದ ಪತ್ರಿಕೆಯು ಹೆಸರನ್ನು ನಾವಂತೂ ಕೇಳಿಲ್ಲ. ಪತ್ರಿಕೋದ್ಯಮದ ಬಗ್ಗೆ ಮಹಾಪ್ರಬಂಧವನ್ನು ಬರೆದ ನಾಡಿಗ ಕೃಷ್ಣಮೂರ್ತಿಯವರಾಗಲೀ, ರಾ. ಯ. ಧಾರವಾಡಕರ ಮೊದಲಾದ ಪ್ರಭೃತಿಗಳಾಗಲೀ ಉಲ್ಲೇಖಿಸಿಲ್ಲ. ಮುತ್ತಣ್ಣನವ ರಾದರೂ ಪತ್ರಿಕೆಯ ಪ್ರಕಟನವರ್ಷ, ಮತ್ತಿತರ ವಿವರಗಳನ್ನು ಕೊಟ್ಟಿಲ್ಲ. ಆದ್ದರಿಂದ ಮುತ್ತಣ್ಣನವರೇ ಇದನ್ನು ಸೃಷ್ಟಿಸಿರಲು ಸಾಕು. ಕರ್ನಾಟಕ ವಾಗ್ವಿಧಾಯಿನಿ— ಎಂಬ ವ್ಯಾಕರಣ ಪುಸ್ತಕ ಮಾತ್ರ ಕಳೆದ ಶತಮಾನದಲ್ಲಿ ಪ್ರಕಟವಾಗಿದ್ದಿತೆಂಬುದನ್ನು ಇಲ್ಲಿ ಪ್ರಾಸಂಗಿಕವಾಗಿ ಹೇಳಬಹುದು. ಮೈಸೂರು ಸರಕಾರದಿಂದ ಸಿದ್ಧಗೊಂಡ ಈ ಪಠ್ಯಪುಸ್ತಕವು ಹಲವಾರು ಆವೃತ್ತಿಗಳನ್ನು ಕಂಡಿತು.

ಬೆಂಗಳೂರಿನ ಕೆಥೊಲಿಕ್ ಸಂಸ್ಥೆಯವರು ಪ್ರಕಟಿಸಿದ ಲ್ಯಾಟಿನ್-ಕನ್ನಡ ಕೋಶಗಳ ಬಗ್ಗೆ ಬರೆಯುತ್ತ ಮುತ್ತಣ್ಣನವರು "ಈ ಲ್ಯಾಟಿನ್-ಕನ್ನಡ ವ್ಯಾಕರಣ ಮತ್ತು ಛಂದಸ್ಸು ಪುಸ್ತಕಗಳು ೧೮೬೯ರಲ್ಲಿ ಎರಡನೇ ಬಾರಿಗೆ ಮುದ್ರಣವಾದುವು. ಇದನ್ನು ಈ ದೇಶದಲ್ಲಿ ಓದುವವರು ಯಾರು? ಆದರೆ ಅಂದಿನ ವಿದ್ವಾಂಸರು ಭಾರತೀಯ ಸಾಹಿತ್ಯವನ್ನು ಪಾಶ್ಚಾತ್ಯ ದೇಶಗಳಲ್ಲಿ ಪರಿಚಯಮಾಡಿಸುವ ಮಹತ್ತಾದ ಉದ್ದೇಶವನ್ನಿಟ್ಟು ಇಂಥಾ ಗ್ರಂಥಗಳನ್ನು ರಚಿಸಿದರೆಂಬುದನ್ನು ತಿಳಿಯ ಬೇಕಾಗಿದೆ" (ಪು. ೪೫೬).

ಈ ಪುಸ್ತಕಗಳನ್ನು ಮುತ್ತಣ್ಣನವರು ಸ್ವತಃ ನೋಡಿದ್ದಾರೆ ಮತ್ತು

ಅವತರಣಿಕೆಗಳನ್ನು ಕೊಟ್ಟಿದ್ದಾರೆ. ಹಾಗೆ ಮಾಡುವಾಗ ಕನ್ನಡ-ಲ್ಯಾಟಿನ್ ಕೋಶದ ಮುಖಪುಟದಲ್ಲಿ ಬಂದ 'Dictionarium Canarense Latinum ad usum Maissurensis Catholicii Seminarii' ಎಂಬ ಒಕ್ಕಣೆಯನ್ನು ನಮೂದಿಸಿದ್ದಾರೆ (ಪು. ೪೫೫). ಎಂದರೆ ಈ ಗ್ರಂಥವು ಬೆಂಗಳೂರಿನಲ್ಲಿ ಕೆಥೊಲಿಕ್ ಸೆಮಿನರಿಯಲ್ಲಿ ಅಭ್ಯಾಸಮಾಡುವ ಬೋಧಕರಿಗಾಗಿ ಇತ್ತೆಂಬುದು ಸ್ಪಷ್ಟವಾಗಿದೆ. ಅದರಂತೆ ಲ್ಯಾಟಿನ್-ವ್ಯಾಕರಣದ ಕನ್ನಡ ಪುಸ್ತಕವು ಶಾಲಾ ವಿದ್ಯಾರ್ಥಿಗಳಿಗಾಗಿಯೇ ಇತ್ತೆಂಬುದರ ಉಲ್ಲೇಖವೂ (ad usum scholanem) ಮುತ್ತಣ್ಣನವರ ಗಮನಕ್ಕೆ ಬಿದ್ದಿದೆ (ಪು. ೪೫೬). ಹಾಗಿದ್ದೂ ಭಾರತೀಯ ಸಾಹಿತ್ಯವನ್ನು ಪಾಶ್ಚಾತ್ಯರಿಗೆ ಪರಿಚಯಿಸಬೇಕೆನ್ನುವ 'ಮಹತ್ತಾದ' ಉದ್ದೇಶವನ್ನು ಕಂಡುದೇಕೊ?

ಇದೇ ಉದ್ದೇಶವನ್ನು ಮುತ್ತಣ್ಣನವರು ಬೆಂಜಮಿನ್ ಶುಲ್ಜ್‌ನಲ್ಲಿಯೂ ಪರ್ಯಾಯವಾಗಿ ಕಂಡಿದ್ದಾರೆ. ಅಡೆಲುಂಗ್ ಎಂಬ ಜರ್ಮನಿಗನು ಬೈಬಲ್ ವಾಣಿಯು ಜಗತ್ತಿನ ಸುಮಾರು ೫೦೦ ಭಾಷೆಗಳಲ್ಲಿ ಬಂದ ಬಗೆಯನ್ನು ನಿದರ್ಶಿಸುವುದಕ್ಕಾಗಿ ಬಹು ದೊಡ್ಡ ಸಂಕಲನವನ್ನು ೧೮೦೬ರಲ್ಲಿ ಹೊರತಂದನು. ಅದರಲ್ಲಿ ಪ್ರತಿಯೊಂದು ಭಾಷೆಯಲ್ಲಿಯ ಬೈಬಲ್ ವಾಣಿಯು ಒಂದು ಪುಟದಷ್ಟು ಅವತರಣಿಕೆ ಬಂದಿದ್ದು, ಕನ್ನಡ ಭಾಗವನ್ನು ಬೆಂಜಮಿನ್ ಶುಲ್ಜ್ ಎಂಬ ಡೇನಿಶ್ ಮಿಶನರಿ (ತಿರುವಾಂಕೂರಿನಲ್ಲಿದ್ದವ) ಬರೆದಿದ್ದಾನೆ. ಮುತ್ತಣ್ಣನವರು ಅದನ್ನು ಶ್ರೀ ಕೃಷ್ಣನ ಕುರಿತಾದ ಸ್ತೋತ್ರವೆಂದು ತಪ್ಪಾಗಿ ಹೇಳಿದ್ದಾರೆ.

ಮೊಗ್ಲಿಂಗ್ ದಾಸರ ಪದಗಳನ್ನು ಜರ್ಮನ್ ಭಾಷೆಗೆ ಅನುವಾದಿಸಿದನು. ಅವು ಸುಪ್ರಸಿದ್ಧ ZDMG ಪತ್ರಿಕೆಯ ೧೮೬೦ನೇ ಇಸವಿಯ ಸಂಪುಟದ ೫೦೨ರಿಂದ ೫೧೬ರ ವರೆಗಿನ ಪುಟಗಳಲ್ಲಿ, ಮುಂದೆ ೧೮೬೪ರ ಸಂಪುಟದ ೨೪೧–೨೬೧ರ ಪುಟಗಳಲ್ಲಿ ಪ್ರಕಟವಾದವು. ಈ ವಿಷಯವನ್ನು ಮುತ್ತಣ್ಣನವರು ಉಲ್ಲೇಖಿಸಿದ ಬಗೆಯೇ ಬೇರೆ: "೫೧೬ ಪುಟಗಳ ಈ ಪುಸ್ತಕವು ೧೮೬೪ರಲ್ಲಿ ಪುನರ್ಮುದ್ರಣಗೊಂಡಿತು." ಮೊಗ್ಲಿಂಗ್ ಜೈಮಿನಿ ಭಾರತದ ಕೆಲವು ಪದ್ಯಗಳನ್ನು ಸಹ ಜರ್ಮನ್ ಭಾಷೆಗೆ ಅನುವಾದಿಸಿ ಅದೇ ZDMGಯ ೨೪ನೇ ಸಂಪುಟದ ೩೦೯ರಿಂದ ೩೨೪ರ ವರೆಗಿನ ಪುಟಗಳಲ್ಲಿ, ಅದರ ಮೊದಲ ಕಂತನ್ನು ಹೊರತಂದನು. ಆದರೆ ಮುತ್ತಣ್ಣನವರಿಗೆ ಮಾತ್ರ ಅದು ೩೨೪ ಪುಟಗಳ ಪ್ರತ್ಯೇಕ ಗ್ರಂಥವೆ ಆಗಿ ಕಂಡಿತು.

"ಕ್ರಿ.ಶ. 1868ರಿಂದ 1871ರ ವರೆಗೆ ಮಂಗಳೂರಿನಲ್ಲಿ Casper stalz ಇವನು Periodical Publications ಎಂಬುದಾಗಿ ಇಂಗ್ಲಿಷ್‌ನಲ್ಲೂ ಕನ್ನಡದಲ್ಲೂ ವಾರ್ತಾ ಪತ್ರಿಕೆಗಳನ್ನು ನಡೆಸಿದನು" ಎಂಬೊಂದು ಹೇಳಿಕೆಯನ್ನು ಮುತ್ತಣ್ಣನವರು ಕೊಟ್ಟಿದ್ದಾರೆ (ಪು. ೪೪೪) ಇದರ ಹೊಲಬು ನಮಗೆ ಆಗಲಿಲ್ಲ. Periodical Publications—ಎಂದು ಯಾರೂ ಪತ್ರಿಕೆಗೆ ಹೆಸರಿಡುವುದಿಲ್ಲ.

ಮೇಲಾಗಿ Stolz (Stalz ಅಲ್ಲ) ಅಂಥ ಪ್ರಮುಖ ಮಿಶನರಿಯೇನಲ್ಲ. ಬಾರ್ನೆಟ್‌ನ ಸೂಚಿಯನ್ನು ಪರಿಶೀಲಿಸಿದಾಗ ಆ ತಪ್ಪಿನ ಗುಟ್ಟು ಹೊರಬಿದ್ದಿತು. Periodical Publications ಎಂಬ ಸಾಮಾನ್ಯ ಶೀರ್ಷಿಕೆಯ ಅಡಿಯಲ್ಲಿ ಬೆಂಗಳೂರು, ಬಳ್ಳಾರಿ, ಧಾರವಾಡ ಮುಂತಾದ ಊರುಗಳಲ್ಲಿ ಪತ್ರಿಕೆಗಳನ್ನು ಹೆಸರಿಸುತ್ತ, ಮಂಗಳೂರಿನ ಪತ್ರಿಕೆಗಳೆಂದು Illustrated Canerese Journal, ಮಂಗಳೂರ ಸಮಾಚಾರ, ನ್ಯಾಯಸಂಗ್ರಹ, ಸಭಾಪತ್ರ ಮುಂತಾದವುಗಳ ವಿವರಗಳನ್ನು ಕೊಟ್ಟಿದ್ದಾನೆ. ಸಭಾಪತ್ರದ ನಮೂದಿನಲ್ಲಿ ಅದರ ಸಂಪಾದಕರೆಂದು C. Stolz, J. J. Brigel ಮತ್ತು C. Vatsa ಇವರ ಹೆಸರೂ, ೧೮೬೮–೧೮೭೧ ಎಂಬ ವರ್ಷಗಳ ಉಲ್ಲೇಖವೂ ಕಂಡುಬಂದಿತು. ಮುತ್ತಣ್ಣನವರು ಆಧಾರಗ್ರಂಥಗಳಿಂದ ಟಿಪ್ಪಣಿ ಬರೆದುಕೊಂಡ ರೀತಿಯಿದು.

ವಿವಿಧ ಗ್ರಂಥಗಳನ್ನು ಮುತ್ತಣ್ಣನವರು ಯಾವ ರೀತಿಯಾಗಿ ಪ್ರಸ್ತಾಪಿಸಿದ್ದಾರೆಂಬುದನ್ನು ಇದುವರೆಗೆ ನೋಡಿದೆವು. ಇನ್ನೀಗ ಲೇಖಕರ ಸಾಹಿತ್ಯಿಕ ಪರಿಚಯದ ಸ್ವರೂಪವೆಂತೆಂಬುದನ್ನು ನೋಡೋಣ. ಈ ಗ್ರಂಥದಲ್ಲಿ ಬಂದಿರುವ ಮಿಶನರಿ ಅಧಿಕಾರಿಗಳೆಲ್ಲಾ ಬಹುಭಾಷಾ ಪಂಡಿತರೆಂಬ ಮಾತು ಕಡ್ಡಾಯವಾಗಿ ಬರುತ್ತದೆ.

ಹ್ಯಾಂಡ್ಸ್: "ಇವನು ಈ ದೇಶಕ್ಕೆ ಬಂದಕೂಡಲೇ ತಮಿಳು, ತೆಲುಗು, ಸಂಸ್ಕೃತ, ಪರ್ಷಿಯನ್ ಇತ್ಯಾದಿ ಭಾಷೆಗಳಲ್ಲಿ ಕುಶಲತೆಯನ್ನು ಪಡೆದನು.... ಕನ್ನಡ ಭಾಷೆಯಲ್ಲಿ ಅಸಾಮಾನ್ಯ ಪ್ರೌಢಿಮೆಯನ್ನು ಗಳಿಸಿದನು" (ಪು. ೨೬೮).

ರೈಸ್: "ಬಂದ ಒಂದೆರಡು ವರ್ಷಗಳಲ್ಲಿಯೇ ತಮಿಳು, ಕನ್ನಡ, ತೆಲುಗು ಭಾಷೆಗಳನ್ನು ಅನಂತರ ಸಂಸ್ಕೃತ, ಪರ್ಷಿಯನ್, ಲ್ಯಾಟಿನ್ ಮತ್ತು ತನ್ನ ಸ್ವಭಾಷೆಯಾದ ಜರ್ಮನ್ ಭಾಷೆಯನ್ನೂ ಚೆನ್ನಾಗಿ ಕಲಿತು ಸಾಕಷ್ಟು ಪಾಂಡಿತ್ಯವನ್ನು ಸಂಪಾದಿಸಿದನು" (ಪು. ೩೨೧).

ಕಿಟೆಲ್: "ಇಲ್ಲಿಗೆ ಬಂದಕೂಡಲೇ ಅವನು ಸಂಸ್ಕೃತ, ಕನ್ನಡ, ತಮಿಳು, ತುಳು, ಕೊಂಕಣಿ, ಮರಾಠಿ ಮತ್ತು ಪರ್ಷಿಯನ್ ಭಾಷೆಗಳನ್ನು ಕಲಿತನು, ಮಾತ್ರವಲ್ಲದೆ ಇವುಗಳಲ್ಲೆಲ್ಲಾ ಏಕಸಮಾನವಾದ ಪಾಂಡಿತ್ಯವನ್ನು ಸಂಪಾದಿಸಿದನು" (ಪು. ೩೨೮).

ಹೀಗೆ ಇಲ್ಲಿಗೆ ಬಂದ ಮಿಶನರಿಗಳೆಲ್ಲ ನಿಸ್ಸಂಶಯವಾಗಿ ಭಾಷಾಕೋವಿದರೆಂದು ಮುತ್ತಣ್ಣನವರು ಗ್ರಹಿಸಿ, ಅವರ ಕೊರಳಿಗೆ ೪-೫ ದೇಶೀಯ ಭಾಷೆಗಳನ್ನು ಕಟ್ಟಿದುದು ಕಂಡುಬರುತ್ತದೆ. ಇನ್ನೊಂದು ಕಡೆಯಲ್ಲಂತೂ "ಜರ್ಮನ್ ಭಾಷೆಯಲ್ಲೂ ಈ ದೇಶದ ಎರಡೋ ಮೂರೋ ಭಾಷೆಗಳಲ್ಲಿ ನುರಿತವನಾಗಿದ್ದ C. B. Berth...." ಎಂಬ ಮಾತೂ ಬರುತ್ತದೆ! (ಪು. ೨೮೩).

ಕಿಟೆಲ್‌ನಿಗೆ ಮೇಲೆ ಹೇಳಿದ ಭಾಷೆಗಳು ಕೆಲವದರಲ್ಲಿ ಪರಿಣತಿಯೂ, ಇನ್ನು

ಕೆಲವುಗಳ ವ್ಯಾವಹಾರಿಕ ಜ್ಞಾನವೂ ಇದ್ದುದು ನಿಜವೇ. ಆದರೆ ಅವುಗಳಲ್ಲೆಲ್ಲ ಏಕ ಸಮಾನವಾದ ಪಾಂಡಿತ್ಯವೆಂದು ಹೇಳಿದುದು ತಪ್ಪೆಂದು ಮೇಲುನೋಟಕ್ಕೆಯೇ ಗೊತ್ತಾಗುತ್ತದೆ. ಹ್ಯಾಂಡ್ಸ್ ಭಾಷಾಪಂಡಿತನಿರಲಿಲ್ಲ. ಅವನಿಗೆ ಅನುವಾದ ಕಾರ್ಯ ಕಷ್ಟತರವಾಯಿತೆಂದೇ ವಿಲಿಯಮ್ ರೀವ್ಹನನ್ನು ಬಳ್ಳಾರಿ/ಬೆಂಗಳೂರಿಗೆ ಕಳಿಸಲಾಯಿತು. ಹ್ಯಾಂಡ್ಸ್ ಅನುವಾದಿಸಿದ ಈ ಬೈಬಲ್ ಭಾಗವನ್ನು ಗಮನಿಸಬೇಕು :

"ಆದರೆ ಯಿಾಸು ಕ್ರೀಸ್ತುವಿನ ಹುಟ್ಟುವಿಕೆ ಯಿಾ ಪ್ರಕಾರವಾಗಿ ಸಂಭವಿಸಿತು. ಆತನ ತಾಯಿಯಾದ ಮರಿಯಾ ಯೋಸೆಫಿಗೆ ನೇಮಿಸಲ್ಪಟ್ಟ ತರುವಾಯ ಅವರಿಗೆ ಸಂಸರ್ಗವಾಗುವದಕ್ಕೆ ಮುಂಚೆ ಆಕೆ ಪರಿಶುದ್ಧ ಆತ್ಮನಿಂದ ಗರ್ಭವತಿಯಾದಳು. ಆಗಲು ಆಕೆಯ ಪುರುಷನಾದ ಯೋಸೆಸು ಸತ್ಯವಂತನಾದದರಿಂದ ಆಕೆಯಂನ ಬಹಿರಂಗವಾಗಿ ಅವಮಾನ ಮಾಡ ಮನಸ್ಸಿಲ್ಲದ್ದೆಯೆ ಶಾಂತವಾಗಿ ಆಕೆಯಂನ ಪರಿತ್ಯಾಗ ಮಾಡ ಮನಸಾಗಿದ್ದನು. ಆದರೆ ಯಿದಕ್ಕೋಸ್ಕರವಾಗಿ ಆಲೋಚನೆ ಮಾಡುತ್ತಿರುವಾಗಲು ಯಿದೊ ದೇವರ ದೂತನು ಸ್ವಪ್ನದಲ್ಲಿ ಅವನಿಗೆ ಕಾಣಿಸಲ್ಪಟ್ಟು ಹೇಳಿದ್ದೇನಂದರೆ ದಾವೀದಿನ ಮಗನಾದ ಯೋಶಫೇವಿನ ಹೆಂಡತಿ ಮರಿಯಾಂನ ತರ್ಕೊಳ್ಳ 'ಭಯಪಡಬ್ಯಾಡಯೇನಂದರೆ ಆಕೆ ಪರಿಶುದ್ಧಾತ್ಮನಿಂದ ಗರ್ಭವಂನ ಧರಿಶಿದ್ದಾಳೆ". (ಮತ್ತೆಯು ಬರದ ಸುವಿಶೇಷವು, ಪ್ರಕಟನೆ ೧೮೨೦.)

ಇದೇ ಹ್ಯಾಂಡ್ಸನು ಧರ್ಮನಿಷ್ಠೆ ಮತ್ತು ಪಾಂಡಿತ್ಯಕ್ಕೆ ಇಡೀ ಭಾರತದಲ್ಲಿ ಪ್ರಖ್ಯಾತನಿದ್ದನೆಂದು ಮುತ್ತಣ್ಣನವರು ಹೇಳುತ್ತಾರೆ (ಪು. ೨೭೦). ಇದು ಅರ್ಧ ಸತ್ಯದ ಮಾತು. ಅವನು ಧರ್ಮನಿಷ್ಠನೂ ಸಜ್ಜನನೂ ಆಗಿದ್ದನು ಮತ್ತು ಅವನ ಹೆಸರು ದಕ್ಷಿಣ ಭಾರತದ ಕ್ರಿಶ್ಚಿಯನ್ನರಿಗೆ ಮಾತ್ರ ಪರಿಚಿತವಿದ್ದಿತು.

ಇಂಗ್ಲಂಡಿನವನಾದ ರೈಸನ ಸ್ವದೇಶವು ಜರ್ಮನಿ ಎಂಬುದಾಗಿ ಮುತ್ತಣ್ಣನವರು ಹೇಳಿದುದನ್ನು ವಿಶೇಷವಾಗಿ ಗಮನಿಸಬೇಕು. ಇಷ್ಟೇ ಅಲ್ಲ, ಸಮಗ್ರ ವೆಸ್ಲೆಯನ್ನರನ್ನೆ ಜರ್ಮನ್ ದೇಶದವರೆಂಬುದಾಗಿ ಮತ್ತೆ ಮತ್ತೆ ಹೇಳಿದ್ದಾರೆ. ಪರಿಣಾಮವಾಗಿ ಗ್ಯಾರೆಟ್ ಮೊದಲಾದ ವೆಸ್ಲೆಯನ್ ಮಿಶನರಿಗಳನ್ನು ವರ್ಣಿಸುವಾಗ ಜರ್ಮನ್ ಬಳುವಳಿಯನ್ನು ಕಲ್ಪಿಸಿ, ಅಸತ್ಯವಾದ ಮಾತುಗಳನ್ನು ಬರೆದಿದ್ದಾರೆ. ಜರ್ಮನ್ ದೇಶದ ಮೇಲೆ ಒಟ್ಟಿನಲ್ಲಿ ಅವರ ಒಲವು ವಿಶೇಷವಾಗಿತ್ತೆಂದು ತೋರುತ್ತದೆ. ಫ್ರಾನ್ಸ್ ದೇಶದ ಬೌತಲೋನನ್ನು ಸಹಿತ ಜರ್ಮನ್ ನಾಗರಿಕನನ್ನಾಗಿ ಮಾಡಿದ್ದಾರೆ (ಪು. ೪೭೪).

ವಿವಿಧ ಲೇಖಕರ ಬಗ್ಗೆ ಬಂದ ವೈಯಕ್ತಿಕ ವಿವರಗಳಲ್ಲಿ ಅನೇಕಾನೇಕ ತಪ್ಪುಗಳಿದ್ದು ಅವುಗಳ ಪಟ್ಟಿಯನ್ನು ಕೊಡುತ್ತ ಹೋಗುವುದೆಂದರೆ ಇನ್ನೊಂದು ಪುಸ್ತಕವೇ ಆದೀತು. ಕೆಲವನ್ನು ಮಾತ್ರ ಇಲ್ಲಿ ಕಾಣಿಸುತ್ತೇವೆ.

ರೈಸ್ ಎನ್ನುವವರು ಕರ್ನಾಟಕದಲ್ಲಿ ಮೂವರು ಆಗಿಹೋದರು. ಒಬ್ಬನು

ಬೆಂಜಮಿನ್ ಹೋಲ್ಟ್ ರೈಸ್. ಈತ ಮಿಶನರಿಯಾಗಿ ಬೆಂಗಳೂರಲ್ಲಿ ಅರ್ಧ ಶತಮಾನದವರೆಗೆ ಬದುಕಿದ್ದನು (೧೮೩೭–೧೮೮೭). ಕ್ರೈಸ್ತಮತೀಯ ಪುಸ್ತಕಗಳು, ಪತ್ಯಗಳು ಮತ್ತು ಅರುಣೋದಯ ಪತ್ರಿಕೆ ಇವು ಅವನ ಸಾಹಿತ್ಯಕ ಗೈಮೆಗಳು. ಬಿ. ಲೂಯಿ ರೈಸ್ ಮತ್ತು ಇ. ಪಿ. ರೈಸ್—ಅವನ ಈ ಇಬ್ಬರು ಮಕ್ಕಳು ಕರ್ನಾಟಕದಲ್ಲಿ ಇದ್ದವರು. ಬಿ. ಲೂಯಿ ರೈಸ್ ಮಿಷನರಿಯಾಗದೇ ಶಿಕ್ಷಣಾಧಿಕಾರಿ ಶಾಸನ ಪರಿಶೋಧಕನಾಗಿ ಮಹತ್ತರ ಕಾರ್ಯವನ್ನೆಸಗಿದ್ದಾನೆ. ಮುತ್ತಣ್ಣನವರು ತಂದೆ–ಮಕ್ಕಳಿಬ್ಬರ ಸಾಹಿತ್ಯಿಕ ಕಾರ್ಯವನ್ನು ಒಂದೇ ವ್ಯಕ್ತಿಯಲ್ಲಿ ಆರೋಪಿಸಿ, ವಿಷಯದ ಕಲಸುಮೇಲೋಗರ ಮಾಡಿದ್ದಾರೆ (ಪು. ೩೩೧-೩೩೮). ಅದಕ್ಕೆ ತಮ್ಮ ಊಹನೆ ತರ್ಕಸರಣಿಗಳನ್ನೂ ಸೇರಿಸಿದ್ದರಿಂದ ಅದೊಂದು ಸುಳ್ಳಿನ ಕಂತೆಯಾಗಿ ತೋರುತ್ತದೆ. ಅಲ್ಲದೆ ರೈಸನ ಎಪಿಗ್ರಾಫಿಯಾ ಕರ್ನಾಟಿಕಾ, ಮೈಸೂರ ಗಜೆಟಿಯರ್ ಇವುಗಳು ಪ್ರತ್ಯೇಕ ಕೃತಿಗಳೆಂದು ತಿಳಿಯದೆ ಹೋದ ಮುತ್ತಣ್ಣನವರ ಅಜ್ಞಾನ ಬೇಸರವನ್ನುಂಟುಮಾಡುತ್ತದೆ (ಪು. ೪೮೬-೪೮೭ ಮತ್ತು ೫೧೪). ಲೂಯಿ ರೈಸನು Catalogue of Sanskrit Manuscripts ಎಂಬುದನ್ನು ಸಿದ್ಧಪಡಿಸಿದ್ದನ್ನು, ಅದನ್ನು 'ಸಂಸ್ಕೃತ ಶಾಸನಗಳು' ಎಂಬುದಾಗಿ ಭಾವಿಸಿ, ಅದರಲ್ಲಿ "ಓಲೆಗಳು, ಶಿಲಾಶಾಸನಗಳು, ಮತ್ತಿತರ ಲಿಖಾವಟ್ಟುಗಳು." ಇವೆಯಾಗಿ ಹೇಳಿದ್ದಾರೆ. ಅದರ ಒಂದು ಪುಟದ ಛಾಯಾಚಿತ್ರವನ್ನೂ ಕೊಟ್ಟಿದ್ದಾರೆ. ಪುಸ್ತಕವನ್ನು ಕಣ್ಣಾರೆ ನೋಡಿಯೂ ತಪ್ಪುಮಾಡಿದ್ದಾರೆ—ಯಥಾಪ್ರಕಾರ! ರೈಸನನ್ನು ಕರ್ನಾಟಕದ ಮ್ಯಾಕ್ಸ್ ಮುಲ್ಲರ್ (ಪು. ೪೯೫) ಎಂದು ಕರೆದದ್ದಂತೂ ಅರ್ಥಹೀನವಾದುದು.

ಕೆಲವು ದೇಶೀಯರ ಸಾಹಿತ್ಯ ಕಾರ್ಯದ ಬಗ್ಗೆ ಹೇಳುವಾಗ ಲಿಂಗರಾಜನ ಪ್ರಸ್ತಾಪ ಬಂದಿದೆ. (ಪು. ೩೭೪).

"ಕವಿ ಕೃಷ್ಣರಾಜನೆಂಬವನು ಮೈಸೂರು ರಾಜವಂಶಕ್ಕೆ ಸೇರಿದವನಾಗಿರಬಹುದು. ಅದೇ ಸಮಯದಲ್ಲಿ ಅವನ ಸಮಕಾಲೀನನಾಗಿದ್ದ ಕವಿ ಲಿಂಗರಾಜನೂ ಹಲವು ವಿಚಾರಪೂರ್ಣವಾದ ಕಿರುಹೊತ್ತಗೆಗಳನ್ನು ಬರೆದಿದ್ದಾನೆ. ಇವನನ್ನು ಪೂರ್ಣಯ್ಯನನಂತರ ಮೈಸೂರಿನ ಮುಖ್ಯಮಂತ್ರಿಯಾಗಿದ್ದ ಲಿಂಗರಾಜನೆಂದು ಕೆಲವರು ಹೇಳಿದರೆ ಇನ್ನು ಕೆಲವರು ಕಳೆದ ಶತಮಾನಾರಂಭದಲ್ಲಿ ಕೊಡಗಿನ ಅರಸನಾಗಿದ್ದ ೨ನೇ ಲಿಂಗರಾಜನೆಂದು ಹೇಳಿದ್ದಾರೆ. ಆದರೆ ಮೈಸೂರಿನ ಮುಖ್ಯಮಂತ್ರಿಯಾಗಿದ್ದ ಆ ಲಿಂಗರಾಜನು ಕೇವಲ ಅಸಭ್ಯ ಮತ್ತು ಅಸಂಸ್ಕೃತನಾದ ವ್ಯಕ್ತಿಯಾಗಿದ್ದನೆಂದು ಆಧಾರಪೂರ್ವಕವಾಗಿ ತಿಳಿದುಬರುತ್ತದೆ."

ಮೇಲಣ ಅಭಿಪ್ರಾಯವನ್ನು ಖಂಡಿಸುವ ಶ್ರಮವನ್ನು ತೆಗೆದುಕೊಳ್ಳಲಾರೆವು. ಅತ್ಯುಕ್ತಿಯು ಈ ಗ್ರಂಥದ ಪ್ರಮುಖ ವೈಶಿಷ್ಟ್ಯಗಳಲ್ಲೊಂದಾಗಿದೆ. 'ಇಂಡಿಯನ್ ಎಂಟಿಕ್ವೆರಿ'ಯಲ್ಲಿ ಮೇಲಿಂದಮೇಲೆ ಲೇಖ ಬರೆಯುತ್ತಿದ್ದ ಫ್ಲೀಟ್,

ವೆಬರ್, ಕೀಲ್‌ಹಾರ್ನ್, ಬರ್ಜೆಸ್ ಇವರ ಲೇಖನಗಳು ಸಾವಿರಾರು ಪುಟಗಟ್ಟಲೆ ಇದ್ದುವೆಂದು ಹೇಳುತ್ತಾರೆ. ಇಲ್ಲಿ ಕೆಲವು ಮಾದರಿಗಳಿವೆ. ವೆಬರ್ ಲೇಖನಗಳ ಪುಟಸಂಖ್ಯೆ ಮೂರು ಸಾವಿರ (ಪು. ೮೬). ಕೀಲ್‌ಹಾರ್ನ್‌ನದು ೧೭೫೦ (ಪು. ೭೪). ಬರ್ಜೆಸ್‌ನ ಲೇಖನಗಳಂತೂ ೫೦೦ಕ್ಕೆ ಮಿಕ್ಕಿದ್ದು ೫ ಸಾವಿರ ಪುಟಗಳಷ್ಟಿವೆಯಂತೆ. ಫ್ಲೀಟ್‌ನ ಬರವಣಿಗೆಯಾದರೂ ಅಷ್ಟೇ ವೇಗದಲ್ಲಿ ಮುಂದುವರಿದಿದೆ. ಅವನ ೨೫೦ ಚಾರಿತ್ರಿಕ ಲೇಖನಗಳು ೩೫೦೦ ಪುಟಗಳನ್ನು ಅಲಂಕರಿಸಿವೆಯಂತೆ! (ಪು. ೫೦೭).

೧೮೭೨-೧೯೨೧ರ ವರೆಗೆ ಅಂದರೆ ೫೦ ವರ್ಷಗಳ ಅವಧಿಯಲ್ಲಿ ಈ ಪತ್ರಿಕೆಯಲ್ಲಿ ಬಂದ ಲೇಖನಗಳ ಸಮುದಾಯ ಸೂಚಿಯನ್ನು (Cumulative Index) ಪ್ರಕಟಿಸಲಾಗಿದ್ದು, ಅದನ್ನು ಮುತ್ತಣ್ಣನವರು ತುಸು ತಿರುವಿಹಾಕಿದ್ದರೆ ನೆಟ್ಟಗಿತ್ತು. ಮೇಲಣ ಲೇಖಕರ ಎಲ್ಲ ಬರೆಹಗಳು (೯೮%) ಈ ಸೂಚಿಯಲ್ಲಿ ಬಂದಿವೆ. ಅದರಲ್ಲಿದ್ದ ಫ್ಲೀಟ್‌ನ ಲೇಖನಗಳು ಕೇವಲ ೬೯. ವೆಬರ್‌ನವು ೧೬ ಮಾತ್ರ. ಈ ಲೇಖನಗಳಲ್ಲಿ ಚಿಕ್ಕ ಟಿಪ್ಪಣಿಗಳೂ, ಪುಸ್ತಕ ವಿಮರ್ಶೆಗಳೂ ಸೇರಿದ್ದು, ಅವುಗಳು ಒಮ್ಮೊಮ್ಮೆ ಅರ್ಧಪುಟಕ್ಕೆ ಸೀಮಿತವಾದುದೂ ಇದೆ. ಆದರೂ ಅವುಗಳ ಪುಟಗಳ ಒಟ್ಟು ಮೊತ್ತವು ಬಹು ಸುಲಭವಾಗಿ ಹಲವು ಸಾವಿರಗಳ ಸಂಖ್ಯೆಯನ್ನು ಕಂಡಿತು. ಸಂಖ್ಯಾಮಾನಕ್ಕಿಂತ ಗುಣಗೌರವವು ಬಹು ಹೆಚ್ಚಿನದೆಂಬ ಮಾತಿಗೆ ಮುತ್ತಣ್ಣನವರು ಗಮನಕೊಟ್ಟಿದ್ದರೆ ಅದು ಸತ್ಯಕ್ಕೆ ಸಮೀಪವರ್ತಿಯಾದ ಹೇಳಿಕೆಯೇ ಆಗುತ್ತಿತ್ತು.

ಕರ್ನಾಟಕದಲ್ಲಿ ಹಲವು ವರ್ಷ ಸಂಚರಿಸಿ ಇಲ್ಲಿರುವ ಹಸ್ತಪ್ರತಿಗಳು, ಶಾಸನಗಳು, ಸ್ಥಳಪುರಾಣಗಳು—ಇವುಗಳ ಬಗ್ಗೆ ಮಾಹಿತಿಯನ್ನು ದೊರಕಿಸಿದ ಕಾಲಿನ್ ಮೆಕೆಂಝಿಯ ಕಾರ್ಯ ನಿಜವಾಗಿಯೂ ಮಹತ್ವದ್ದು. ಆದರೆ ಔಚಿತ್ಯವನ್ನು ಮೀರಿ ಅವನನ್ನು ಹೊಗಳಲಾಗಿದೆ. ಅವನ ಸಂಶೋಧನಾ ವರದಿಗಳು ನೂರಾರು ಗ್ರಂಥಕಾಂಡಗಳಾಗಿವೆಯಂತೆ (ಪು. ೧೦೮). ಅವನು ಬರಿ ಸಂಗ್ರಹಕಾರನಿದ್ದನಲ್ಲದೆ ಸಂಶೋಧಕನಲ್ಲ. ಸರ್ ವಿಲಿಯಂ ಹಂಟರನು ಇಂಪೀರಿಯಲ್ ಗಝೆಟಿಯರ್‌ದ ಸಂಪುಟಗಳನ್ನು ಸಂಪಾದಿಸಿದನಷ್ಟೆ. ಅದಕ್ಕೆ ಸಾಮಗ್ರಿಯನ್ನು ಒದಗಿಸಿದವರು, ಮತ್ತು ಬಿಡಿಯಾಗಿ ಲೇಖನಗಳನ್ನು ಬರೆದವರು ನೂರಾರು ಜನರಿದ್ದಾರೆ. ಆದರೆ ಮುತ್ತಣ್ಣನವರ ಲೇಖನವನ್ನೋದಿದರೆ, ಅವನೊಬ್ಬನೇ ಅಷ್ಟೆಲ್ಲ ಸಂಪುಟಗಳನ್ನು ಬರೆದನೆಂದು ಧ್ವನಿತವಾಗುತ್ತದೆ. "ವಿಲಿಯಂ ಕೇರಿಯು ೧೫೦ ಗ್ರಂಥಗಳನ್ನು ಬರೆದನು"—ಇದು ಬಹುಮಟ್ಟಿಗೆ ಸರಿಯಾದ ಮಾತೇ. ಆದರೆ "ಅವನು ಎಷ್ಟು ಪುಸ್ತಕಗಳನ್ನು ಬರೆದನೋ ಅಷ್ಟೇ ಪುಸ್ತಕಗಳು ಅವನ ವಿಷಯವಾಗಿ ಬರೆಯಲ್ಪಟ್ಟಿವೆ"ಯೆಂಬುದು ಅತಿಶಯೋಕ್ತಿಯ ಇನ್ನೊಂದು ಮಾದರಿಯಾಗಿದೆ. ಕಳೆದ ಶತಮಾನದ ಶಾಸನ ಪರಿಶೋಧಕರು ಕೆಲವರ ಹೆಸರು

ಗಳನ್ನು ಹೇಳಿಯಾದ ಮೇಲೆ "ಇವರೆಲ್ಲರ ಈ ಅನ್ವೇಷಣೆಯ ಪರಿಣಾಮವಾಗಿ ಕನ್ನಡ ನಾಡಿನ ಯಾವೊಂದು ಪುರಾತನ ಶಾಸನವೂ ಅವರ ದೃಷ್ಟಿಯಿಂದ ಪಾರಾಗಲಿಲ್ಲ" ಎನ್ನುತ್ತಾರೆ (ಪು. ೪೯೭). ಅನಂತರ ದೊರಕಿದ ಅನೇಕ ಶಾಸನಗಳ ಪಟ್ಟಿಯನ್ನು ಮುತ್ತಣ್ಣನವರಿಗೆ ಒದಗಿಸುವ ತೊಂದರೆಯನ್ನು ಯಾರಾದರೂ ತೆಗೆದುಕೊಳ್ಳುವುದು ಬೇಡವೆಂದು ಕಾಣುತ್ತದೆ. ಹೇಸ್ಟಿಂಗ್ಸ್‌ನಂತೂ ಮುತ್ತಣ್ಣನವರ ಪಾಲಿಗೆ ಮಹಾವಿಭೂತಿ. ಅವನು ಮಾಡಿದ್ದೆಲ್ಲವೂ ಭಾರತದ ಉದ್ಧಾರಕ್ಕಾಗಿಯೇ. ಅವನು ೭ ಪುಟಗಳ ಮುನ್ನುಡಿ ಬರೆದರೆ (ಪು. ೨೩) ಮುತ್ತಣ್ಣನವರ ದೃಷ್ಟಿಯಲ್ಲಿ ಅದು 'ದೀರ್ಘವಾದ' ಮುನ್ನುಡಿ!

ಕನ್ನಡ ಭಾಷೆಯಲ್ಲಿರುವ ಮತ್ತು ಕನ್ನಡ ನಾಡಿನ ವಿವಿಧ ವಿಚಾರಗಳನ್ನು ಕುರಿತು ಇಂಗ್ಲಿಷ್, ಫ್ರೆಂಚ್, ಜರ್ಮನ್, ಪೋರ್ಚುಗೀಸ್ ಇತ್ಯಾದಿ ಭಾಷೆಗಳಲ್ಲಿ ಬರೆಯಲ್ಪಟ್ಟಿರುವ ಗ್ರಂಥಗಳ ಸಂಖ್ಯೆಯು ಒಟ್ಟಾಗಿ ೩೦ ಸಾವಿರದಷ್ಟಾದರೂ ಇದೆಯೆಂದು ಮುತ್ತಣ್ಣನವರ ಲೆಕ್ಕವಿದೆ (ಪು. ೫೦೦). ಭಾರತದ ಬಗ್ಗೆಯಂತೂ ಲಕ್ಷಗಟ್ಟಲೆ ಇವೆಯಂತೆ. ಅಲ್ಲದೆ ಕಳೆದ ಶತಮಾನದಲ್ಲಿ ಕನ್ನಡ ಭಾಷೆಯೊಂದರಲ್ಲೇ ಸು. ೨೫೦೦ರಷ್ಟು ಬೈಬಲ್ ಕೃತಿಗಳು....ಸೂಕ್ತಿಗಳೇ ಮೊದಲಾಗಿ ಬರೆಯಲ್ಪಟ್ಟ ವೆಂದು ಹೇಳುತ್ತಾರೆ. ಮುಂದುವರಿದು—

"ಹೀಗೆ ಒಂದೊಂದೇ ಭಾಷೆಯಲ್ಲಿ ಅಷ್ಟು ಗ್ರಂಥಗಳೆಂದರೆ ಹಿಂದೂಸ್ಥಾನದ ಎಲ್ಲಾ ಸಣ್ಣ ಮತ್ತು ಪ್ರಬಲ ಭಾಷೆಗಳಲ್ಲಿ ಪಾಶ್ಚಾತ್ಯರು ಬರೆದ ಪುಸ್ತಕಗಳು ಒಟ್ಟಾಗಿ ಎಷ್ಟು! ಈ ಎಲ್ಲಾ ಭಾಷೆಗಳಲ್ಲಿ ಇರುವ ಬೈಬಲ್ ಕೃತಿಗಳ ಸಂಖ್ಯೆ ಎಷ್ಟು! ಪರಿಣಾಮವಾಗಿ ಅವೆಲ್ಲಾ ಈ ದೇಶದ ಜನರಿಗೆ ಅಂದು ಎಷ್ಟರಮಟ್ಟಿಗೆ ಮನೋವಿಕಾಸವನ್ನು ಮೊಳಗಿಸಲು, ಚೈತನ್ಯವನ್ನು ಬೀರಲು ಮತ್ತು ಹುಮ್ಮಸನ್ನು ಹುಟ್ಟಿಸಲು ಸಹಾಯಕವಾಗಿದ್ದಿತೆಂಬುದನ್ನೂ ಈ ಅಲ್ಪ ಬರವಣಿಗೆಯ ಮೂಲಕ ವರ್ಣಿಸಲು ಅಸಾಧ್ಯವಾಗಿದೆ." (ಪು. ೩೪೪).

ಹೊಗಳಿಕೆಯ ನಿಮಿತ್ತದಿಂದ, ಇಲ್ಲಿ ಅತಿಶಯೋಕ್ತಿಯು ಪರಾಕಾಷ್ಠೆಯನ್ನು ಮುಟ್ಟಿದೆ.

ಇವೆಲ್ಲ ಪ್ರಮಾದಗಳ ಪರಿಶೀಲನೆಯಿಂದ ವ್ಯಕ್ತವಾಗುವ ಮುಖ್ಯ ಅಂಶ ವೆಂದರೆ ಲೇಖಕರು ತೋರಿದ ಅತೀವ ಅಲಕ್ಷ್ಯ. ವಿಷಯ ಸಂಗ್ರಹವು ಅಪಾರ ವಾಗಿದ್ದರೆ, ಅವುಗಳ ಉಲ್ಲೇಖದಲ್ಲಿ ಕೆಲವು ತಪ್ಪುಗಳಾಗುವುದು ತುಸುಮಟ್ಟಿಗೆ ಅನಿವಾರ್ಯವೆನಿಸೀತು. ಆದರೆ ಯಾವುದೊಂದು ಆಕರವು ಕಣ್ಣೆದುರಿಗಿದ್ದೂ ಅದನ್ನು ಸರಿಯಾಗಿ ನೋಡಿಕೊಳ್ಳದೇ, ಸತ್ಯನಿಷ್ಠತೆಯನ್ನು ಗಾಳಿಗೆ ತೂರಿ, 'ಖುಶಿ' ಬಂದ ರೀತಿಯಲ್ಲಿ ಉಲ್ಲೇಖಿಸಿದ್ದುದು ನಿಜಕ್ಕೂ ವಿಷಾದನೀಯ. ಪ್ರತಿ ಪುಟ ದಲ್ಲಿಯೂ ಸತ್ಯಕ್ಕೆ ದೂರವಾದ ಇಂಥ ಸಂಗತಿಗಳು ದೊರೆಯುವವು. ಈ ನಿರ್ಲಕ್ಷ್ಯದ ಮೂಲಕವೇ ಪುನರುಕ್ತಿ, ಅರ್ಧ ಸತ್ಯದ ಹೇಳಿಕೆಗಳು, ಅತ್ಯುಕ್ತಿಗಳು

ಹಾಗೂ ಅಸ್ಪಷ್ಟ ವಿಚಾರಗಳು ಸೇರಿಕೊಂಡು, ಗ್ರಂಥವು ಅತ್ಯಂತ ಅವಿಶ್ವಸನೀಯ ವಾಗಿದೆ. ಇದರಲ್ಲಿ ಬಂದ ಮಾಹಿತಿಯನ್ನು ನಂಬಿ ಹೆಚ್ಚಿನ ಅಭ್ಯಸನಕ್ಕೆ ಯಾರಾದರೂ ತೊಡಗಿದರೆ, ಅದು ಘಾತುಕದ್ದಾಗಿ ಪರಿಣಮಿಸೀತು.

ಮನೋರಂಗ

ಇಲ್ಲಿಗೆ ಈ ಗ್ರಂಥದ ಪರಾಮರ್ಶೆಯನ್ನು ಮುಗಿಸಬಹುದಿತ್ತು. ಆದರೆ ಪಾಶ್ಚಾತ್ಯರನ್ನು ಹೊಗುಳುವಲ್ಲಿನ ಲೇಖಕರ ಮನೋವೃತ್ತಿ ಅಥವಾ ದೃಷ್ಟಿಕೋಣವು ನಮ್ಮ ದೇಶದ ಸಂಸ್ಕೃತಿಗೆ ಅನ್ಯಾಯವೆಸಗಿದೆ. ಅದನ್ನು ಪರಿಶೀಲಿಸದೆ ಈ ವಿಮರ್ಶೆ ಪೂರ್ಣವೆನಿಸದು.

"ಧರ್ಮಸಂಸ್ಥಾಪನಾಯ ಸಂಭವಾಮಿ ಯುಗೇ ಯುಗೇ ಎಂದು ಹೇಳಿದ ಭಗವಂತನು....ಹಲವು ವಿಧದಲ್ಲಿ ಬಂದು ಹೋದನೆಂಬುದು ನ್ಯಾಯವಾದ ಕಥೆಯೇ ಆಗಿದೆ, ಇರಬಹುದು. ಆದರೆ ನಮ್ಮ ದೇಶದಲ್ಲಿ ಶಿಥಿಲವಾಗುತ್ತಿದ್ದ ಹಿಂದೂಧರ್ಮ, ಸಂಸ್ಕೃತಿ, ಸಾಹಿತ್ಯಗಳೆಲ್ಲವನ್ನೂ ಉಳಿಸಲು....ಮಹಮ್ಮದೀಯರ ಕರಾಳ ನೀತಿಯಿಂದ ದೇಶವನ್ನು ಪಾರಾಗಿಸಲು....೨೦೦ ವರ್ಷಗಳ ಕಾಲ ಇದ್ದು ಹಿಂದೆರಳಿದ ಪಾಶ್ಚಾತ್ಯನು....ಏಕದಶಾವತಾರಿಯಲ್ಲದೆ ಮತ್ತಾರು ?....ದೇಶಕ್ಕೆ ನವಶಕ್ತಿ ಹಾಗೂ ಸ್ಫೂರ್ತಿಯನ್ನು ಒದಗಿಸಿದ ಕಾಲಚಕ್ರದ ಸಾರಥಿಯು ಪಾಶ್ಚಾತ್ಯ ದೇಶದಿಂದ ಓರ್ವವ್ಯಾಪಾರಿಯಾಗಿ ಬಂದುದು ದೇಶದ ಸುದೈವ. ಈ ಅವತಾರವು ಮತ್ಸ್ಯ, ಕೂರ್ಮ, ವರಾಹಾದಿ ಅವತಾರಗಳಿಗಿಂತಾ ಎಷ್ಟೋ ಮೇಲಾದುದೂ ಅರ್ಥವತ್ತಾದುದೂ ಎಂದು ನನ್ನ ಭಾವನೆಯಾಗಿದೆ" (ಮುನ್ನುಡಿ).

"ಅಳಿದುಳಿದ ನಮ್ಮ ಪ್ರಾಚೀನ ಐತಿಹಾಸಿಕ, ವಾಸ್ತುಶಿಲ್ಪ ಮತ್ತು ಸಾಹಿತ್ಯಾದಿ ಕುರುಹುಗಳನ್ನು ಉಳಿಸಲು ಅವರು ದೇವದೂತರಂತೆ ಬಂದು ನಡೆಸಿದ ಜ್ಞಾನೋಪಾಸನೆ, ಅನ್ವೇಷಣೆ ಮತ್ತು ಧರ್ಮರಕ್ಷಣೆಯ ಮಹಾ ಕಾರ್ಯವು ನಮ್ಮ ದೇಶದ ಹಿಂದಾವ ಮಹ ತಪಸ್ವಿಯೂ ಕೈಗೊಳ್ಳದಿದ್ದ ಅಸಾಧಾರಣ ಸಾಹಸವಾಗಿದೆ" (ಮುನ್ನುಡಿ).

"ಅದರ ನಂತರ ರಾ. ನರಸಿಂಹಾಚಾರ್ಯನ 'ಕವಿಚರಿತ್ರೆ', ಆಲೂರ ವೆಂಕಟರಾಯನ 'ಕರ್ಣಾಟಕ ಗತವೈಭವ' ಗೋವಿಂದ ಪೈ ಇವನ 'ಕವಿ ಕಾಲ ವಿಮರ್ಶೆ'—ಇತ್ಯಾದಿ ಬರೆವಣಿಗೆಗಳೆಲ್ಲಾ ಆ ಪಾಶ್ಚಾತ್ಯ ವಿದ್ವಾಂಸರು ಹೇಳಿದ್ದರ ಮೇಲೆ ಕಟ್ಟಿದ ಭವ್ಯಕೋಟೆಗಳು ಮಾತ್ರ ಎಂದೆನ್ನಬಹುದಲ್ಲದೆ ಇವರಾರೂ ತಾವಾಗಿ ಮೂಲತಃ ಯಾವ ಸಂಶೋಧನೆ ಮಾಡಿದರೋ ತಿಳಿಯದು" (ಪು. ೫೪೫).

"ಬ್ರಿಟಿಶರು ಇನ್ನೊಂದು ಅರ್ಧ ಶತಮಾನದ ಕಾಲವಾದರೂ ಈ ದೇಶದಲ್ಲಿ ಉಳಿದಿದ್ದರೆ ಮತ್ತು ಅವರಿಂದಲೇ ಆಧುನಿಕ ವಿದ್ಯೆಯನ್ನು ಪಡೆದು ಪ್ರಸಿದ್ಧರಾದ ಈ ದೇಶದ ಜನರು ಅವರಿಗೆ ತಕ್ಕರೀತಿಯಲ್ಲಿ ಸಹಕಾರವನ್ನಿತ್ತಿದ್ದರೆ ಅವರು ಈ ದೇಶದಲ್ಲಿ ಇಂದಿಗೂ ಇರುವ ಜಾತಿಭೇದ, ಜನಭೇದ ಇತ್ಯಾದಿಗಳನ್ನು ಕಿತ್ತೊಗೆಯುತ್ತಿದ್ದರು" (ಪು. ೩೪೬).

ಇದು ಮುತ್ತಣ್ಣನವರ ವಿಚಾರಧೋರಣೆ. ಇವೇ ಮಾತುಗಳು ಅನುವು ದೊರೆತಲ್ಲೆಲ್ಲ ಪುನರುಕ್ತಿಗೊಂಡಿವೆ. ಕೆಲವೆಡೆ ವಿಸ್ತಾರವಾಗಿ ಪ್ರತಿಪಾದಿತವಾಗಿವೆ. ಪಾಶ್ಚಾತ್ಯರಿಂದಲೇ ನಮ್ಮ ಉದ್ಧಾರವಾಯಿತು ಎಂದು ಹೇಳುವ ಅವಸರದಲ್ಲಿ ಭಾರತೀಯ ಜನ, ಅವರ ಆಚಾರ ವಿಚಾರ, ವಿದ್ಯೆ, ಸಾಹಿತ್ಯಿಕ ಕಾರ್ಯ ಇವನ್ನು ಅತ್ಯಂತ ಹೀನಾಯವಾಗಿ ಕಾಣಲಾಗಿದೆ. ಜೊತೆಗೆ ಬ್ರಾಹ್ಮಣರನ್ನು ಅಲ್ಲಲ್ಲಿ ಜರೆಯಲಾಗಿದೆ.

ಮುತ್ತಣ್ಣನವರ ಪುಸ್ತಕದ ಮಟ್ಟ ಯಾವ ರೀತಿಯದೆಂಬುದನ್ನು ಅದರ ಬಹಿರಂಗ, ಅಂತರಂಗಗಳ ವಿವೇಚನೆಯಲ್ಲಿ ತೋರಿಸಲಾಗಿದೆಯಷ್ಟೆ. ಹಾಗಿರುವಾಗ, ಅವರ ಈ ದೃಷ್ಟಿಕೋಣವನ್ನು ಹುಚ್ಚುತನದ ವ್ಯರ್ಥಾಲಾಪದಿಂದ ಕಡೆಗಣಿಸಿ ಬಿಡಬಹುದಿತ್ತು. ಆದರೆ ವಿಜ್ಞಾನ ಮತ್ತು ಆಧುನಿಕತೆಗಳ ಹೆಸರಿನಲ್ಲಿ ಭಾರತೀಯ ಜೀವನ ಮೌಲ್ಯಗಳನ್ನು ತುಚ್ಛವಾಗಿ ಕಾಣುವ ಸ್ವಬಾಂಧವರು ನಮ್ಮ ದೇಶದಲ್ಲಿ ಸಾಕಷ್ಟು ಜನರಿದ್ದಾರೆ. ಅಂಥವರನ್ನೂ ಗಮನದಲ್ಲಿರಿಸಿಕೊಂಡು ಮುತ್ತಣ್ಣನವರ ಭೂಮಿಕೆಯನ್ನು ವಿಶ್ಲೇಷಿಸುವುದು ಅಗತ್ಯವಾಗುತ್ತದೆ.

ಕಳೆದ ನೂರೈವತ್ತು ವರ್ಷಗಳಲ್ಲಿ ಸಾಗಿಬಂದ ಇಂಗ್ಲಿಷರ ಆಡಳಿತ, ಶಿಕ್ಷಣ ಪ್ರಚಾರ ಮತ್ತು ನಮ್ಮ ಧರ್ಮ ಸಂಸ್ಕೃತಿಗಳ ಮೇಲೆ ನಡೆದ ಸುವ್ಯವಸ್ಥಿತವಾದ ಹಾಗೂ ಬಹುಮುಖವಾದ ದಾಳಿಗಳಿಂದ ನಮ್ಮ ಇತಿಹಾಸ-ಸಂಸ್ಕೃತಿಗಳ ವಿಕೃತ ರೂಪವು ದೇಶದ ಅನೇಕ ಸುಶಿಕ್ಷಿತರ ಮನಸ್ಸಿನಲ್ಲಿ ಗಟ್ಟಿಯಾಗಿ ನೆಲೆಗೊಂಡಿದೆ. ಮೇಲೆ ಹೇಳಿದ ವಿಚಾರಸರಣಿಗೆ ಇದುವೆ ಹಿನ್ನೆಲೆಯಾಗಿದೆ.

ಬ್ರಿಟಿಶರು ಭಾರತಕ್ಕೆ ಬಂದದ್ದು ಕೇವಲ ಭಾರತೀಯರ ಉದ್ಧಾರಕ್ಕಾಗಿ ಅಲ್ಲ. ಅವರು ಇಲ್ಲಿಗೆ ಬಂದಾಗ ಭಾರತೀಯರು ಸುಸಂಸ್ಕೃತರಿದ್ದರಷ್ಟೇ ಅಲ್ಲ, ಉದ್ಯೋಗ ವ್ಯವಸಾಯಗಳಲ್ಲಿ ತುಂಬಾ ಪ್ರಗತಿ ಗಳಿಸಿದ್ದರು. ಆಗಿನ ಯುರೋಪದಲ್ಲಿಯು, ಅದರಂತೆ ಭಾರತದ ಆರ್ಥಿಕ ಮತ್ತು ಔದ್ಯೋಗಿಕ ಮಟ್ಟಗಳನ್ನು ತುಲನಾತ್ಮಕವಾಗಿ ಅಭ್ಯಾಸ ಮಾಡಿದ ಗ್ರಂಥಗಳು ಹೊರಬಿದ್ದಿವೆ. ಅವುಗಳಿಂದ ಭಾರತೀಯರ ಆಗಿನ ಕಾಲದ (೧೭, ೧೮ನೇ ಶತಮಾನಗಳ) ಉಚ್ಚಮಟ್ಟದ ಜೀವನ ನೋಡಸಿಗುತ್ತದೆ. ಬ್ರಿಟಿಶರು ಬಂದ ಮೇಲೆ ನಡೆಸಿದ ರಾಜಕೀಯ ದಬ್ಬಾಳಿಕೆ ಹಾಗೂ ಆರ್ಥಿಕ ಶೋಷಣೆಯ ಕತೆಯನ್ನು ರಮೇಶಚಂದ್ರ ದತ್ತ, ದಾದಾಭಾಯಿ ನಾರೋಜಿ, ವಿಲಿಯಮ್ ಡಿಗ್ಬಿ (Prosperous British Indiaದ ಲೇಖಕರು), ಜೆ. ಸಿ. ಕುಮಾರಪ್ಪ ಮೊದಲಾದವರು ಚೆನ್ನಾಗಿ ಚಿತ್ರಿಸಿದ್ದಾರೆ. ತಮ್ಮ ದೇಶದ ಪ್ರಗತಿಗಾಗಿ ಭಾರತೀಯರ ಕೈಗಾರಿಕೆ–ಇತರ ಉದ್ಯೋಗಗಳನ್ನು ನಾಶಮಾಡಿದ ಬ್ರಿಟಿಶರನ್ನು ಭಾರತದ ಉದ್ಧಾರಕರೆಂದು ಹೊಗಳಬೇಕೆ? ಅವರು ತಮ್ಮ ಆಡಳಿತದಿಂದ ಶಾಂತಿ ಸುವ್ಯವಸ್ಥೆಗಳನ್ನು ನೆಲೆಗೊಳಿಸಿದರೆಂದು ಹೇಳಲಾಗುತ್ತದೆ. ಬಂಗಾಲದಲ್ಲಿ ಈಸ್ಟ್ ಇಂಡಿಯಾ ಕಂಪನಿಯವರು ನಡೆಸಿದ ದುರಾಡಳಿತೆಯನ್ನು ಬ್ರಿಟಿಶ್ ಇತಿಹಾಸಜ್ಞರೇ

ಹಾಗೂ ಅಸ್ಪಷ್ಟ ವಿಚಾರಗಳು ಸೇರಿಕೊಂಡು, ಗ್ರಂಥವು ಅತ್ಯಂತ ಅವಿಶ್ವಸನೀಯವಾಗಿದೆ. ಇದರಲ್ಲಿ ಬಂದ ಮಾಹಿತಿಯನ್ನು ನಂಬಿ ಹೆಚ್ಚಿನ ಅಭ್ಯಸನಕ್ಕೆ ಯಾರಾದರೂ ತೊಡಗಿದರೆ, ಅದು ಘಾತುಕವಾಗಿ ಪರಿಣಮಿಸೀತು.

ಮನೋರಂಗ

ಇಲ್ಲಿಗೆ ಈ ಗ್ರಂಥದ ಪರಾಮರ್ಶೆಯನ್ನು ಮುಗಿಸಬಹುದಿತ್ತು. ಆದರೆ ಪಾಶ್ಚಾತ್ಯರನ್ನು ಹೊಗುಳುವಲ್ಲಿನ ಲೇಖಕರ ಮನೋವೃತ್ತಿ ಅಥವಾ ದೃಷ್ಟಿಕೋಣವು ನಮ್ಮ ದೇಶದ ಸಂಸ್ಕೃತಿಗೆ ಅನ್ಯಾಯವೆಸಗಿದೆ. ಅದನ್ನು ಪರಿಶೀಲಿಸದೆ ಈ ವಿಮರ್ಶೆ ಪೂರ್ಣವೆನಿಸದು.

"ಧರ್ಮಸಂಸ್ಥಾಪನಾಯ ಸಂಭವಾಮಿ ಯುಗೇ ಯುಗೇ ಎಂದು ಹೇಳಿದ ಭಗವಂತನು....ಹಲವು ವಿಧದಲ್ಲಿ ಬಂದು ಹೋದನೆಂಬುದು ನ್ಯಾಯವಾದ ಕಥೆಯೇ ಆಗಿದೆ, ಇರಬಹುದು. ಆದರೆ ನಮ್ಮ ದೇಶದಲ್ಲಿ ಶಿಥಿಲವಾಗುತ್ತಿದ್ದ ಹಿಂದೂಧರ್ಮ, ಸಂಸ್ಕೃತಿ, ಸಾಹಿತ್ಯಗಳೆಲ್ಲವನ್ನೂ ಉಳಿಸಲು....ಮಹಮ್ಮದೀಯರ ಕರಾಳ ನೀತಿಯಿಂದ ದೇಶವನ್ನು ಪಾರಾಗಿಸಲು....೨೦೦ ವರ್ಷಗಳ ಕಾಲ ಇದ್ದು ಹಿಂದೆರಳಿದ ಪಾಶ್ಚಾತ್ಯನು....ಏಕದಶಾವತಾರಿಯಲ್ಲದೆ ಮತ್ತಾರು?....ದೇಶಕ್ಕೆ ನವಶಕ್ತಿ ಹಾಗೂ ಸ್ಫೂರ್ತಿಯನ್ನು ಒದಗಿಸಿದ ಕಾಲಚಕ್ರದ ಸಾರಥಿಯು ಪಾಶ್ಚಾತ್ಯ ದೇಶದಿಂದ ಓರ್ವವ್ಯಾಪಾರಿಯಾಗಿ ಬಂದುದು ದೇಶದ ಸುದೈವ. ಈ ಅವತಾರವು ಮತ್ಸ್ಯ, ಕೂರ್ಮ, ವರಾಹಾದಿ ಅವತಾರಗಳಿಗಿಂತಾ ಎಷ್ಟೋ ಮೇಲಾದುದೂ ಅರ್ಥವತ್ತಾದುದೂ ಎಂದು ನನ್ನ ಭಾವನೆಯಾಗಿದೆ" (ಮುನ್ನುಡಿ).

"ಅಳಿದುಳಿದ ನಮ್ಮ ಪ್ರಾಚೀನ ಐತಿಹಾಸಿಕ, ವಾಸ್ತುಶಿಲ್ಪ ಮತ್ತು ಸಾಹಿತ್ಯಾದಿ ಕುರುಹುಗಳನ್ನು ಉಳಿಸಲು ಅವರು ದೇವದೂತರಂತೆ ಬಂದು ನಡೆಸಿದ ಜ್ಞಾನೋಪಾಸನೆ, ಅನ್ವೇಷಣೆ ಮತ್ತು ಧರ್ಮರಕ್ಷಣೆಯ ಮಹಾ ಕಾರ್ಯವು ನಮ್ಮ ದೇಶದ ಹಿಂದಾನ ಮಹ ತಪಸ್ವಿಯೂ ಕೈಗೊಳ್ಳದಿದ್ದ ಅಸಾಧಾರಣ ಸಾಹಸವಾಗಿದೆ" (ಮುನ್ನುಡಿ).

"ಆದರ ನಂತರ ರಾ. ನರಸಿಂಹಾಚಾರ್ಯನ 'ಕವಿಚರಿತ್ರೆ', ಆಲೂರ ವೆಂಕಟರಾಯನ 'ಕರ್ನಾಟಕ ಗತವೈಭವ' ಗೋವಿಂದ ಪೈ ಇವನ 'ಕವಿ ಕಾಲ ವಿಮರ್ಶೆ'—ಇತ್ಯಾದಿ ಬರೆವಣಿಗೆಗಳೆಲ್ಲಾ ಆ ಪಾಶ್ಚಾತ್ಯ ವಿದ್ವಾಂಸರು ಹೇಳಿದ್ದರ ಮೇಲೆ ಕಟ್ಟಿದ ಭವ್ಯಕೋಟೆಗಳು ಮಾತ್ರ ಎಂದೆನ್ನಬಹುದಲ್ಲದೆ ಇವರಾರೂ ತಾವಾಗಿ ಮೂಲತಃ ಯಾವ ಸಂಶೋಧನೆ ಮಾಡಿದರೋ ತಿಳಿಯದು" (ಪು. ೫೮೯).

"ಬ್ರಿಟಿಶರು ಇನ್ನೊಂದು ಅರ್ಧ ಶತಮಾನದ ಕಾಲವಾದರೂ ಈ ದೇಶದಲ್ಲಿ ಉಳಿದಿದ್ದರೆ ಮತ್ತು ಅವರಿಂದಲೇ ಆಧುನಿಕ ವಿದ್ಯೆಯನ್ನು ಪಡೆದು ಪ್ರಸಿದ್ಧರಾದ ಈ ದೇಶದ ಜನರು ಅವರಿಗೆ ತಕ್ಕರೀತಿಯಲ್ಲಿ ಸಹಕಾರವನ್ನಿತ್ತಿದ್ದರೆ ಅವರು ಈ ದೇಶದಲ್ಲಿ ಇಂದಿಗೂ ಇರುವ ಜಾತಿಭೇದ, ಜನಭೇದ ಇತ್ಯಾದಿಗಳನ್ನು ಕಿತ್ತೊಗೆಯುತ್ತಿದ್ದರು" (ಪು. ೩೪೬).

ಇದು ಮುತ್ತಣ್ಣನವರ ವಿಚಾರಧೋರಣೆ. ಇವೇ ಮಾತುಗಳು ಅನುವು ದೊರೆತಲ್ಲೆಲ್ಲ ಪುನರುಕ್ತಿಗೊಂಡಿವೆ. ಕೆಲವೆಡೆ ವಿಸ್ತಾರವಾಗಿ ಪ್ರತಿಪಾದಿತವಾಗಿವೆ. ಪಾಶ್ಚಾತ್ಯರಿಂದಲೇ ನಮ್ಮ ಉದ್ಧಾರವಾಯಿತು ಎಂದು ಹೇಳುವ ಅವಸರದಲ್ಲಿ ಭಾರತೀಯ ಜನ, ಅವರ ಆಚಾರ ವಿಚಾರ, ವಿದ್ಯೆ, ಸಾಹಿತ್ಯಿಕ ಕಾರ್ಯ ಇವನ್ನು ಅತ್ಯಂತ ಹೀನಾಯವಾಗಿ ಕಾಣಲಾಗಿದೆ. ಜೊತೆಗೆ ಬ್ರಾಹ್ಮಣರನ್ನು ಅಲ್ಲಲ್ಲಿ ಜರೆಯಲಾಗಿದೆ.

ಮುತ್ತಣ್ಣನವರ ಪುಸ್ತಕದ ಮಟ್ಟ ಯಾವ ರೀತಿಯದೆಂಬುದನ್ನು ಅದರ ಬಹಿರಂಗ, ಅಂತರಂಗಗಳ ವಿವೇಚನೆಯಲ್ಲಿ ತೋರಿಸಲಾಗಿದೆಯಷ್ಟೆ. ಹಾಗಿರುವಾಗ, ಅವರ ಈ ದೃಷ್ಟಿಕೋಣವನ್ನು ಹುಚ್ಚುತನದ ವ್ಯರ್ಥಾಲಾಪದಿಂದ ಕಡೆಗಣಿಸಿ ಬಿಡಬಹುದಿತ್ತು. ಆದರೆ ವಿಜ್ಞಾನ ಮತ್ತು ಆಧುನಿಕತೆಗಳ ಹೆಸರಿನಲ್ಲಿ ಭಾರತೀಯ ಜೀವನ ಮೌಲ್ಯಗಳನ್ನು ತುಚ್ಛವಾಗಿ ಕಾಣುವ ಸ್ವಬಾಂಧವರು ನಮ್ಮ ದೇಶದಲ್ಲಿ ಸಾಕಷ್ಟು ಜನರಿದ್ದಾರೆ. ಅಂಥವರನ್ನೂ ಗಮನದಲ್ಲಿರಿಸಿಕೊಂಡು ಮುತ್ತಣ್ಣನವರ ಭೂಮಿಕೆಯನ್ನು ವಿಶ್ಲೇಷಿಸುವುದು ಅಗತ್ಯವಾಗುತ್ತದೆ.

ಕಳೆದ ನೂರೈವತ್ತು ವರ್ಷಗಳಲ್ಲಿ ಸಾಗಿಬಂದ ಇಂಗ್ಲಿಷರ ಆಡಳಿತ, ಶಿಕ್ಷಣ ಪ್ರಚಾರ ಮತ್ತು ನಮ್ಮ ಧರ್ಮ ಸಂಸ್ಕೃತಿಗಳ ಮೇಲೆ ನಡೆದ ಸುವ್ಯವಸ್ಥಿತವಾದ ಹಾಗೂ ಬಹುಮುಖವಾದ ದಾಳಿಗಳಿಂದ ನಮ್ಮ ಇತಿಹಾಸ–ಸಂಸ್ಕೃತಿಗಳ ವಿಕೃತ ರೂಪವು ದೇಶದ ಅನೇಕ ಸುಶಿಕ್ಷಿತರ ಮನಸ್ಸಿನಲ್ಲಿ ಗಟ್ಟಿಯಾಗಿ ನೆಲೆಗೊಂಡಿದೆ. ಮೇಲೆ ಹೇಳಿದ ವಿಚಾರಸರಣಿಗೆ ಇದುವೆ ಹಿನ್ನೆಲೆಯಾಗಿದೆ.

ಬ್ರಿಟಿಶರು ಭಾರತಕ್ಕೆ ಬಂದದ್ದು ಕೇವಲ ಭಾರತೀಯರ ಉದ್ಧಾರಕ್ಕಾಗಿ ಅಲ್ಲ. ಅವರು ಇಲ್ಲಿಗೆ ಬಂದಾಗ ಭಾರತೀಯರು ಸುಸಂಸ್ಕೃತರಿದ್ದರಷ್ಟೇ ಅಲ್ಲ, ಉದ್ಯೋಗ ವ್ಯವಸಾಯಗಳಲ್ಲಿ ತುಂಬಾ ಪ್ರಗತಿ ಗಳಿಸಿದ್ದರು. ಆಗಿನ ಯುರೋಪದಲ್ಲಿಯ, ಆದರಂತೆ ಭಾರತದ ಆರ್ಥಿಕ ಮತ್ತು ಔದ್ಯೋಗಿಕ ಮಟ್ಟಗಳನ್ನು ತುಲನಾತ್ಮಕವಾಗಿ ಅಭ್ಯಾಸ ಮಾಡಿದ ಗ್ರಂಥಗಳು ಹೊರಬಿದ್ದಿವೆ. ಅವುಗಳಿಂದ ಭಾರತೀಯರ ಆಗಿನ ಕಾಲದ (೧೭, ೧೮ನೇ ಶತಮಾನಗಳ) ಉಚ್ಚಮಟ್ಟದ ಜೀವನ ನೋಡಸಿಗುತ್ತದೆ. ಬ್ರಿಟಿಶರು ಬಂದ ಮೇಲೆ ನಡೆಸಿದ ರಾಜಕೀಯ ದಬ್ಬಾಳಿಕೆ ಹಾಗೂ ಆರ್ಥಿಕ ಶೋಷಣೆಯ ಕತೆಯನ್ನು ರಮೇಶಚಂದ್ರ ದತ್ತ, ದಾದಾಭಾಯಿ ನೌರೋಜಿ, ವಿಲಿಯಮ್ ಡಿಗ್ಬಿ (Prosperous British Indiaದ ಲೇಖಕರು), ಜೆ. ಸಿ. ಕುಮಾರಪ್ಪ ಮೊದಲಾದವರು ಚೆನ್ನಾಗಿ ಚಿತ್ರಿಸಿದ್ದಾರೆ. ತಮ್ಮ ದೇಶದ ಪ್ರಗತಿಗಾಗಿ ಭಾರತೀಯರ ಕೈಗಾರಿಕೆ–ಇತರ ಉದ್ಯೋಗಗಳನ್ನು ನಾಶಮಾಡಿದ ಬ್ರಿಟಿಶರನ್ನು ಭಾರತದ ಉದ್ಧಾರಕರೆಂದು ಹೊಗಳಬೇಕೆ? ಅವರು ತಮ್ಮ ಆಡಳಿತದಿಂದ ಶಾಂತಿ ಸುವ್ಯವಸ್ಥೆಗಳನ್ನು ನೆಲೆಗೊಳಿಸಿದರೆಂದು ಹೇಳಲಾಗುತ್ತದೆ. ಬಂಗಾಲದಲ್ಲಿ ಈಸ್ಟ್ ಇಂಡಿಯಾ ಕಂಪನಿಯವರು ನಡೆಸಿದ ದುರಾಡಳಿತೆಯನ್ನು ಬ್ರಿಟಿಶ್ ಇತಿಹಾಸಜ್ಞರೇ

ಕಟುವಾಗಿ ಟೀಕಿಸಿದುದನ್ನು ನೆನೆಯತಕ್ಕುದು. ಭಾರತೀಯರನ್ನು ನಿಶ್ಶಸ್ತ್ರರನ್ನಾಗಿ, ನಿರ್ವೀರ್ಯರನ್ನಾಗಿ ಮಾಡಿ, ಮಸಣದ ಶಾಂತಿಯನ್ನು ಮಾತ್ರ ಬ್ರಿಟಿಶರು ತಂದು ಕೊಟ್ಟರೆನ್ನಬೇಕಾಗುವುದು. ಇನ್ನು ಶಿಕ್ಷಣ. ಪಾಶ್ಚಾತ್ಯ ಶಿಕ್ಷಣವನ್ನು ಈ ದೇಶದಲ್ಲಿ ಪ್ರಾರಂಭಿಸಿದುದರ ಉದ್ದೇಶವನ್ನು ಮೆಕಾಲೆಯು ಈ ರೀತಿಯಾಗಿ ಸ್ಪಷ್ಟ ಪಡಿಸಿದ್ದನ್ನು ಮುತ್ತಣ್ಣನವರಂಥವರ ಗಮನಕ್ಕೆ ತರಬಯಸುತ್ತೇವೆ :

We must at present do our best to form a class who may be interpreters between us and the millions we govern ; a class of persons—Indians in blood and colour, but English in taste, in opinion, in morals and intellect.

ಪಾಶ್ಚಾತ್ಯರು ಭಾರತದ ಪ್ರಾಚೀನ ಇತಿಹಾಸ, ಸಾಹಿತ್ಯಗಳನ್ನು, ಧರ್ಮ ಗ್ರಂಥಗಳನ್ನು ಯುರೋಪದ ಭಾಷೆಗಳಲ್ಲಿ ಅನುವಾದಿಸಿದರು. ಪರಿಚಯ ಮಾಡಿ ಕೊಟ್ಟರು. ವಿಲಿಯಮ್ ಜೋನ್ಸ್ ಏಶಿಯಾಟಿಕ್ ಸೊಸೈಟಿಯನ್ನು ಸ್ಥಾಪಿಸಿ ಆ ದಿಶೆಯಲ್ಲಿ ಮೊದಲಿಗನಾದನು. ಇದೆಲ್ಲ ಒಳ್ಳೆಯ ಕೆಲಸವೇ. ಆದರೆ ಅದ ರಿಂದ ಭಾರತೀಯರಿಗಾದ ಲಾಭವೇನು ? ಭಾರತೀಯ ಧರ್ಮ, ಹಾಗೂ ಸಾಹಿತ್ಯದ ಗ್ರಂಥಗಳ ಗುಣಗೌರವಕ್ಕೆ ಲುಬ್ಧರಾಗಿ ಅವರು ಅವನ್ನು ತಮ್ಮ ಭಾಷೆ ಗಳಲ್ಲಿ ಬೆಳಕಿಗೆ ತಂದರು. ಅದರಿಂದ ಯುರೋಪದ ಜನರಿಗೆ ಪ್ರಯೋಜನವಾಯಿ ತಲ್ಲದೆ, ಭಾರತೀಯರಿಗಲ್ಲ. ಹಾಗೆ ಮಾಡುವಾಗ, ಅವರು ಮಾಡಿದ ತಪ್ಪು ತಪ್ಪಾದ ಅನುವಾದದಿಂದ ಮೂಲಕೃತಿಗಳಿಗೆ ಅನೇಕ ಸಲ ಅನ್ಯಾಯವೂ ಆಗಿದೆ. ಈ ಪ್ರಸಂಗದಲ್ಲಿ ಇನ್ನೊಂದು ಮಾತನ್ನು ನೆನೆಯಬೇಕು. ಆರ್ಷೇಯ ಗ್ರಂಥಗಳನ್ನು, ಅದರಂತೆ ಶಿಲಾಶಾಸನಗಳನ್ನು ಅರ್ಥಮಾಡಿಕೊಳ್ಳುವಾಗ ಪಾಶ್ಚಾ ತ್ಯರು ಹಿಂದೂ ವಿದ್ವಾಂಸರ ಸಹಾಯವನ್ನು ಪಡೆದ ಸಂದರ್ಭಗಳು ಲೆಕ್ಕವಿಲ್ಲದಷ್ಟಿವೆ. ಅಂತರ ಇಷ್ಟೇ. ಕಿಟೆಲ್, ಫ್ಲೀಟ್ ರಂತಹ ಕೆಲವು ವಿದ್ವಾಂಸರು ಮಾತ್ರ ಅಂಥ ಸಹಾಯವನ್ನು ಕೃತಜ್ಞತೆಯಿಂದ ಸ್ಮರಿಸಿದ್ದಾರೆ. ಇತರ ಅನೇಕರು ಹಾಗೆ, ಮಾಡಿಲ್ಲ.

'ವೇದಾದಿ ಗ್ರಂಥಗಳು ಬ್ರಾಹ್ಮಣೇತರರಿಗೆ ಲಭ್ಯವಿದ್ದಿಲ್ಲ; ಪಾಶ್ಚಾತ್ಯರು ತಾವಾಗಿ ಸಂಸ್ಕೃತ ಹಾಗೂ ದೇಶಭಾಷೆಗಳನ್ನು ಕಲಿತು, ಆ ಗ್ರಂಥಗಳನ್ನು ಅಭ್ಯಸಿಸಿ, ಅನುವಾದಿಸಿ ಸರ್ವರಿಗೂ ಮುಕ್ತಮಾಡಿದರು' ಎಂಬುದು ಮುತ್ತಣ್ಣ ನವರು ಪದೇ ಪದೇ ಹೇಳುವ ನಿಲುಮೆಯಾಗಿದೆ. "ಬ್ರಾಹ್ಮಣರು ತಾವೂ ಓದಲಿಲ್ಲ; ಇತರರಿಗೂ ಓದುವ ಅವಕಾಶವನ್ನು ಕೊಡಲಿಲ್ಲ" ಎನ್ನುತ್ತಾರೆ (ಪು. ೨೨). ಅವರು ಓದದೇ ಸಂಸ್ಕೃತದಲ್ಲಿ ವೇದ, ವೇದಾಂಗಗಳಿಗೆ ಅನೇಕ ಟೀಕೆಗಳು ಹೊರಬಂದುವೆ? ಬ್ರಾಹ್ಮಣೇತರರು ವೇದಾದಿಗಳನ್ನು ಅಭ್ಯಾಸಮಾಡಿದ್ದ ರೆಂಬುದಕ್ಕೆ ಉಪನಿಷತ್ತು, ರಾಮಾಯಣ, ಮಹಾಭಾರತಗಳಲ್ಲಿ ಅನೇಕ ಉದಾಹರಣೆ

ಗಳು ಸಿಕ್ಕುತ್ತವೆ. ಐತಿಹಾಸಿಕ ಕಾಲದಲ್ಲಿಯೇ ಗ್ರೀಕ್ ತತ್ತ್ವಜ್ಞಾನಿಗಳಿಗೆ, ಚೀನಾ ದೇಶದ ತತ್ವವೇತ್ತರಿಗೆ, ಮುಸಲ್ಮಾನ್ ಸೂಫಿಗಳಿಗೆ, ನಾನಾ ಜಾತಿಯ ಸಂತರಿಗೆ ವೇದಗಳ ಪರಿಚಯವಿದ್ದುದನ್ನು ಹೇಗೆ ಅಲ್ಲಗಳೆಯಬೇಕು? ವೇದಗಳ ಪರಿಚಯ ಮಾಡಿಕೊಂಡದ್ದಕ್ಕಾಗಿ ಯಾರಾದರೂ ಅವರಿಗೆ ಶಿಕ್ಷೆ ವಿಧಿಸಿದರೆ? ತಿಳಿಯಬೇಕಾದ ಮಾತೆಂದರೆ, ವೇದಾದಿ ಗ್ರಂಥಗಳನ್ನು ಓದಲು ಒಂದು ಬಗೆಯ ವಿಶಿಷ್ಟ ಅಧಿಕಾರ ಬೇಕು. ಅದು ಕೇವಲ ಜಾತಿಯ ಮಾತಲ್ಲ.

ಆರ್ಷೇಯ ಗ್ರಂಥಗಳನ್ನು, ಇಲ್ಲವೆ ಹಿಂದೂ ಧರ್ಮದ ತತ್ವಗಳನ್ನು ಪುಸ್ತಕಗಳ ಮೂಲಕ ಅಭ್ಯಾಸಮಾಡಿರದಿದ್ದರೂ ಸಾಮಾನ್ಯ ಜನಜೀವನದಲ್ಲಿ ಅವು ಬೆರೆತುಬಿಟ್ಟಿದ್ದವು. ಈ ಅಂಶವನ್ನು ಪಾಶ್ಚಾತ್ಯ ವಿದ್ವಾಂಸರೇ ಒಪ್ಪಿಕೊಂಡಿದ್ದಾರೆ:

These ideas are not the monopoly of the learned: they are shared in great measure by the man in the street. If you talk to a fairly intelligent Hindu peasant about the Paramātma, karma, Māyā. Mukti and so forth, you will find...that the forms are familiar to him (Sir Herbert Risley).

ಇಂತು, ವಿದ್ಯೆಯೆಂದರೆ ಕೇವಲ ಪುಸ್ತಕೀಯ ವಿದ್ಯೆಯಲ್ಲ—ಎಂಬ ಮಾತನ್ನು ಮುತ್ತಣ್ಣನವರಂಥ ಮಹಾನುಭಾವರು ಅವಶ್ಯವಾಗಿ ಗಮನಿಸತಕ್ಕದು. ವ್ಯವಹಾರ ವಿದ್ಯೆಯಲ್ಲಿಯೂ ಅಂದಿನ ಜನರು ಸಾಕಷ್ಟು ಪರಿಣತರಿದ್ದರೆಂಬುದನ್ನು, ಜಿ. ಎಲ್. ಪೆಂಡರಗಾಸ್ಟ್ ಎಂಬ ಮುಂಬಯಿ ಸರಕಾರದ ಶಿಕ್ಷಣಾಧಿಕಾರಿಯು ೧೮೨೧ರಲ್ಲಿ ಹೇಳಿದ ಈ ಮಾತಿನಿಂದಲೂ ಮನಗಾಣಬಹುದಾಗಿದೆ:

“ಇಲ್ಲಿಯ ಶಾಲೆಗಳಲ್ಲಿ ಓದು, ಬರೆಹ, ಗಣಿತ—ಈ ಪ್ರಾಥಮಿಕ ವಿಷಯಗಳನ್ನು ಹೆಚ್ಚಿನ ವೆಚ್ಚವಿಲ್ಲದೆ ಕಲಿಸಲಾಗುತ್ತದೆ. ಕಲಿಸುವ ಪದ್ಧತಿಯೊ ಅತ್ಯಂತ ಸರಳ; ಅಷ್ಟೇ ಪರಿಣಾಮಕಾರಿಯೂ ಅಹುದು. ಸಾಮಾನ್ಯ ರೈತರು ಅಥವಾ ವ್ಯಾಪಾರಿಗಳು ಲೆಕ್ಕದಲ್ಲಿ ಇಷ್ಟೊಂದು ಚಾಕಚಕ್ಯತೆಯಿಂದ ವ್ಯವಹರಿಸುತ್ತಾರಲ್ಲ; ಅದೇ ಮಟ್ಟದ ನಮ್ಮ ದೇಶದ ಜನರಿಗಿಂತ ಇವರು ಈ ವಿಷಯದಲ್ಲಿ ಮೇಲ್ಮೆ ಪಡೆದವರೆಂದೇ ಹೇಳಬೇಕು.” (Survey of Indigenous Education in the Province of Bombay, 1820-1830—ಇದರಲ್ಲಿ ಉದ್ಧೃತ, ಪು. ೨೧).

ಭಾರತದ ಉದ್ಧಾರಕಾರ್ಯದಲ್ಲಿ ಪಾಶ್ಚಾತ್ಯ ಮಿಷನರಿಗಳ ಪಾತ್ರವು ಅಧಿಕಾರಿಗಳಿಗಿಂತ ನೂರ್ಮಡಿ ಹೆಚ್ಚಿನದು ಎಂದು ಮುತ್ತಣ್ಣನವರು ಹೇಳಿದ್ದಾರೆ. (ಪು. ೫೭೧). ‘ಮತ ಪ್ರಸಾರವೇ ಈ ಎಲ್ಲಾ ಕ್ರೈಸ್ತ ಸಂಸ್ಥೆಗಳ ಗುರಿಯಾಗಿದ್ದಿತಾದರೂ ಅವರು ನಮ್ಮ ಒರಟುಸ್ವಭಾವ ಜನಕ್ಕೆ ನಯ, ವಿನಯ, ದಯೆ, ಧರ್ಮ ಇತ್ಯಾದಿಗಳನ್ನು.... ಕಲಿಸಿದರು” ಎಂದಿದ್ದಾರೆ. ಅವರು ಬರೆದ ಕ್ರೈಸ್ತ ಸಾಹಿತ್ಯ, ಕೋಶ–ವ್ಯಾಕರಣಾದಿಗಳನ್ನು ಬೇಸರವಿಲ್ಲದೆ ಹೊಗಳಿದ್ದಾರೆ. ಅವರು ಯಾರಿ

ಗಾಗಿ, ಯಾತಕ್ಕಾಗಿ ಇಷ್ಟೆಲ್ಲ ಮಾಡಿದ್ದು ಎಂಬ ಪ್ರಶ್ನೆಯನ್ನು ಮತ್ತೊಮ್ಮೆ ಕೇಳ ಬೇಕಾಗುತ್ತದೆ. ಶಬ್ದಕೋಶ ರಚನೆಯಂಥ ಸಾಹಿತ್ಯಕ ಕಾರ್ಯದಲ್ಲಿಯೂ ಅವರಲ್ಲಿ ಮತಪ್ರಸಾರವೇ ಮೂಲ ಪ್ರೇರಣೆಯಾಗಿದ್ದಿತೆಂಬುದಕ್ಕೆ ಮರಾಠೀ-ಇಂಗ್ಲಿಷ್ ಕೋಶವನ್ನು ರಚಿಸಿದ ಮೋಲ್ಸವರ್ಥನ ಮಾತು ನಿದರ್ಶಕವಾಗಿದೆ :

"It was undertaken not from a thirst after honour or emolument, but from a humble desire of promoting the propagation of the glorious Gospel ; and it was continued by the energy of this desire...."

ಆದರಂತೆ ಅವರು ಇಲ್ಲಿಯ ಭಾಷೆಗಳನ್ನು ಕಲಿತುದು, ಶಾಲೆಗಳನ್ನು ಸ್ಥಾಪಿಸಿದುದು, ರುಗ್ಣಾಲಯಗಳನ್ನು ನಡೆಸಿದುದು—ಇವೆಲ್ಲ ಮತಪ್ರಸಾರಕ್ಕೆ ಒಂದಿಲ್ಲೊಂದು ರೀತಿಯಲ್ಲಿ ಪೋಷಕವಾಗಲೆಂದೇ. ಅವರು ರಚಿಸಿದ ಮತೀಯ ಸಾಹಿತ್ಯವು ಪ್ರತ್ಯೇಕವಾಗಿಯೇ ಉಳಿಯಿತಲ್ಲದೆ, ದೇಶೀಯ ಸಾಹಿತ್ಯವಾಹಿನಿಯ ಮೇಲೆ ವಿಶೇಷ ಪರಿಣಾಮವನ್ನುಂಟುಮಾಡಲಿಲ್ಲವೆಂಬುದನ್ನೂ ಗಮನಿಸಬೇಕು.

ಮತಪ್ರಸಾರದ ಜೊತೆಗೆ ಕ್ರಿಶ್ಚಿಯನ್/ಪಾಶ್ಚಾತ್ಯರು ನಮ್ಮ ದೇಶದ ಸಂಸ್ಕೃತಿಯ ಮೇಲೆ ಮಾಡಿದ ದುಷ್ಪರಿಣಾಮವನ್ನು ಹಾರ್ವರ್ಡ್ ವಿಶ್ವವಿದ್ಯಾಲಯದ ಡಾ. ಪ್ರಿತಿಮ್ ಸೊರೊಕಿನ್ ಸ್ಪಷ್ಟವಾಗಿ ಚಿತ್ರಿಸಿದ್ದಾರೆ :

Western Christiandom has invaded all the other continents; its armies followed by its priests and merchants have subjugated, robbed or pillaged most of the non-Christian nations. Native American, African, Australian and Asiatic populations have been subjected to this peculiar brand of Christian 'love' which has generally manifested itself in pitiless extermination, enslavement, coercion, *destruction of the cultural values*, institutions and ways of life of the victims....Incidentally, the west did bring them a modicum of real christianity help and protection (in the form of hospital and medical services) loving sympathy, education, freedom and democracy. But these blessings were but a drop in the bucket, a mere byproduct, so to speak. (*Reconstruction of Humanity*, P. 47).

ಈ ಸಂದರ್ಭದಲ್ಲಿ ಮಿಷನರಿಗಳ ಕಾರ್ಯವನ್ನು ವಿವೇಕಾನಂದರು ಪಾಶ್ಚಾತ್ಯರ ಸಭೆಯೊಂದರಲ್ಲಿ ಮುಕ್ತಕಂಠದಿಂದ ಪ್ರಶಂಸಿಸಿದ್ದಾರೆಂದು ಹೇಳಿ, ಮುತ್ತಣ್ಣನವರು ಈ ಅವತರಣಿಕೆಯನ್ನು ಕೊಟ್ಟಿದ್ದಾರೆ (ಮುಖ ಪುಟ ಹಾಗೂ ಪು. ೫೭೧) :

If we take all the mud from the bed of Indian ocean and throw it into your faces, it will be but a mere speck in comparison to what your missionaries have done to our religion and culture.

ನಮ್ಮ ಧರ್ಮ, ಸಂಸ್ಕೃತಿಗಳ ಮೇಲೆ ಮಿಷನರಿಗಳು ಇಷ್ಟೊಂದು ರಾಡಿಯನ್ನು ಚೆಲ್ಲಿದ್ದಾರಲ್ಲ, ಅದಕ್ಕೆ ಪ್ರತಿಯಾಗಿ ಹಿಂದೂ ಮಹಾಸಾಗರದ ತಳದ ಮಣ್ಣನ್ನೆಲ್ಲ ನಿಮ್ಮ ಮುಖದ ಮೇಲೂ ಎರಚಿದರೂ, ಇದು ತೀರ ಕಡಮೆಯಾಯಿತು-ಎಂಬುದಾಗಿ ವಿವೇಕಾನಂದರು ಖಂಡತುಂಡವಾಗಿ ಮಿಷನರಿಗಳ ಕಾರ್ಯಗಳನ್ನು ಹೀಗಳೆದಿದ್ದಾರೆ. ಮುತ್ತಣ್ಣನವರು ಅಷ್ಟರಮಟ್ಟಿಗಿನ ಅರ್ಥವನ್ನು ಸಹ ಮಾಡಿಕೊಳ್ಳದೇ ಹೋದುದಕ್ಕೆ ನಗಬೇಕೋ, ವಿಷಾದಪಡಬೇಕೋ ತಿಳಿಯದಾಗಿದೆ.

ಪಾಶ್ಚಾತ್ಯರು ಭಾರತ/ಕರ್ನಾಟಕಕ್ಕೆ ಬಂದು ಕೈಗೊಂಡ ಬಹುಮುಖ ಚಟುವಟಿಕೆಗಳಿಂದ ಕಂಡಿತವಾಗಿಯೂ ನಮಗೆ ಪ್ರಯೋಜನವಾಗಿದೆ. ಅದನ್ನು ನಾವು ಸ್ಮರಿಸದಿದ್ದರೆ ಕೃತಘ್ನರೆನಿಸಿಯೇವು. ಆದರೆ ವಸ್ತುತಃ ಅವರು ನಮಗಾಗಿ, ನಮ್ಮ ಏಳ್ಗೆಗಾಗಿಯೆಂದೇ ಮಾಡಲಿಲ್ಲ. ತಮ್ಮ ಉದ್ದೇಶ ಸಾಧನೆಗಾಗಿ, ಮತೀಯ ಸ್ವಾರ್ಥಕ್ಕಾಗಿ ಅವೆಲ್ಲ ಕಾರ್ಯವನ್ನು ಕೈಕೊಂಡರು. ಆದರೆ ಸೊರೊಕಿನ್ ಹೇಳಿದಂತೆ ಅವೆಲ್ಲ By productನ ಸ್ವರೂಪದಲ್ಲಿ ಭಾರತೀಯರ ಪ್ರಯೋಜನಕ್ಕೂ ಒದಗಿದುವು. ಅಷ್ಟರ ಮಟ್ಟಿಗೆ ಅವರ ಕಾರ್ಯವನ್ನು ಅವಶ್ಯವಾಗಿ ಮೆಚ್ಚೋಣ. ಆದರೆ ಅವರು ನಮ್ಮ ಉದ್ಧಾರಕ್ಕಾಗಿಯೇ ಅವತರಿಸಿದರೆಂದೂ, ಆ ಮೊದಲು ಭಾರತೀಯರು ಷಂಡರೂ, ಅಜ್ಞಾನಿಗಳೂ, ಯಾತಕ್ಕೂ ಬಾರದವರೂ ಆಗಿ ಜೀವನವನ್ನು ನಡೆಯಿಸುತ್ತಿದ್ದರೆಂದೂ ಪ್ರತಿಪಾದಿಸುವುದು ಅತ್ಯಂತ ಖಂಡನೀಯವಾದುದು. ಹಾಗೆ ನೋಡಿದರೆ ಪಾಶ್ಚಾತ್ಯ ಸಂಪರ್ಕ ಹಾಗೂ ಬ್ರಿಟಿಷ್ ಆಡಳಿತೆಯಿಂದ ನಮಗೆ ಉಪಕಾರಕ್ಕಿಂತ ಒಟ್ಟಿನಲ್ಲಿ ಅಪಕಾರವೇ ಹೆಚ್ಚಾಗಿ ಆಗಿದೆ. ಅದಕ್ಕೆ ದೊಡ್ಡ ನಿದರ್ಶನವೆಂದರೆ ಮುತ್ತಣ್ಣನವರ ಈ ವಿಚಾರಸರಣಿಯೇ! ನಮ್ಮ ಭಗವಂತನು ಹತ್ತನೆಯ ಅವತಾರವನ್ನು ತಾಳಲು ಇನ್ನೂ ಯೋಚಿಸುತ್ತಿರುವಾಗಲೇ ಮುತ್ತಣ್ಣನವರು ಈ ಹನ್ನೊಂದನೆಯ ಅವತಾರವನ್ನು ಸೃಷ್ಟಿಸಿ, ಮುಂದಿರಿಸಿದುದು ದುಡುಕಿನ ಕೆಲಸವಾಯಿತಲ್ಲವೆ ?

ಹೊಸಗನ್ನಡದ ಅರುಣೋದಯ ಕಾಲದಲ್ಲಿ ಪಾಶ್ಚಾತ್ಯರು ಕೈಗೊಂಡ ಸಾಹಿತ್ಯ ಕಾರ್ಯವು ನಿಜಕ್ಕೂ ಬೆಲೆಯುಳ್ಳದ್ದಾಗಿದೆ. ಅದರ ಸಮರ್ಪಕವಾದ ಪರಿಚಯವು ದೊರೆಯುವುದೆಂಬ ಆಶೋತ್ಸಾಹಗಳಿಂದ ಈ ಗ್ರಂಥದ ಪುಟಗಳನ್ನು ಓದುತ್ತ ನಡೆದಂತೆ ನಮಗೆ ಕೊನೆಯಲ್ಲಿ ಅತೀವ ನಿರಾಸೆಯಾಯಿತು. ಕೆಲವು ಅಪೂರ್ವ ಪುಸ್ತಕಗಳ ಛಾಯಾಚಿತ್ರಗಳು ಮತ್ತು ಆ ಪುಸ್ತಕಗಳ ಕೆಲವು ಅವತರಣಿಕೆಗಳು—ಇವನ್ನು ಬಿಟ್ಟರೆ, ಮಿಕ್ಕೆಲ್ಲ ದೃಷ್ಟಿಯಿಂದ ಈ ಗ್ರಂಥವು

ನಿಷ್ಪ್ರಯೋಜಕವಾದುದೆಂದು ಹೇಳದೆ ವಿಧಿಯಿಲ್ಲ. ಅಜ್ಞಾನಾಂಧಕಾರಗಳಲ್ಲಿ ತೊಳಲುತ್ತಿದ್ದ ಭಾರತೀಯರನ್ನು ಉದ್ಧಾರಮಾಡುವುದಕ್ಕೆಂದೇ ಪಾಶ್ಚಾತ್ಯರು ಬಂದರೆಂಬ ಘಾತುಕ ವಿಚಾರಸರಣಿಯನ್ನು ಬಿಟ್ಟುಕೊಟ್ಟು, ಅವರು ಕೈಗೊಂಡ ವಿವಿಧ ಸಾಹಿತ್ಯದ ಚಟುವಟಿಕೆಗಳನ್ನು, ಆಗಿನ ಸ್ಥಿತಿಗತಿಯ ಹಿನ್ನೆಲೆಯಲ್ಲಿ ಸತ್ಯನಿಷ್ಠವಾಗಿ ವಿವರಿಸಿದ್ದರೆ, ಆ ವಿದ್ವಾಂಸರಿಗೂ ಕನ್ನಡಬಾಂಧವರಿಗೂ ಕೂಡಿಯೇ ಉಪಕಾರಮಾಡಿದಂತಾಗುತ್ತಿತ್ತು.*

* ಈ ಪರಾಮರ್ಶೆಯನ್ನು ಬರೆಯುವಲ್ಲಿ ಕೆಲವು ಸಲಹೆಗಳನ್ನು ನೀಡಿದ ಡಾ. ಸಿ. ಎಂ. ಕುಲಕರ್ಣಿ ಅವರ ನೆರವನ್ನು ಇಲ್ಲಿ ಸ್ಮರಿಸುತ್ತೇನೆ.

ಎಚ್. ಎಸ್. ಕಾತ್ಯಾಯಿನಿ

# ಚಿತ್ರಾ

ಚಿತ್ರಾಳ ಮನಸ್ಸು ಚಿತ್ರದ ಸೌಂದರ್ಯದಲ್ಲಿ ಸೇರಿಹೋಗಿತ್ತು. ಬೆರಳು ಕುಂಚವನ್ನು ಹಿಡಿದಿದೆ. ಅದರ ತುದಿಯ ಬಣ್ಣದ ಕೆಲಸವನ್ನು ನೋಡಿ, ಮನಸ್ಸು ಮುಗ್ಧವಾಗಿ ನೂರೊಂದು ಕನಸುಗಳನ್ನು ಹೆಣೆಯುತ್ತಿತ್ತು.

ತೋಳು ತೋಳ ಬಳಸಿದೆ. ಬೆರಳು ಬೆರಳ ಬೆಸೆದಿದೆ. ಪ್ರೇಮದ ಹೊಡೆತ ನಾಡಿಯ ಮಿಡಿತದಲ್ಲಿ ಮಿಳಿತವಾಗಿದೆ. ಸೌಂದರ್ಯ! ಗಾಂಭೀರ್ಯ! ತಲೆಯೆತ್ತಿ ನಿಂತಿವೆ. ಆಕಾಶದಲ್ಲಿ ಆಡುವ ಆತ್ಮಗಳೇ? ಆಕಾಶದೆತ್ತರ ಸೌಂದರ್ಯವೇ? ಮುಗಿಲ ಮರೆಸುವಷ್ಟು ಗಾಂಭೀರ್ಯವೇ? ಸುಖ ಶಾಂತಿಯಲ್ಲಿ ಆಶ್ರಯ ಹೊಂದಿದೆ. ಪ್ರೇಮ ಪವಿತ್ರತೆಯಲ್ಲಿ ಮಿಳಿತವಾಗಿದೆ. ಸೌಂದರ್ಯ ಗಾಂಭೀರ್ಯವನ್ನು ಒರಗಿದೆ.

ಎಂಥಾ ಶಾಂತಿ! ಸ್ಥಿರ, ಅಮಿತ-ಅಚಲ. ಮನೋಹರವಾಗಿದೆ ದೃಶ್ಯ. ಆ ಜೋಡಿ, ಜೋಡಿ ತೆಂಗಿನಮರ. ಅಲುಗಾಡದೆ ನಿಂತಿವೆ. ಕಾಂಡ ಕಾಂಡ ತಾಕಿದೆ. ಗರಿಗರಿ ಬೆಸೆದಿವೆ. ಹತ್ತಿರ-ಬಹಳ ಹತ್ತಿರ ಮನಸ್ಸುಗಳು. ಅದೋ? ಹೃದಯ ಹೃದಯವನ್ನು ಹಿಂಬಾಲಿಸಿದೆಯೇನು? ರೆಕ್ಕೆ ರೆಕ್ಕೆ ಮುಟ್ಟಿವೆ. ಹಾರುತ್ತಿವೆ. ಮುಗಿಲ ತುಂಬುವ ಉತ್ಸಾಹದಿಂದ ಮುಕ್ತಮನಸ್ಸಿನಿಂದ ರೆಕ್ಕೆ ಬಿಚ್ಚಿ ಹಾರುತ್ತಿವೆ. ಎಲ್ಲಿಗೆ ಆ ಜೋಡಿ? ಗೂಡಿಗೆ. ಅದೋ ಅಲ್ಲಿ. ತೆಂಗಿನಮರದ ಜೋಡಿ ದಾಟಿ ಆ ಗುರಿ. ಗುರಿಯನ್ನು ಸೇರಲು, ಮೈಯ ಬಲವೆಲ್ಲ ಸೇರಿಸಿ, ಮನಸ್ಸಿನ ಚೈತನ್ಯವನ್ನೆಲ್ಲ ಕೂಡಿಸಿ ರೆಕ್ಕೆ ಹೊಡೆಯುತ್ತಿವೆ. ಗುರಿಯಿದೆ ಹಕ್ಕಿಗಳಿಗೆ-ಗೂಡಿದೆ ಪುಟ್ಟದು.

ಅನಂತವಾದ ಆಕಾಶ. ಇತಿ ಇಲ್ಲ, ಮಿತಿ ಇಲ್ಲ, ತೇಲಿತೇಲಿ ದೂರ ಹೋದ ಮೋಡಗಳ ಹಿಂದೆ, ಕಾಣುತ್ತಿದೆ. ಅಚಲವಾದ ಆನಂದಮಯವಾದ ಶಾಂತಿಯೇ ತುಂಬಿದೆ ಮೇಲೆ—ಕೆಳಗೆ?

ಓ! ಸೌಖ್ಯದ ನೆಲೆ—ಹಸಿರು ನೀಲಿ ಹೊಂಬಣ್ಣ ಕೆಂಬಣ್ಣಗಳ ವಿಧವಿಧವಾದ ಹಸೆಯಿಟ್ಟು ನಿಂತಿದ್ದಾಳೆ ಸೃಷ್ಟಿ. ಭೂದೇವಿ—ಓ! ಏನು ಅಂದ! ಏನು ಚಂದ! ಸೌಂದರ್ಯಗಾಂಭೀರ್ಯಗಳ ನೆಳಲಲ್ಲಿ ಸೌಖ್ಯ ಹರಡಿದೆ.

ಚಿತ್ರಾಳ ಮನಸ್ಸಿನಿಂದ ಸುಪ್ತ ಬಯಕೆಯೊಂದು ಏಳತೊಡಗಿತು. ಕನಸು ಕೈಗೆ ಸಿಕ್ಕಿದಂತಾಗಿ ಮುಗುಳುನಗೆಯೊಂದು ಮೆಲ್ಲನೆದ್ದಿತು. ನೆಲದ ಮುಗುಳುನಗೆಯಂತೆ, ಹರಡಿದ ಹಸಿರು, ಎಳೆಹಸುರಿನ ಹೊಲವನ್ನು ಕುಂಚದ ಎಳೆಗಳು ಮೂಡಿಸಿದುವು. ಅಲ್ಲಲ್ಲಿ ಹಚ್ಚನೆಯ ಅತಿಹಚ್ಚನೆಯ ಅಚ್ಚ ಪಚ್ಚೆಬಣ್ಣದ, ಸಣ್ಣಸಣ್ಣ ಗಿಡಗಳ ಸೊಂಪಾದ ಗುಂಪು. ಬಾಸುಸೂಸಿದ ಆನಂದವನ್ನು ಹೀರಲೆಂದು ಕಾತರಿಸಿ ನಿಂದಿರುವ ಕಂದುನೆಲ.

ಚಿತ್ರಾಳ ಬೆರಳು ಆಡಲಾಶಿಸಿದವು ಕಣ್ಣ ಮುಂದಿನ ಕೊಳದ ತಿಳಿನೀರಲ್ಲಿ. ಕುಂಚ ಕುಡಿದ ನೀರನ್ನು ಕೂಡಿಸಿಟ್ಟಂತೆ ಕಾಣಿಸಿತು, ತಿಳಿಗೊಳ ಚಿತ್ರದಮೇಲೆ. ಅಲುಗಿಯೂ ಅಲುಗದಂತೆ, ತೃಪ್ತವಾದ ಪ್ರೇಮದಂತೆ, ನಗುಸೂಸುತ್ತಿರುವ ತಿಳಿ ನೀರು. ಕಡಲ ಆಂದೋಳನವಿಲ್ಲ. ಹೊಳೆಯ ಹರಿದಾಟವಿಲ್ಲ. ತನ್ನ ಸಿದ್ಧಿ ತಾನು ಸಾಧಿಸಿರುವಂತೆ ತೋರುವ ಕೊಳ. ಬಣ್ಣ ಬಂತು. ಹೊರಬಣ್ಣ ಬಂತು. ಚಿತ್ರಾಳ ಕಣ್ಣು ಹೊಳೆದುವು.

ಅದೋ ಇಳಿದ ರವಿ. ಬೆಟ್ಟವೆರಡರ ಮಧ್ಯೆ ಇಳಿಯುತ್ತಿದ್ದಾನೆ. ಗುಡ್ಡದ ಮಣ್ಣೆಲ್ಲ ಹೊನ್ನಾಗಿ ಹೊಳೆಯುತ್ತಿದೆ. ತೆಂಗಿನ ಗರಿಗರಿಯೂ ಹೊನ್ನೀರಿನಲ್ಲಿ ಅದ್ದಿ ಏಳುತ್ತಿವೆ. ಕರಿಯ ಪಕ್ಕಗಳು ಸ್ವರ್ಣದ ಪಕಳೆಗಳಾಗುತ್ತಿವೆ. ಚಿನ್ನವನ್ನೇ ಕರಗಿಸಿ ಕಟ್ಟೆಯ ನಡುವೆ ಹಿಡಿದಂತಿದೆ. ಶಾಂತಿಯ ನೀಲಿಯನ್ನು ಮೀರಿ, ಆತ್ಮದ ಜ್ಯೋತಿ ಬೆಳಗುತ್ತಿದೆ. ಚಿತ್ರಾಳ ಹೃದಯದ ಚೈತನ್ಯ ಉಕ್ಕಿ ಬಂತು. ಕಣ್ಣಲ್ಲಿ ನಿಂತು ಚಿತ್ರದ ಸೌಂದರ್ಯವನ್ನು ಹೀರತೊಡಗಿತು.

ಸುಂದರ, ಸುಮಧುರ, ಸುಖಕರವಾದ ಮನೋಹಾರಿ ದೃಶ್ಯ. ಆನಂದ ಕಣ್ಮನಗಳನ್ನು ತುಂಬುತ್ತಿದೆ. ಕಣ್ಣು ಸೃಷ್ಟಿಯ ವಿಶಾಲವೈಭವದ ದೃಶ್ಯವನ್ನು ಕಾಣುತ್ತಿದೆ. ಆ ದೃಶ್ಯದ ನೆನಪನ್ನು ಪ್ರಚೋದಿಸುವ ಸುಂದರ ಸೂಚಕ ಚಿತ್ರ ವನ್ನು ಕೈ ಬಿಡಿಸುತ್ತಿದೆ.

ಅಲುಗದ ಜೋಡಿ ತೆಂಗಿನಮರ. ನೀಲ ವಿಶಾಲ ಆಕಾಶ. ಹಸಿರಾದ ನೆಲ. ಅಲುಗದ ಕೆರೆ. ಹಾರುವ ಹಕ್ಕಿಗಳು. ಬೆಟ್ಟಗಳ ಮಧ್ಯೆ ಇಳಿಯುತ್ತಿರುವ ರವಿ. ಮತ್ತೇನು ಬೇಕು? ಎಷ್ಟು ದೊಡ್ಡ ಮರಗಳು? ಎಷ್ಟು ಮುದ್ದಾದ ಹಕ್ಕಿಗಳು? ಹೃದಯ ಹೃದಯ ಕೂಡಿದ ಆಕಾಶ ಭೂಮಿಗಳು. ಚೈತನ್ಯ ತುಂಬಿ ತುಳುಕುವ ಕೊಳ. ಸೌಂದರ್ಯ ಸೆರೆಯಾಗಿದೆ. ಅದ್ಭುತಸೃಷ್ಟಿಯ ರಮ್ಯತೆ ಅಲ್ಲಿ-ಅಲ್ಲಿ-ಚಿಕ್ಕ ಪೆಟ್ಟಿಗೆಯ ಉಪಯೋಗವಿಲ್ಲದ ಖಾಲಿ ಹೊದಿಕೆಯ ಮೇಲೆ ಅಬ್ಬಾ! ಸಾರ್ಥಕವಾಯ್ತು ಪ್ರಯತ್ನ. ಚಿತ್ರಾ ಹಿಡಿದ ಉಸಿರನ್ನು ಹಗುರವಾಗಿ ಹೊರಚೆಲ್ಲಿದಳು.

ಸೃಷ್ಟಿಯ ಸೌಂದರ್ಯದ ಸಾವಿರದ ಒಂದು ಭಾಗ ಇಲ್ಲಿದೆಯೇ? ರವಿಯ ಸಹಸ್ರಾರು ಕಿರಣಗಳಲ್ಲಿ ಒಂದು ಕಿರಣ ಇಲ್ಲಿಳಿದಿದೆಯೇ? ಚಿತ್ರಾಳ ಮನಸ್ಸು

ಹೋಗಿತು. ಇರಲೊಲ್ಲದೇಕೆ? ಕಾಣಲೊಲ್ಲದೇಕೆ? ಕಾಣದಿದ್ದರೆ, ಕಣ್ಣನ್ನು ಮುಾರಿ, ಮನಸ್ಸು ಮೆಲುಕು ಹಾಕಲಾರದೇಕೆ? ಚಿತ್ರಾ ಕನಸು ಕಂಡಿದ್ದಳು, ಕೈಯಾಡಿಸಿದ್ದಳು. ಕನಸನ್ನು ಮತ್ತೆ ನೆನೆದಿದ್ದಳು.

ಕಾಣುವ ಚಿತ್ರದಲ್ಲಿ ಆನಂದವೆಷ್ಟು? ಬರೆವ ಮುನ್ನ ಹೊಮ್ಮಿದ ಆನಂದವೆಷ್ಟು? ಬರೆಯುವಾಗ ಮನಸ್ಸಿನೆದುರು ಹಾಯ್ದ ರಮ್ಯತೆಯೆಷ್ಟು? ಓ! ಸಾಕಷ್ಟು ಸಾರ್ಥಕವಾಗಿದೆ. ಅರ್ಧ ಗಂಟೆ ಚಿತ್ರಾಳ ಹೃದಯ ಆನಂದದಲ್ಲಿ ಈಸಾಡಿದೆ. ಆತ್ಮ ತೃಪ್ತಿಯಲ್ಲಿ ಸೇರಲೆಳಸಿದೆ. ಪ್ರೇಮ ಹೊಳೆದು, ಕರೆದು ಮರೆಯಾಗಿದೆ; ಹೌದು-ಹೊಳೆದು ಸುಳಿದು ಮರೆಯಾಗಿದೆ. ಚಿತ್ರಾಳ ಕಣ್ಣು ಮಸಕಾಯ್ತು. ಕಂಬನಿ ತುಂಬಿತು.

ಕಂಬನಿ ತುಂಬಿತು. ಕೆರೆ ತುಳುಕಿತು. ಅಲೆ ಎದ್ದು ಹೊಯ್ದಾಡತೊಡಗಿದೆ. ಅಲೆಯೆದ್ದಿದೆ. ಆಳೆತ್ತರ ಭೋರ್ಗರೆಯುತ್ತಿದೆ. ಕೊಳವೋ? ಕೆರೆಯೋ? ಕಡಲೋ? ಓ ಗಾಳಿ-ಬಿರುಗಾಳಿ ತೂರಿ ಬರುತ್ತಿದೆ. ಹಾರಿಸಿ ಬರುತ್ತಿದೆ. ಗರಿಗರಿ ಸುಯ್ದಾಡಿ ಹೊಡೆದಾಡಿ ಬಾಗಿ ಬಳುಕಿ ಮುರಿದು ಹೋಗುವುವೋ ಎಂಬಂತೆ ಹೊಯ್ದಾಡುತ್ತಿದೆ. ಹಕ್ಕಿಗಳು ದಿಕ್ಕುಗೆಟ್ಟು ಆಕಾರ ಕಳೆದುಕೊಂಡು ಆಕಾಶದಲ್ಲಿ ಮರೆಯಾಗುತ್ತಿವೆ. ಮೋಡ, ಕಪ್ಪಾದ ಮೋಡ. ದೊಡ್ಡ ಮೋಡ. ಅಚ್ಚಕಪ್ಪಾಗಿ ಕಾಗೆಗಿಂತ ಕಪ್ಪಾಗಿ, ಬೆಳೆದು ಆಕಾಶವೆಲ್ಲಾ ತುಂಬಿ ನಿಲ್ಲುತ್ತಿದೆ. ಅದೋ ತುಂಬಿತು. ತುಂಬಿತು ಅದರ ಪಡಿನೆಳಲು. ಇಗೋ ಇದರ ನೆಲದ ಕೊಳದ ಹೃದಯವನ್ನೆಲ್ಲಾ ಆವರಿಸಿ ಕಪ್ಪಾಗಿ ಮಾಡುತ್ತಿದೆ. ನಗುನಗುತ್ತಿದ್ದ ಚಿನ್ನದಂತಹ ಹೂಗಳು ತೊಟ್ಟು ಕಳಚಿ ಬಿದ್ದು ಮರೆಯಾಗುತ್ತಿವೆ. ಎಲೆಗಳೆಲ್ಲಾ ಕಲಸಿ ಕಪ್ಪಾಗುತ್ತಿವೆ. ಚಿತ್ರಾಳ ಎದುರಿಗೆ ದೋಣಿ ಕಂಡಿತು.

ಓ! ದೋಣಿ? ಅದೋ-ದಾರಿ ತಪ್ಪುತ್ತಿದೆ. ಅಲ್ಲಾಡುತ್ತಿದೆ. ಚಿತ್ರ ಕಲಕಿತು. ಮರ ಹಕ್ಕಿ ಬೆಟ್ಟ ರವಿ ಎಲ್ಲಾ ಕಲಸಿಹೋದುವು. ಬಿರುಗಾಳಿ! ಎಂಥಾ ಗಾಳಿ! ಚಿತ್ರಾಳ ಮನಸ್ಸು ಹೊಯ್ದಾಡಿತು. ಉಸಿರು ಕಟ್ಟಬಂತು. ದೋಣಿಗಾಗಿ ಹೆದರಿತು. ಎಂಥಾ ಗಾಳಿ? ಸುಂದರ ಚಿತ್ರವನ್ನು ಮಸಿ ನುಂಗಿತು. ಚಂದ್ರನನ್ನು ರಾಹು, ಸೂರ್ಯನನ್ನು ಕೇತು ಹಿಡಿದಂತೆ ನುಂಗಿಹೋಯ್ತು ಚಿತ್ರ. ಬರಿಯ ಹಾಳೆ! ಕರಿಯ ಹಾಳೆ ಬಿಳಿದಾದ ಹಾಳೆ. ಬಣ್ಣ ತುಂಬಿಸಿಕೊಂಡು ನಕ್ಕು, ಚಿತ್ರ ಹಿಡಿದು ಮೆರೆದು ಕಪ್ಪಾಗಿ ಕಾಣದಾಯ್ತು. ಖಾಲಿ ಮೊಟ್ಟೆಯ ಹೊದಿಕೆ ಸೃಷ್ಟಿಯನ್ನೇ ತೊಟ್ಟು, ಒಟ್ಟಾಗಿ ಮರೆಯಾಗಿತ್ತು.

ಯಾಕೆ? ಯಾಕೆ? ನಿಧಿಯನ್ನು ಕಳೆದುಕೊಂಡವಳಂತೆ ಚಿತ್ರಾ ಕೇಳಿದಳು. ಹಾರಿ ಉತ್ತರ? ನಿಂತ ಮರ ಛಾಯೆಯಂತಿವೆ. ಜೀವಹೋದ ದೇಹದಂತಿವೆ. ಹಾರಿ ಹೋದ ಹಕ್ಕಿಯ ಜಾಡು ಮಸಕಾಗಿದೆ. ಬಣ್ಣಗೆಟ್ಟ ರವಿ ಇಳಿದಿಲ್ಲ ಪೂರ್ತಿ. ಕಾರಣ?

ಓ ಗಾಳಿ! ಬಿರುಗಾಳಿ. ಇದು ಉತ್ತರ. ಎಲ್ಲಿ? ಸೃಷ್ಟಿಯಲ್ಲೆ? ಮರಗಳ ಜೋಡಿ ರೂಪುಗೊಂಡಾಗ ಚಿತ್ರ ಸುಂದರವಾಗಬಲ್ಲುದೆಂಬ ನಂಬಿಕೆ ಬಂತು. ಹಕ್ಕಿ ಯೆರಡರ ರೆಕ್ಕೆ ಮೂಡಿದಾಗ ಚಿತ್ರಾಳ ಆಸೆ ತಲೆಯೆತ್ತಿತು. ನೀಲ ಆಕಾಶ, ವಿಶಾಲ ನೆಲ ಸಮ್ಮಿಳಿತವಾದಾಗ ಹೆಮ್ಮೆ ಮೂಡಿತು. ಚಿಕ್ಕದೋಣಿಯೊಂದು, ಪುಟ್ಟ ಅಲೆಗಳ ಮೇಲೆ ತನ್ನದೇ ಪ್ರತೀಕ ನಿರ್ಮಿಸಿ ನಿಂತಾಗ, ಮರೆತಿದ್ದ ಹೆಬ್ಬಯಕೆಯೊಂದು ಜೀವಕ್ಕೆ ಜೀವವಾಗಿ ನಿಲ್ಲಬಲ್ಲ ಸಂಗಾತಿಯನ್ನು ನೆನಪು ಮಾಡಿತ್ತು. ಗುಡ್ಡವೆರಡರ ನಡುವೆ ಇಳಿಯುತ್ತಿದ್ದ ರವಿ ಹೃದಯವೆರಡರ ಮಧ್ಯೆ ಬೆಳಗಿ ಮರೆಯಾದ ಉಜ್ವಲ ಕನಸೊಂದನ್ನು ಪುನಃ ನಿರ್ಮಿಸಿತ್ತು. ಚಿತ್ರ ಚೆನ್ನಾಗಿತ್ತು. ನಿಜವಾಗಿ ಚೆನ್ನಾಗಿತ್ತು. ಚಿತ್ರಾಳ ಮನಸ್ಸೂ ಸುಮಧುರವಾಗಿತ್ತು. ಬಯಕೆಯೊಂದು ನೆನಪಿನ ತಳದಲ್ಲೇ ಉಳಿದಿತ್ತು. ಆ ಚುಕ್ಕಿ, ಆ ಎರಡು ಚುಕ್ಕಿ. ಕರಿಯ ಚುಕ್ಕಿ. ದೋಣಿಯಲ್ಲಿ ಅವನ್ನು ಬರೆಯುವಾಗ ಮಸಿ, ಕಪ್ಪುಮಸಿ—ಮಸಿಯ ದೊಡ್ಡ ಅವಾಂತರವೇ ಆಗಿಹೋಯ್ತು. ಚಿಕ್ಕ ಚುಕ್ಕಿ ದೊಡ್ಡದಾಯ್ತು—ದೋಣಿ, ಕೆರೆ, ನೆಲ, ಮರ, ಮುಗಿಲು ಒಂದೊಂದಾಗಿಯೇ ಅಲ್ಲಿ ಒಮ್ಮೆಗೇ ಒಟ್ಟಿಗೇ, ನುಂಗಿಬಿಟ್ಟಿತು. ಯಾಕೆ? ಗಾಳಿಯಿಂದ. ಎಲ್ಲಿ? ಬಿರುಗಾಳಿ? ಇಲ್ಲ–ನೆಲ ಅಲುಗಿಲ್ಲ. ಮುಗಿಲು ಉಳಿದಿದೆ. ಮರ ನಿಂತಿವೆ. ಬಿರುಗಾಳಿ ಸೃಷ್ಟಿಯಲ್ಲಿಲ್ಲ. ಬರಿಯ ಗಾಳಿಯಿದೆ. ಹಿತವಾದ ಗಾಳಿ. ಮಿತವಾದ ವೇಗ. ಜನ ಉಸಿರಾಡುತ್ತಿದೆ. ತನಗೆ ಉಸಿರು ಕಟ್ಟಿಲ್ಲ. ಪ್ರಾಣ ಹೋಗಿಲ್ಲ. ಜನಜನವೇ ಒಟ್ಟಾಗಿ ಉರುಳಿಲ್ಲ. ಮತ್ತೆ? ನನಗೇ ನನಗೊಬ್ಬಳಿಗೇ ಬಿರುಗಾಳಿ? ನನ್ನ ಸುತ್ತಲೇ? ಚಿತ್ರಳ ಗಮನ ತನ್ನ ಸುತ್ತ ಹರಿದಾಡಿತು. ಛೇ. ಕುಂಚ ಕೆದರಿಲ್ಲ. ಬಣ್ಣ ಕದಡಿಲ್ಲ. ಮತ್ತೆ? ಓ? ನನ್ನೊಳಗೆ ಎಂದು ಕೊಂಡಳು ಚಿತ್ರಾ.

ನನ್ನ ಹೃದಯದೊಳಗೆ: ಓ! ಭೂಕಂಪಕ್ಕೆ ಭೂಮಿ ಅಲುಗಿದಂತೆ ಎದೆ ಅಲ್ಲಾಡಿಹೋಯ್ತು. ಬಿರುಗಾಳಿ ಭೋರಿಟ್ಟಿತು. ತನ್ನ ಹೃದಯದಲ್ಲಿ ಕಂಡ ಚಿತ್ರವನ್ನು ಕದಡಿ ಕಪ್ಪುಹೊಯ್ದಿತು. ಅಯ್ಯೋ ಎಂದು ನರಳಿದಳು ಚಿತ್ರಾ. ವ್ಯರ್ಥ. ದಿನದ ಶ್ರಮ ವ್ಯರ್ಥ. ಅಸಹನೆ, ಅಸಹ್ಯವಾದ ರೂಪಹೊತ್ತು, ಅಸಾಧ್ಯ ವೇಗದಿಂದೆದ್ದು, ಅಪಾರ ಸುಂದರವಾದ ಚಿತ್ರವನ್ನೆಲ್ಲಾ ಬುಡಮೇಲಾಗಿಸಿತ್ತು. ಹಾಳು ಮಸಿ, ಏನು ಕಪ್ಪು? ಎಂಥ ಕೆಟ್ಟಕಪ್ಪು. ಕಾಗೆಗಿಂತ ಕಪ್ಪು. ಗೂಬೆಯ ಕಣ್ಣನ್ನೇ ಕಟ್ಟುವಷ್ಟು ಕಪ್ಪು. ಕ್ರೂರ ರಾಕ್ಷಸನ ಕೆಟ್ಟ ಒಡಲಿನ ಒಳಗಡೆಗಿಂತ ಕಪ್ಪು. ಲೋಕಲೋಕಗಳನ್ನೇ ನುಂಗುವಂತಹ ಕಾಲರಾತ್ರಿಗಿಂತ ಕಪ್ಪು. ಪುಣ್ಯರಾಶಿಯನ್ನೇ ನುಂಗುವಂತಹ ಪಾಪಮಯ ಕೂಪದಂತೆ, ನರಕದಂತೆ, ಪ್ರಳಯದ ಕಾರ್ಮುಗಿಲಿಗಿಂತ ಕಪ್ಪು. ಅಸಹ್ಯವಾದ ಅಸಹನೆ. ಏಕೆ? ಚಿತ್ರಾ ತನ್ನೊಳಗೇ ಹೇಸಿದಳು.

ಮರಮರಗಳೊಂದಾಗಿ ಬೆಳೆದುವೆಷ್ಟು? ಜತೆಗೂಡಿ ಹಾರಿ ಹಾರಿ ತಣಿದ

ಹಕ್ಕಿಗಳೆಷ್ಟು? ಬೆಟ್ಟಬೆಟ್ಟದ ನಡುವೆ ಮರೆಯಾದ ಸೂರ್ಯಾಸ್ತಮಯಗಳೆಷ್ಟು? ನೆರಳೊಡನೆ, ನೆಲೆನಿಲ್ಲದೆ ತೇಲಿಹೋದ ನಾವೆಗಳೆಷ್ಟು? ಬೆಳೆದು, ಅರಳಿ, ಪರಿಮಳ ಬೀರಿ ಸದ್ದಿಲ್ಲದೆ ಸಾವನ್ನಪ್ಪಿದ ನಿಸ್ಪೃಹ ಹೃದಯದ ಹೂಗಳೆಷ್ಟು?

ಓ! ಎರಡು ಬರಿಯ ಕರಿಯ ಚುಕ್ಕಿ. ಅದಕ್ಕೆಷ್ಟು ಅಸಹನೆ. ಇಡಿಯ ಚಿತ್ರ ನುಂಗುವ ಬಿರುಗಾಳಿ. ಬಣ್ಣ ಅಂದಗೆಟ್ಟಿತು. ಚಿತ್ರವನ್ನು ಮಸಿ ನುಂಗಿತು —ಕರಿಯ ಚುಕ್ಕಿ! ನಾವೆಯೊಂದು ಬಂಡೆಗೆ ತಗಲಿ ನಿಂತರೆ ನಾವೆನಾವೆಯೂ ನಿಲ್ಲಬೇಕೇನು? ತನ್ನ ಕನಸೊಂದು ಒಡೆದರೆ ಜೀವಜೀವಗಳ ಕೋಟಿ ಕನಸುಗಳೂ ಮರೆಯಾಗಬೇಕೇ? ಚುಕ್ಕಿ ಎರಡರ ಮೇಲೆ ಉಂಟಾದ ಅಸಾಧ್ಯ ಅಸಹ್ಯ ಅಸಹನೆಯ ಕಪ್ಪು ಇಡೀ ಚಿತ್ರವನ್ನೇ ನುಂಗಬೇಕೇ? ರವಿಚಂದ್ರರಿಗೆ ಛಾಯೆ ಬಿದ್ದಾಗ ಸೃಷ್ಟಿಯನ್ನು ಕರಾಳ ಮೃತ್ಯು ಕಬಳಿಸುವುದಿಲ್ಲ. ರವಿಯ ಕಿರಣ ಕಿರಣವೂ ಯುಗಯುಗದಿಂದ ಚೆಲ್ಲಿದರೂ ಸೃಷ್ಟಿ ಸಾಗುತ್ತಿದೆ. ಬೆಳಕು ಅಡಗಿಲ್ಲ. ಚಂದ್ರನಿದ್ದೋ? ತಾರೆಗಳಿದ್ದೋ? ತಾನು ಕಣ್ಣುಮುಚ್ಚಿದಾಗ ಜಗದಕಣ್ಣ ಬೆಳಕನ್ನೆ ಚಂದ್ರರವಿತಾರೆಗಳನ್ನೇ ಜಗದ ತಂದೆ ಕಸಿದುಕೊಳ್ಳಬೇಕೇನು?— ಚಿತ್ರಾ ತನ್ನಲ್ಲಿ ತನಗೇ ವಿವರಿಸಿಕೊಳ್ಳಹತ್ತಿದಳು.

ಎಂಥ ಅಸಹ್ಯಕಪ್ಪು ನಿನ್ನ ಹೃದಯದಲ್ಲಿ. ನೀನೊಂದು ಕರಿಯ ಚುಕ್ಕಿ. ವಿಶಾಲ ವಿಶ್ವದಲ್ಲಿ ನೀ ಬರಿಯ ಚುಕ್ಕಿ ನೆನಪಿರಲಿ ಎಂದು ತನಗೇ ಯಾರೋ ಹೇಳಿದಂತಾಯ್ತು. ಚಿತ್ರ ಏನಾಯ್ತು ಎಂದು ಚಿತ್ರಾ ನೋಡತೊಡಗಿದಳು ಮತ್ತೆ.

ಬಿರುಗಾಳಿ ನಿಂತಿತು. ನೀರು ತಿಳಿಯಾಗಿತ್ತು. ತೆಂಗಿನ ಜೋಡಿ ಸ್ಥಿರವಾಗಿತ್ತು. ಹಕ್ಕಿ ಎರಡೂ ಇವೆ. ಹಾರುತ್ತಿವೆ. ರವಿ ಇಳಿದಿಲ್ಲ. ನಾವೆಯೂ ಇದೆ. ಚುಕ್ಕಿ ಚುಕ್ಕಿ ಇಡು ಬೇಗ ಎಂದು ಚಿತ್ರಾ ಕುಂಚಕ್ಕೆ ಹೇಳಿದಳು. ಕುಂಚ ನಡುಗಿರಲಿಲ್ಲ. ಕರಿಯ ಬಣ್ಣ ಹರಡಿರಲಿಲ್ಲ. ಕಣ್ಣಮುಂದೆ ಭ್ರಮೆ ಹಾಯ್ದು ಹೋಗಿತ್ತು.

'ಚಿತ್ರ ಕೆಟ್ಟಿಲ್ಲ. ಕಪ್ಪಿಟ್ಟಿಲ್ಲ'—ಹರ್ಷಿಸಿದಳು ಚಿತ್ರಾ. 'ಸೃಷ್ಟಿಯ ಸೌಂದರ್ಯದ ಪ್ರತಿಮೆ. ಸ್ಥಿರಸಂಕಲ್ಪದ ನೆನಪಿನ ಚಿಹ್ನೆ'—ಖಾಲಿ ಮೊಟ್ಟೆಯ ಹೊದಿಕೆಯ ಚಿತ್ರವನ್ನು ಚಿತ್ರಾ ತನ್ನೆದುರಿಗೇ ಇಟ್ಟುಕೊಂಡಳು.

ಮರಗಳಿವೆ. ಹಕ್ಕಿ ಹಾರುತ್ತಿವೆ. ಕಿರಣ ಹರಡಿವೆ. ನಾವೆ ತೇಲಿದೆ. ಇದೋ ಇವೆರಡು ಚುಕ್ಕಿ. ವಿಶ್ವದಲ್ಲಿ ತನ್ನ ಗೆಳತಿಯರಿಬ್ಬರು ಬಾಳ ನಾವೆಯಲ್ಲಿ ಎರಡು ಚುಕ್ಕಿಗಳು. ನೋಡಲೊಂದು ದೃಶ್ಯ ಎಂದು ಸಿದ್ಧವಾಗಲು ಎದ್ದಳು ಚಿತ್ರಾ.

'ಸುಂದರವಾಗಿದೆ ಚಿತ್ರಕ್ಕಾ ಆದ್ರೆ ಮೊಟ್ಟೆ ಒಡೆದರೆ ದಂಡ ಆಗುತ್ತಲ್ಲಾ' ಅನ್ನುತ್ತಾ ಚಿತ್ರಾಳ ತಂಗಿ ಸುಧಾ ಬಂದಳು—ಮೊಟ್ಟೇನ ಮುಟ್ಟಿ ಮುಟ್ಟಿ ನೋಡ ಲೆಂದು.

'ಒಡೆದರೂ ಚಂದ. ಮರಿ ಬಂದಾಗಿದೆ ಬಿಡು' ಎಂದು ಚಿತ್ರಾ ನಕ್ಕಳು.

ತಾನೇ ಚುಕ್ಕಿ, ತಾ ಬರೆದ ಚಿತ್ರದ ಮೊಟ್ಟೆ ಇನ್ನೂ ಸಣ್ಣ ಚುಕ್ಕಿ ಎಂದು ಲೆಕ್ಕಹಾಕಿದಳು ಚಿತ್ರಾ. ತಿಳಿಯದ ಸುಧಾ ಮೊಟ್ಟೆಯನ್ನೇ ಬೆರಗುಗೊಂಡು ನೋಡುತ್ತಿದ್ದಳು.

ತಾನೊಂದು ಖಾಲಿ ಮೊಟ್ಟೆಹೊದಿಕೆ. ಸೃಷ್ಟಿ ಬರೆದಿದೆ ಸುಪ್ತ ಬಯಕೆಗಳ ಸುಂದರ ಕನಸುಗಳನ್ನಲ್ಲಿ. ಮೊಟ್ಟೆ ಒಡೆದರೆ—? 'ದಂಡವೇನಿಲ್ಲ' ಎಂದು ನಕ್ಕಳು ಚಿತ್ರಾ. ಆದರೆ ಚಿತ್ರಕ್ಕೆ ಕಪ್ಪಿರದಿರಲಿ ಎಂದಿತು ಅವಳ ತಿಳಿಗೊಂಡ ಚಿತ್ತ.

ಕೆ. ಕೆಂಪೇಗೌಡ

# ಭಾಷಾವಿಜ್ಞಾನದ ಇತ್ತೀಚಿನ ಪ್ರವೃತ್ತಿಗಳು

ಭಾಷಾವಿಜ್ಞಾನದ ಇತ್ತೀಚಿನ ಪ್ರಗತಿ, ಸ್ಥಾನಮಾನಕ್ಕೆ ವಿವರಣಾತ್ಮಕ ಭಾಷಾವಿಜ್ಞಾನದ ವಿಭಾಗವೇ ಕಾರಣ. ಈ ವಿವರಣಾತ್ಮಕ ಭಾಷಾವಿಜ್ಞಾನ ಅನೇಕ ವಿದ್ವಾಂಸರ ಪರಿಶ್ರಮದಿಂದ ಪ್ರಬಲಗೊಂಡು ತನ್ನ ಅಸ್ತಿತ್ವವನ್ನು ವಿವಿಧ ರೂಪದಲ್ಲಿ ಸ್ಥಾಪಿಸಿಕೊಂಡದ್ದು ಇಪ್ಪತ್ತನೆಯ ಶತಮಾನದ ಮೊದಲ ಹಂತದಲ್ಲಿ. ಸುಮಾರು ೧೯೪೫ರ ಹೊತ್ತಿಗೆಲ್ಲಾ ಅಮೆರಿಕಾ, ಇಂಗ್ಲೆಂಡ್, ಬ್ರಿಟನ್, ಜಿನೀವಾ, ಫ್ರಾನ್ಸ್ ಮುಂತಾದ ಪ್ರಗತಿಪರ ರಾಷ್ಟ್ರಗಳು ಭಾಷಾವಿಜ್ಞಾನದ ಬಗ್ಗೆ ಆಸಕ್ತಿ ವಹಿಸತೊಡಗಿದವು. ಇದರ ಪರಿಣಾಮದಿಂದಾಗಿ ಇಂದಿನ ವಿವರಣಾತ್ಮಕ ಭಾಷಾವಿಜ್ಞಾನದ ವೈವಿಧ್ಯ ವಿಶಾಲಗೊಂಡಿರುವುದನ್ನು ಕಾಣಬಹುದು. ಇದು ವಿಶ್ಲೇಷಣಾತ್ಮಕ (Analytical), ಸಂರಚನಾತ್ಮಕ (Structural), ಅಚಲ (Static), ಏಕಕಾಲಿಕ (Synchronic) ಎಂಬಿತ್ಯಾದಿ ಹೆಸರುಗಳನ್ನು ಅನೇಕ ವಿಜ್ಞಾನಿಗಳಿಂದ ಪಡೆದುಕೊಂಡು ಕವಲು ಕವಲಾಗಿ ಒಟ್ಟನಲ್ಲಿ ಬೃಹದಾಕಾರವಾಗಿ ಬೆಳೆದು ಬೆಳಕಿಗೆ ಬಂದಿತು. ಆಧುನಿಕ ಭಾಷಾವಿಜ್ಞಾನ ಹೆಚ್ಚು ಹೆಚ್ಚು ಸ್ಪಷ್ಟ, ಹಾಗೂ ನಿರ್ದಿಷ್ಟವಾಗಲು ವಿವರಣಾತ್ಮಕ ಭಾಷಾವಿಜ್ಞಾನ (Descriptive Linguistics)ದ ದೃಷ್ಟಿ ಅನಿವಾರ್ಯವೆನ್ನುವಷ್ಟರಮಟ್ಟಿಗೆ ಇದು ತನ್ನ ಸ್ಥಾನವನ್ನು ಕಾಯ್ದುಕೊಂಡಿದೆ.

ಆಧುನಿಕ ಭಾಷಾವಿಜ್ಞಾನದ ಇತ್ತೀಚಿನ ಪ್ರಗತಿಗೆ ಕಾರಣವಾದ ವಿವರಣಾತ್ಮಕ ಭಾಷಾವಿಜ್ಞಾನದ ಜೊತೆಗೆ ಇನ್ನುಳಿದ ವಿಭಾಗಗಳೂ ಕೂಡ ಕಾರಣವಿರಬಹುದು. ಅವುಗಳನ್ನೂ ಉಪೇಕ್ಷಿಸುವಂತಿಲ್ಲ. ಪ್ರಚಲಿತ ಭಾಷಾವಿಜ್ಞಾನದ ಇತ್ತೀಚಿನ ಪ್ರವೃತ್ತಿಗಳ ಪರಿಚಯಮಾಡಿಕೊಡುವುದೇ ಈ ಲೇಖನದ ಉದ್ದೇಶ.

ಜೀವಂತ ಮತ್ತು ಅಳಿದ ಭಾಷೆಗಳ ಅಧ್ಯಯನ ಹೊಸ ಹೊಸ ನಿರೂಪಣೆ, ಗಳನ್ನು ತಂದುಕೊಟ್ಟವು. ಧ್ವನಿಗಳ ಅಧ್ಯಯನ (Phonetics)—ಉಚ್ಚಾರಣೆ, ಅವುಗಳ ಅಧ್ಯಯನ, ಅವುಗಳಲ್ಲಿ ಕಂಡುಬರುವ ಸ್ವರ, ವ್ಯಂಜನ (ಸಂಯುಕ್ತ

ಸ್ವರ, ಅರ್ಧಸ್ವರ, ಘರ್ಷ, ಸಂಘರ್ಷ, ಅನುನಾಸಿಕ, ಪಾರ್ಶ್ವಿಕ, ಲುಂಠಿತ, ಕಂಪಿತ, ಅನುಘರ್ಷ, ತಾನ, ಬಲಾಘಾತ, ಸ್ವರಾಘಾತ, ಸಂಗಮ, ವರ್ಣ) ಇತ್ಯಾದಿಗಳ ವರ್ಗೀಕರಣ—ಈ ಬಗೆಗೆ ಪ್ರಪಂಚದಾದ್ಯಂತ ಅನೇಕ ಭಾಷೆಗಳಲ್ಲಿ ವಿವಿಧ ರೂಪಗಳಲ್ಲಿ ಸತತ ಅಧ್ಯಯನ ಕಾರ್ಯಗಳು ನಡೆಯುತ್ತಿವೆ. ಈ ಧ್ವನಿವಿಜ್ಞಾನವು ಹೆಚ್ಚುಹೆಚ್ಚು ಸ್ಪಷ್ಟತೆ, ನಿಖರತೆ ಹಾಗೂ ಸೂಕ್ಷ್ಮಾತಿಸೂಕ್ಷ್ಮತೆಗೆ ಇಳಿಯುತ್ತಿದೆ. ಆಧುನಿಕ ಯಂತ್ರೋಪಕರಣಗಳಾದ ಕ್ಷ-ಕಿರಣ, ಸ್ಪೆಕ್ಟ್ರೋಗ್ರಾಫ್, ಕಾಇಮೊಗ್ರಾಫ್ ಪಿಚ್‌ಮೀಟರ್, ಇಂಕಾರಾಇಟರ್, ಪ್ಯಾಟರ್ನ್—ಪ್ಲೇಬ್ಯಾಕ್, ಸ್ಪಿಚ್—ಸ್ಟ್ರೆಚರ್, ಫಾರ್ಮೆಂಟ್ ಗ್ರಾಫಿಕ್ ಮೆಶಿನ್, ಲೆರಿಂಜೋಸ್ಕೋಪ್, ಎಂಡೋಸ್ಕೋಪ್, ಬ್ರಂದಿಗೆ ಪ್ಲಾಸ್ಕ್, ಆಟೋಫೊನೊ ಸ್ಕೋಪ್ ಇತ್ಯಾದಿಗಳ ಬಳಕೆ ಅದನ್ನು ಶುದ್ಧ ವೈಜ್ಞಾನಿಕ ಅಧ್ಯಯನವನ್ನಾಗಿಸಿದೆ. ಅದೂ ಅಲ್ಲದೆ ಅವು, ಉಚ್ಚಾರಣಾತ್ಮಕ (Articulatory) ಶ್ರವಣಾತ್ಮಕ (Acoustic) ಹಾಗೂ ಶ್ರವ್ಯಾತ್ಮಕ (Auditory) ಧ್ವನಿ ವಿಜ್ಞಾನದ ವಿವಿಧ ವಿಚಾರಗಳು ಗಾಢ, ಸ್ಪಷ್ಟ, ನಿರ್ದಿಷ್ಟ ಹಾಗೂ ನಿಖರವಾಗುವಂತೆ ಮಾಡಿವೆ. ಈ ಆಧುನಿಕ ಯಂತ್ರೋಪಕರಣಗಳು ಪ್ರಾಯೋಗಿಕವಾಗಿ ಭಾಷೆಗಳ ಪ್ರತಿಯೊಂದು ಧ್ವನಿಯನ್ನು ಪರೀಕ್ಷಿಸಲು ಮತ್ತು ಧ್ವನಿಗಳನ್ನು ವರ್ಗೀಕರಿಸಲು ತುಂಬ ಸಹಾಯಕಾರಿ. ಧ್ವನಿವಿಜ್ಞಾನ ಕ್ಷೇತ್ರದಲ್ಲಂತೂ ಹಿಂದೆಂದೂ ಸಾಧಿಸಲಾಗದಷ್ಟು ಪ್ರಗತಿ ವಿವಿಧ ಶಾಖೆಗಳಲ್ಲಿ ಸಾಧಿತವಾಗಿದೆ. ವಿಶ್ವವಿದ್ಯಾನಿಲಯದ ಭಾಷಾವಿಜ್ಞಾನ ಶಾಖೆಗಳ ಸತತ ಪರಿಶ್ರಮದ ಪರಿಣಾಮದಿಂದಾಗಿ ಅನೇಕ ಗ್ರಂಥಗಳು, ಲೇಖನಗಳು—ಲಿಖಿತ ಮತ್ತು ಅಲಿಖಿತ ಭಾಷೆಗಳ ಬಗ್ಗೆ ಹೊರಬಂದಿವೆ, ಬರುತ್ತಲೇ ಇವೆ.

ಧ್ವನಿಮ ವಿಜ್ಞಾನ (Phonology), ಪ್ರಪಂಚದ ಎಲ್ಲಾ ಧ್ವನಿಗಳನ್ನೂ ಆಯಾಯಾ ಭಾಷೆಗಳಿಗೆ ಸಂಬಂಧಿಸಿದಂತೆ ಅಧ್ಯಯನಮಾಡುವುದು ಸಾಧ್ಯ ಎಂಬುದನ್ನು ತೋರಿಸಿಕೊಟ್ಟಿದೆ. ಸಾಮಾನ್ಯವಾಗಿ ಧ್ವನಿವಿಜ್ಞಾನ ಪ್ರಪಂಚದ ಎಲ್ಲಾ ಭಾಷೆಗಳಿಗೂ ಸಂಬಂಧಿಸಿದ್ದರೆ, ಈ ಧ್ವನಿಮ ವಿಜ್ಞಾನ ಒಂದೇ ಒಂದು ಭಾಷೆ ಅಥವಾ ಒಂದೇ ಒಂದು ಉಪಭಾಷೆಗೆ ಸಂಬಂಧಿಸಿದ್ದಾಗಿದೆ. ಈ ಧ್ವನಿ ವಿಜ್ಞಾನವು ಒದಗಿಸಿಕೊಟ್ಟ ಸಾಮಗ್ರಿಯನ್ನೇ ಉಪಯೋಗಿಸಿಕೊಂಡು ಧ್ವನಿಮ ವಿಜ್ಞಾನ ಮುಂದುವರಿದು ಪರಸ್ಪರ ನಿಕಟ ಸಂಬಂಧವನ್ನು ಪಡೆದಿದೆ. ಒಂದೇ ಭಾಷೆಯ ಮತ್ತು ಉಪಭಾಷೆಯ ಧ್ವನಿಗಳ ಲಕ್ಷಣಗಳನ್ನು ವಿವರಿಸುವುದರ ಜೊತೆಗೆ ಅವುಗಳನ್ನು ಖಂಡಿತ ಮತ್ತು ಅಖಂಡಿತ ಧ್ವನಿಮಗಳನ್ನಾಗಿ ವರ್ಗೀಕರಣ ಮಾಡಿ, ಅವುಗಳಲ್ಲಿನ ಧ್ವನಿ, ಧ್ವನಿಮ, ಸಂಸ್ವನಗಳನ್ನು ಗುರುತಿಸಿ ಕೆಲವು ತತ್ವಗಳ ಸಹಾಯದಿಂದ ವಿವರಿಸಿ ತೋರಿಸುವುದೇ ಇದರ ಮುಖ್ಯ ಕೆಲಸ. ಹೀಗೆ ಧ್ವನಿ, ಧ್ವನಿಮ, ಸಂಸ್ವನಗಳನ್ನು ಗುರುತಿಸಿ ಬಳಸಿದ ತತ್ವಗಳನ್ನು ಗಮನದಲ್ಲಿಟ್ಟು ಕೊಂಡರೆ ಭಾಷೆಯ ಅಥವಾ ಉಪಭಾಷೆಯ ಧ್ವನಿಗಳಾದ ಸ್ವರ, ವ್ಯಂಜನಗಳನ್ನು ಖಂಡಿತ ಧ್ವನಿಮಗಳೆಂದೂ, ತಾನ, ಸ್ವರಲಹರಿ, ಸಂಗಮ, ಬಲಾಘಾತ,

ಸ್ವರಾಘಾತ ಇತ್ಯಾದಿಗಳನ್ನು ಅಖಂಡಿತ ಧ್ವನಿಮುಗಳೆಂದು ಪರಿಗಣಿಸಬಹುದು. ಅಲ್ಲದೆ ಅವುಗಳ ಸ್ಥಾನಗಳನ್ನು ಭಾಷೆಯ ಪದಗಳಲ್ಲಿ ಆದಿ, ಮಧ್ಯ, ಅಂತ್ಯ ಎಂದು ಗುರುತಿಸಿ ಅವುಗಳ ಲಕ್ಷಣಗಳನ್ನು ವಿವರಿಸಬಹುದು. ಈ ಧ್ವನಿಮುಗಳ ವಿತರಣ ಕಾರ್ಯದಲ್ಲಿ ಕಂಪ್ಯೂಟರ್ ಬಳಸಿ ಅವುಗಳ ಸ್ಪಷ್ಟತೆ, ನಿರ್ದಿಷ್ಟತೆ ಹಾಗೂ ನಿಖರತೆಯನ್ನು ಸಾಧಿಸಲಾಗಿದೆ. ಅಂಕಿ ಅಂಶಗಳ ಶಾಸ್ತ್ರ, ಗಣಿತಶಾಸ್ತ್ರ, ಬೀಜಗಣಿತ ಇತ್ಯಾದಿ ಇತರ ಜ್ಞಾನಗಳ ಬಳಕೆಯಿಂದ ಭಾಷಾವಿಜ್ಞಾನ ಕ್ಷೇತ್ರದಲ್ಲಿ ವಿಶಾಲತೆಯನ್ನು ಪಡೆಯುವ ಹಾದಿಯಲ್ಲಿ ಆಧುನಿಕ ಭಾಷಾವಿಜ್ಞಾನಿಗಳು ಮುನ್ನಡೆಯುತ್ತಿದ್ದಾರೆ. ಇದಕ್ಕೆ ಸಂಬಂಧಿಸಿದ ಹಲವಾರು ಹೊಸಹೊಸ ತತ್ವಗಳು, ರೀತಿನೀತಿಗಳು ದಿನೇ ದಿನೇ ಹೊರಬರುತ್ತಿವೆ. ಹೀಗೆ ಭಾಷಾವಿಜ್ಞಾನ ವಿವಿಧ ಶಾಖೆಗಳಾಗಿ ವಿಶಾಲತೆಯನ್ನು ಪಡೆಯುತ್ತಿದೆ ಎನ್ನುವುದಕ್ಕೆ Generative Phonologyಯೇ ಸಾಕ್ಷಿ. ಎಲ್ಲಾ ಪ್ರಗತಿಪರ ರಾಷ್ಟ್ರಗಳು ತಮ್ಮ ತಮ್ಮ ಕಾರ್ಯಸಾಧನೆಗಳ ಪ್ರಭಾವದಿಂದ ವಿವಿಧ ಪಂಥಗಳಾಗಿ ಅಧ್ಯಯನಕಾರ್ಯವನ್ನು ಮುಂದುವರಿಸುತ್ತಲೇ ಇವೆ. ಸಾಮಾನ್ಯವಾಗಿ ಈ ಹೊತ್ತಿಗಾಗಲೇ ಧ್ವನಿಮ ವಿಜ್ಞಾನದಲ್ಲಿ ಅನೇಕ ವಿದ್ವಾಂಸರ ಅಧ್ಯಯನದ ಪರಿಶ್ರಮದಿಂದ ಅನೇಕ ಗ್ರಂಥ ಮತ್ತು ಲೇಖನಗಳು ಹೊರಬಿದ್ದಿವೆ. ಈ ಬಗ್ಗೆ ಕೆಲವು ಲಿಖಿತ ಹಾಗೂ ಅಲಿಖಿತ ಭಾಷೆಗಳಲ್ಲಿ ಸಾಕಷ್ಟು ಕೆಲಸ ನಡೆದಿದೆ.

ರೂಪಿಮ ವಿಜ್ಞಾನ (Morphology)ದಲ್ಲಂತೂ ಭಾಷಾವಿಜ್ಞಾನ ಕ್ಷೇತ್ರದಲ್ಲಿ ಸಾಕಷ್ಟು ಕೆಲಸ ನಡೆದಿದೆ. ಧ್ವನಿಮ ವಿಜ್ಞಾನವು ಒಂದೇ ಒಂದು ಭಾಷೆಯ ಅಥವಾ ಉಪಭಾಷೆಯ ಧ್ವನಿಗಳಿಗೆ ಸಂಬಂಧಿಸಿದ್ದು. ಆದರೆ ಈ ರೂಪಿಮ ವಿಜ್ಞಾನವು ಒಂದೇ ಒಂದು ಭಾಷೆ ಅಥವಾ ಉಪಭಾಷೆಯ ಪದಗಳಿಗೆ ಸಂಬಂಧಿಸಿದ್ದು. ಭಾಷೆಯಲ್ಲಿನ ವಿವಿಧ ಪದಗಳನ್ನು ಬದ್ಧ, ಮುಕ್ತ, ಅರ್ಧಬದ್ಧ, ಅರ್ಧ ಮುಕ್ತ, ಸಂಯುಕ್ತ, ಮಿಶ್ರ, ಇತ್ಯಾದಿ ರೂಪ ಅಥವಾ ರೂಪಿಮುಗಳನ್ನಾಗಿ ವಿಂಗಡಿಸಿ ವಿವರಿಸುವುದೇ ಇದರ ಮುಖ್ಯ ಕೆಲಸ. ಭಾಷೆಯ ಪದಗಳನ್ನು ರೂಪ, ರೂಪಿಮ, ಉಪರೂಪಿಮುಗಳನ್ನಾಗಿ ಖಂಡಿಸಿ ಕೆಲವೇ ತತ್ವಗಳ ಆಧಾರದ ಮೇಲೆ ವಿವಿಧ ರೀತಿಯಲ್ಲಿ ಶುದ್ಧ ವೈಜ್ಞಾನಿಕವಾಗಿ ವಿವರಿಸಿ ತೋರಿಸುವ ಕಾರ್ಯದಲ್ಲಂತೂ ಅದ್ವಿತೀಯ ಸ್ಥಾನವನ್ನು ಭಾಷಾವಿಜ್ಞಾನಿಗಳು ಗಳಿಸಿದ್ದಾರೆ. ಈ ವಿಚಾರಗಳ ಬಗ್ಗೆ ನಡೆಸಿದ ಸಂಶೋಧನೆಗಳಿಂದ ಅನೇಕ ವಿಚಾರಗಳು, ಅನೇಕ ಪದ್ಧತಿಗಳು, ಬೇರೆ ಬೇರೆ ಭಾಷೆಗಳಲ್ಲಿ ಬೆಳಕಿಗೆ ಬಂದಿವೆ. ಭಾಷೆಯಲ್ಲಿ ಈ.ರೂಪಿಮ, ರೂಪ, ಸಂರೂಪ, ಇವು ತಮ್ಮ ತಮ್ಮ ಸ್ಥಾನಮಾನಗಳನ್ನು ಹೇಗೆ ಉಳಿಸಿಕೊಂಡಿವೆ? ಅವುಗಳ ವೈಖರಿ ಏನು?—ಇತ್ಯಾದಿ ವಿಚಾರಗಳನ್ನು ಕುರಿತ ಗ್ರಂಥ ಲೇಖನಗಳಂತೂ ರಾಶಿ ರಾಶಿಯಾಗಿ ಹೊರಬಂದಿವೆ. ಮುಕ್ತರೂಪ, ಬದ್ಧರೂಪ, ಮಿಶ್ರ ರೂಪ, ಸಂಯುಕ್ತ ರೂಪ, ಇತ್ಯಾದಿ ಭಾಷಾ ಘಟಕಗಳ (Constituents) ಬಗ್ಗೆ ಸಂಶೋಧನೆ ನಡೆಸಿ,

ಅವುಗಳ ಪೂರ್ಣ ವಿವರಣೆ ಹಾಗೂ ವರ್ಗೀಕರಣ, ಲಿಖಿತ ಮತ್ತು ಅಲಿಖಿತ ಭಾಷೆಗಳಲ್ಲಿ ನಡೆದಿದೆ. ಪದಕ್ರಮ, ರೂಪರಚನೆ, ಅವುಗಳಲ್ಲಿನ ಬಾಹ್ಯ ಹಾಗೂ ಆಂತರಿಕ ಬದಲಾವಣೆ, ಇತ್ಯಾದಿ ವಿಚಾರಗಳನ್ನು ವಿಸ್ತಾರವಾಗಿ ಹೇಳುವ ಪ್ರಯತ್ನ ಬೇರೆ ಬೇರೆ ಹೆಸರಿನಲ್ಲಿ ಸಾರ್ಥಕವಾಗಿ ನಡೆಯುತ್ತಿದೆ.

ಅರ್ಥವಿಲ್ಲದ ಭಾಷೆ ವ್ಯರ್ಥ ಎಂಬ ನೀತಿಯು ಪಂಥದ ಕೆಲವೇ ವಿದ್ವಾಂಸರುಗಳು ಅರ್ಥಕ್ಕೆ ಮಾನ್ಯತೆ ನೀಡಿ, ಅರ್ಥವಿಜ್ಞಾನ (Semantics) ಕ್ಷೇತ್ರದಲ್ಲೂ ಸಾಕಷ್ಟು ಕೆಲಸಮಾಡುತ್ತಿದ್ದಾರೆ. ಪದ-ಅರ್ಥ ಇವುಗಳ ಪರಸ್ಪರ ನಿಕಟ ಸಂಬಂಧವನ್ನು ಕುರಿತು ಹಲವಾರು ಗ್ರಂಥಗಳು, ಲೇಖನಗಳು ಪ್ರಕಟವಾಗಿವೆ. ಪದ ಇದ್ದ ಕಡೆ ಅರ್ಥವಿರಲೇಬೇಕು, ಅರ್ಥವಿದ್ದಕಡೆ ಪದವಿರಲೇ ಬೇಕು—ಎಂದು ಕೆಲವು ವಿದ್ವಾಂಸರು ಮನೋವಿಜ್ಞಾನ, ಸಮಾಜಶಾಸ್ತ್ರ ಮತ್ತು ತತ್ವಶಾಸ್ತ್ರಗಳ ಸಹಾಯವನ್ನು ಬಳಸಿ, ಸಂಶೋಧನೆ ನಡೆಸಿ, ಅದರ ವಿವಿಧ ವೈಖರಿಗಳನ್ನು ಕಂಡುಕೊಳ್ಳುತ್ತಿದ್ದಾರೆ. ಹಿಂದಿನ ಪರಂಪರೆ ಅರ್ಥವಿಜ್ಞಾನಕ್ಕೆ ಹೆಚ್ಚಿನ ಮಾನ್ಯತೆ ನೀಡಿದ್ದು ಈಗ ಅದೇ ಮಾರ್ಗವನ್ನು ಅನುಸರಿಸಿ, ಒಂದು ಹೊಸ ತಿರುವನ್ನು ಪಡೆಯುತ್ತಿದೆ.

ವಾಕ್ಯ ವಿಜ್ಞಾನ (Syntax) ಕ್ಷೇತ್ರದಲ್ಲೂ ಸಾಕಷ್ಟು ಸಂಶೋಧನೆಗಳು ನಡೆದು ಇದು ಹೆಚ್ಚು ಹೆಚ್ಚು ಸ್ಪಷ್ಟತೆ ಹಾಗು ನಿಖರತೆಯನ್ನು ಸ್ಥಾಪಿಸಿಕೊಳ್ಳುತ್ತಿದೆ. ಈ ಕ್ಷೇತ್ರದಲ್ಲಿ ಪದಕ್ರಮ, ಲೋಪ, ಆದೇಶ, ಆಗಮ, ವಿಷಮೀಕರಣ, ಸಮೀಕರಣ, ಇತ್ಯಾದಿ ವಾಕ್ಯರಚನೆಯಲ್ಲಿ ಕಾಣಬಹುದಾದ ಪರಸ್ಪರ ಆಂತರಿಕ ಬದಲಾವಣೆಗೆ ಮಹತ್ವಪೂರ್ಣ ಸ್ಥಾನವಿದೆ. ಈ ವಾಕ್ಯರಚನೆಯಲ್ಲಿ ವ್ಯಾಕರಣಿಕ ಅಂಶಗಳು, ಅವುಗಳ ಲಕ್ಷಣ ಹಾಗೂ ಅವು ಅನುಸರಿಸುವ ಸ್ವನೀತಿ, ಇತ್ಯಾದಿ ವಿಚಾರಗಳು ಗಾಢ, ಸ್ಪಷ್ಟ ಹಾಗು ವೈಜ್ಞಾನಿಕವಾಗಿ ಬೆಳಕಿಗೆ ಬರುತ್ತಿವೆ. ವಿವಿಧ ವಾಕ್ಯಗಳನ್ನು (ಉಪವಾಕ್ಯ, ಮಿಶ್ರವಾಕ್ಯ, ಸಾಮಾನ್ಯವಾಕ್ಯ, ಸಂಯುಕ್ತವಾಕ್ಯ) ರಚಿಸುವಾಗ ಪದಗಳ ಕ್ರಮ, ಆಂತರಿಕ ಬದಲಾವಣೆ, ವ್ಯಾಕರಣಿಕ ಅಂಶಗಳು ಇತ್ಯಾದಿ ವಿಚಾರಗಳನ್ನು ಕುರಿತ ಹಲವಾರು ತತ್ತ್ವಗಳನ್ನೊಳಗೊಂಡ ಗ್ರಂಥಗಳು ಮತ್ತು ಲೇಖನಗಳು ಬೆಳಕಿಗೆ ಬರುತ್ತಿವೆ. ಇವುಗಳನ್ನು ಆಯಾಯಾ ಭಾಷೆಯಲ್ಲಿ ಕಂಡುಬರಬಹುದಾದ ವಿಶೇಷ ಲಕ್ಷಣಗಳ ಆಧಾರದ ಮೇಲೆ ವಿಂಗಡಿಸಿ, ವಿವರಿಸಿ ತೋರಿಸಿದ ವಿವಿಧ ಪ್ರಕಾರದ ವ್ಯಾಕರಣಗಳಲ್ಲಿ ಕಾಣಬಹುದು. ಅಲಿಖಿತ ಭಾಷೆಗಳ ವ್ಯಾಕರಣಗಳನ್ನು ಮತ್ತು ಅವುಗಳ ಕೋಶಗಳನ್ನು ಶೀಘ್ರಗತಿಯಲ್ಲಿ ತಯಾರಿಸುವ ಸಾಧನೆಯೂ ಸತತ ನಡೆಯುತ್ತಲೇ ಇದೆ. ಹೊರಬರುತ್ತಿರುವ ಹೊಸ ಹೊಸ ರೀತಿಯ ವ್ಯಾಕರಣಗಳು ಮತ್ತು ಕೋಶಗಳೇ ಇದಕ್ಕೆ ಜ್ವಲಂತ ಸಾಕ್ಷಿಯಾಗಿ ನಿಲ್ಲುವುವು. ಹೀಗೆ ಧ್ವನಿ ವಿಜ್ಞಾನ, ಧ್ವನಿಮ ವಿಜ್ಞಾನ, ರೂಪ ಧ್ವನಿಮ ವಿಜ್ಞಾನ, ರೂಪಿಮ ವಿಜ್ಞಾನ, ಅರ್ಥವಿಜ್ಞಾನ, ಪದವಿಜ್ಞಾನ, ಮತ್ತು ವಾಕ್ಯ ವಿಜ್ಞಾನಗಳ ಬಗ್ಗೆ ಹಿಂದಿನ ಪರಂಪರೆ ಇದ್ದು, ಹಿಂದೆಂದೂ ಸಾಧಿಸಲಾಗ

ದಷ್ಟು ಪ್ರಗತಿಯ ಹಾದಿಯಲ್ಲಿ ಮುಂದುವರಿದು, ಆಧುನಿಕ ಯಂತ್ರೋಪಕರಣಗಳ ಬಳಕೆಯಿಂದ ಹೆಚ್ಚುಹೆಚ್ಚು, ಗಾಢ, ಸ್ಪಷ್ಟ, ನಿಖರ ಹಾಗೂ ವೈಜ್ಞಾನಿಕವಾಗಿ ಹೊಸ ಹೊಸ ಮಾರ್ಗಗಳಲ್ಲಿ ಮುಂದುವರಿದು ಈ ಆಧುನಿಕ ಭಾಷಾವಿಜ್ಞಾನ ತನ್ನ ವಿಶಾಲತೆ ಹಾಗು ಮಾನ್ಯತೆಯನ್ನು ಪಡೆದುಕೊಳ್ಳುತ್ತಿದೆ.

ಈಗ ಚಾಮ್‌ಸ್ಕಿಯ ರೂಪಾಂತರಣ (Transformation) ಮತ್ತು ಹ್ಯಾಲಿಡೆಯ ಪರಸ್ಪರ ವಿರೋಧಿ ವಿಶ್ಲೇಷಣೆ (Contrastive Analysis)ಗಳಿಗೆ ಪ್ರಾಧಾನ್ಯ ಸಿಕ್ಕಿದೆ. ಇವಕ್ಕೆಲ್ಲ ವಿವರಣಾತ್ಮಕ ಹಾಗೂ ತುಲನಾತ್ಮಕ ಭಾಷಾವಿಜ್ಞಾನಗಳೇ ಮೂಲ ಕಾರಣವೆಂದರೆ ತಪ್ಪಾಗಲಾರದು. ಇವುಗಳಿಂದ ವಿಕಸನಗೊಂಡ ಒಂದು ನವೀನ ವಿಧಾನವಾದ ಪ್ರಾಯೋಗಿಕ ಭಾಷಾವಿಜ್ಞಾನ (Applied Linguistics) ಮತ್ತಷ್ಟು ವಿಶಾಲತೆಯನ್ನು ಸಾಧಿಸಿಕೊಳ್ಳಲು ಸಹಾಯಕಾರಿಯಾಗಿ ನಿಂತಿದೆ. ಹೀಗೆ ಹಲವಾರು ವಿದ್ವಾಂಸರ ಸತತ ಪರಿಶ್ರಮದ ಫಲ ಇಂದಿನ ವಿಧಾನಗಳು ಮತ್ತು ಸಿದ್ಧಾಂತಗಳು. ಇದಕ್ಕೆ ಚಾಮ್‌ಸ್ಕಿಯ ರೂಪಾಂತರಣ ಸಿದ್ಧಾಂತ, ಹ್ಯಾಲಿಡೆಯ ಪರಸ್ಪರ ವಿರೋಧಿ ವಿಶ್ಲೇಷಣಾ ಪದ್ಧತಿ ಹಾಗೂ ಕ್ಷೇತ್ರ ಪದ್ಧತಿಗಳೇ ಸಾಕ್ಷಿ. ಚಾಮ್‌ಸ್ಕಿಯ ರೂಪಾಂತರಣ ಸಿದ್ಧಾಂತದಲ್ಲಿ ವಾಕ್ಯದ ಪದಗಳನ್ನು ಅಥವಾ ರೂಪಗಳನ್ನು ಸ್ಥಳಾಂತರಿಸಿ ವಿವಿಧ ವಾಕ್ಯಗಳನ್ನಾಗಿ ರಚಿಸುವಾಗ ಆಗುವ ಬಾಹ್ಯ ಮತ್ತು ಆಂತರಿಕ ವ್ಯತ್ಯಾಸಗಳನ್ನು ಪ್ರಧಾನವಾಗಿ ಗಮನಿಸಿ ಮುಂದುವರಿಯುವುದೇ ಪ್ರಮುಖ ತತ್ತ್ವ. ಆ ಭಾಷೆಯ ಇಡೀ ವಾಕ್ಯವರ್ಗಗಳಲ್ಲಿನ ಆಂತರಿಕ ವ್ಯತ್ಯಾಸ, ಅಲ್ಲಿನ ವ್ಯಾಕರಣಿಕ ಅಂಶಗಳು, ಅವುಗಳ ಲಕ್ಷಣ, ಅವುಗಳು ತಮ್ಮ ತಮ್ಮ ಸ್ಥಾನಗಳನ್ನು ಹೇಗೆ ನಿರ್ಧರಿಸಿ ಸ್ಥಾಪಿಸಿಕೊಂಡಿವೆ, ಅವುಗಳು ಕೊಡುವ ನಾನಾ ಅರ್ಥ—ಇತ್ಯಾದಿ ವಿಚಾರಗಳನ್ನು ಗಮನಿಸಲಾಗುತ್ತದೆ. ಒಂದೇ ವಾಕ್ಯದ ಪದಗಳು ಸ್ಥಳಾಂತರಣದಿಂದ ಕೊಡುವ ಅರ್ಥವನ್ನು ಕಡೆಗಣಿಸುವಂತಿಲ್ಲ. ಹೀಗೆ ವಾಕ್ಯಗಳಲ್ಲಿನ ಪದಗಳ ಕಾರ್ಯನಿರ್ವಹಣೆಯನ್ನು, ಅಲ್ಲಿನ ವ್ಯಾಕರಣಿಕ ಅಂಶ ಗಳನ್ನು ಆಧರಿಸಿ ಪರೀಕ್ಷಿಸಿ ವಿವರಿಸಿ ತೋರಿಸುವುದು ರೂಪಾಂತರವ್ಯಾಕರಣ ವೆನಿಸಿಕೊಳ್ಳುತ್ತದೆ. ಈ ವಿಷಯ ಪರಕೀಯ ಭಾಷಾಭ್ಯಾಸ, ಅನುವಾದ, ಇತ್ಯಾದಿ ಪ್ರಯೋಜನಕಾರಿ ವಿಚಾರಗಳ ಮೇಲೆ ಬೆಳಕು ಚೆಲ್ಲುತ್ತದೆ. ಇಲ್ಲಿ ಪದಗಳ ಆಟ ದಿಂದುಂಟಾದ ವಾಕ್ಯಗಳ ಅರ್ಥವೈಖರಿ, ಆಂತರಿಕ ಬದಲಾವಣೆ ಇತ್ಯಾದಿ ವಿಚಾರ ಗಳನ್ನು ಸ್ಪಷ್ಟವಾಗಿ ಗಮನಿಸಿ ಅನೇಕ ಗ್ರಂಥಗಳು, ಲೇಖನಗಳು ಪ್ರಕಟವಾಗಿವೆ.

ಇತ್ತೀಚೆಗೆ ಬಂದ ಪ್ರಮುಖ ವಿಧಾನಗಳಲ್ಲಿ ಪರಸ್ಪರ ವಿರೋಧಿ ವಿಶ್ಲೇಷಣಾ ಪದ್ಧತಿ ಒಂದಾಗಿದೆ. ಇದು ಭಾಷಾ ಶಿಕ್ಷಣ ಹಾಗೂ ಅಭ್ಯಸನಕ್ಕೆ ಪ್ರಯೋಜನಕಾರಿ. ಎರಡು ಭಾಷೆಗಳಲ್ಲಿನ ಧ್ವನಿ, ಧ್ವನಿಮ, ರೂಪ, ರೂಪಿಮುಪದ, ವಾಕ್ಯಗಳು ತೋರಿಸುವ ಪರಸ್ಪರ ಸಾಮ್ಯ ಹಾಗೂ ವಿರೋಧವನ್ನು ಪ್ರಧಾನವಾಗಿ ಗಮನ ದಲ್ಲಿರಿಸಿಕೊಂಡು ಭಾಷಾಭ್ಯಾಸ ಹಾಗೂ ಶಿಕ್ಷಣಕ್ಕೆ ಯೋಗ್ಯವಾದ ಸಾಮಗ್ರಿ,

ವ್ಯಾಕರಣ, ಇತ್ಯಾದಿ ಪಠ್ಯಪುಸ್ತಕಗಳನ್ನು ತಯಾರಿಸಬಹುದು. ಈ ವಿಧಾನದ ಹಾದಿಯಲ್ಲಿಯೇ ಮುಂದುವರಿದರೆ ಭಾಷಾಶಿಕ್ಷಣವನ್ನು ಶುದ್ಧ ವೈಜ್ಞಾನಿಕ ಹಾಗೂ ಕಡಿಮೆ ಅವಧಿಯಲ್ಲಿಯೇ ಸಾರ್ಥಕವನ್ನಾಗಿ ಮಾಡಬಹುದು. ಅಲ್ಲದೆ ಈ ತತ್ತ್ವದಿಂದ ಅನುವಾದ ಇತ್ಯಾದಿ ವಿಚಾರಗಳಲ್ಲಿ ಕಠಿಣತೆ ಕಡಿಮೆಯಾಗುತ್ತದೆ. ಈ ಹೊಸ ವಿಧಾನವನ್ನು ಕೆಲವು ವಿದ್ವಾಂಸರು ಪರಸ್ಪರ ವಿರೋಧಿ ಭಾಷಾವಿಜ್ಞಾನ (Contrastive Linguistics) ಎಂದು ಕರೆದು ಇದರ ಪ್ರಯೋಜನವನ್ನು ತುಂಬ ಪ್ರಶಂಸಿಸಿದ್ದಾರೆ. ವಿಶ್ವವಿದ್ಯಾನಿಲಯಗಳಲ್ಲಿನ ಭಾಷಾ ವಿಜ್ಞಾನ ಶಾಖೆಗಳು ಸಂಘಸಂಸ್ಥೆಗಳು ಕೈಗೊಂಡಿರುವ ಪ್ರಮುಖ ಕಾರ್ಯಗಳಲ್ಲಿ ಇದೂ ಒಂದು. ಹಲವಾರು ಪ್ರಗತಿಪರ ರಾಷ್ಟ್ರಗಳು ಈಗಾಗಲೇ ಪ್ರಾಯೋಗಿಕವಾಗಿ ಭಾಷಾ ಶಿಕ್ಷಣವನ್ನು ಆಧುನಿಕ ಯಂತ್ರೋಪಕರಣಗಳ ಸಹಾಯದಿಂದ ನೀಡುತ್ತಿರುವುದು ತೃಪ್ತಿಕರ. ಈ ನಿಟ್ಟಿನಲ್ಲಿ ಆಳವಾದ ಅಧ್ಯಯನ ನಡೆಸಿ ಪ್ರಕಟವಾದ ಗ್ರಂಥ ಲೇಖನಗಳಂತೂ ಕಡಿಮೆ ಇಲ್ಲ. ಹೀಗೆ ಪ್ರಾಯೋಗಿಕ ಭಾಷಾವಿಜ್ಞಾನ ಕುತೂಹಲ ಕಾರಿಯಾಗಿರುವಷ್ಟೇ ಪ್ರಯೋಜನಕಾರಿಯೂ ಹೌದು. ಪರಕೀಯ ಭಾಷಾ ಶಿಕ್ಷಣ, ಮಾತೃ ಭಾಷಾ ಶಿಕ್ಷಣದಲ್ಲಿ ಸುಧಾರಣೆ, ಅನುವಾದದ ಸುಲಭೀಕರಣ, ಲಿಪಿಸುಧಾರಣೆ, ಟೈಪ್‌ರೈಟರ್ ತಯಾರಿಸಲು ಸುಲಭಮಾರ್ಗ, ಉಚ್ಚಾರಣೆ ತಿದ್ದುವ ನವೀನ ನೀತಿ–ಒಟ್ಟಿನಲ್ಲಿ ಇದರ ಪ್ರಯೋಜನಗಳು ಹಲವಾರು. ಈ ಕ್ಷೇತ್ರ ಅಪವಾದಗಳಿಂದ ಮುಕ್ತವಾಗಿದೆ. ಇನ್ನೂ ಹೆಚ್ಚಿನ ಸಂಶೋಧನೆ ನಡೆಯುತ್ತಿದ್ದು ಅಲ್ಪ ಅವಧಿಯಲ್ಲಿ ಭಾಷೆ ಕಲಿಸುವ ಶಾಲೆಗಳು, ಸಂಸ್ಥೆಗಳು ಹುಟ್ಟಿಕೊಂಡಿವೆ.

ಇತ್ತೀಚಿಗೆ ಮುಂದುವರಿದ ದೇಶಗಳಲ್ಲಿ ಭಾಷಾ ವರ್ಗೀಕರಣ, ಭಾಷಾ ಭೂಗೋಳ, ಕೋಶವಿಜ್ಞಾನ, ಶೈಲಿವಿಜ್ಞಾನ ಹಾಗೂ ಕ್ಷೇತ್ರಪದ್ಧತಿಗಳು ವಿದ್ವಾಂಸರ ಗಮನವನ್ನು ಸೆಳೆದಿವೆ. ಈ ನಿಟ್ಟಿನಲ್ಲಿ ಆಳವಾದ ಅಧ್ಯಯನ, ಸಂಶೋಧನೆಗಳು ನಡೆಯುತ್ತಿವೆ. ಭೂ ಭಾಷಾವಿಜ್ಞಾನ (Geo-linguistics) ಜೈವಭಾಷಾವಿಜ್ಞಾನ (Bio-linguistics) ಸಮಾಜ ಭಾಷಾವಿಜ್ಞಾನ (Socio-linguistics) ಮಾನವಿಕ ಭಾಷಾವಿಜ್ಞಾನ (Anthropological linguistics) ಹಾಗೂ ಮನೋಭಾಷಾ ವಿಜ್ಞಾನ (Psycho-linguistics)ಗಳು ಮೈತಳೆದು ಬೆಳಕಿಗೆ ಬರುತ್ತಿವೆ.

ಈ ಪದ್ಧತಿಗಳಿಂದ ಸಂಪದ್ಭರಿತ ಜಗತ್ತಿನ ಹಲವಾರು ಭಾಷೆಗಳು ತಮ್ಮ ತಮ್ಮ ರಾಜನೈತಿಕ, ಆರ್ಥಿಕ, ಸಾಮಾಜಿಕ, ಸಾಹಿತ್ಯಕ, ಸಾಂಸ್ಕೃತಿಕ ಹಿರಿಮೆಯನ್ನು ವ್ಯಕ್ತಪಡಿಸುತ್ತಿರುವುದನ್ನು ಗುರುತಿಸಬಹುದು. ಹೀಗೆ ತಿಳಿದುಬರುವ ಅಂಶಗಳಿಂದ, ಉದ್ಭವಿಸಬಹುದಾದ ಭಾಷಾ ಸಮಸ್ಯೆಯನ್ನು ಕೊನೆಗಾಣಿಸಲೂ ಸಾಧ್ಯ. ಆಧುನಿಕ ಭಾಷಾವಿಜ್ಞಾನ ಈ ವಿವಿಧ ಪ್ರಕಾರಗಳಲ್ಲಿ ಮುನ್ನಡೆದರೆ ಮಾನವನಿಗೆ ಸಂಬಂಧಪಟ್ಟ ಹಲವಾರು ಸಮಸ್ಯೆಗಳು ದೂರ ಸರಿದು ಜಗತ್ತಿನಲ್ಲಿ ಶಾಂತಿ ನೆಲಸ ಬಹುದು. ಭಾಷೆ ಮಾನವನನ್ನು ಸುಸಂಸ್ಕೃತನನ್ನಾಗಿ ಜ್ಞಾನಿಯನ್ನಾಗಿ, ವಿವೇಕಿ

ಯನ್ನಾಗಿ ಮಾಡುತ್ತದೆ. ಎಲ್ಲಕ್ಕಿಂತಲೂ ಮಿಗಿಲಾಗಿ ಭಾಷೆ ಸಹಬಾಳ್ವೆಗೆ ನಾಂದಿ ಹಾಡುತ್ತದೆ.

ಅಮೆರಿಕಾ, ಇಂಗ್ಲೆಂಡ್, ರಷ್ಯಾ ಮುಂತಾದ ಮುಂದುವರಿದ ದೇಶಗಳಲ್ಲಿ ಸೂಚನಾಸಿದ್ಧಾಂತ (Information Theory), ಅಂಕಿಅಂಶಗಳ ಶಾಸ್ತ್ರ (Statistics) ಮತ್ತು ಗಣಿತ (Mathematics) ಇತ್ಯಾದಿ ವಿಚಾರಗಳ ಆಗತ್ಯತೆಯನ್ನು ಕಂಡುಕೊಂಡ ಭಾಷಾವಿಜ್ಞಾನಿಗಳು ತಮ್ಮ ತಮ್ಮ ಭಾಷೆಗಳಲ್ಲಿ ವಿವಿಧ ರೀತಿಯಲ್ಲಿ ಸಂಶೋಧನೆ ನಡೆಸುತ್ತಿದ್ದಾರೆ. ಗಣಿತೀಯ ಭಾಷಾವಿಜ್ಞಾನ (Mathematical linguistics), ಅಂಕಿಅಂಶಗಳ ಭಾಷಾವಿಜ್ಞಾನ (Statistical linguistics) ಇತ್ಯಾದಿ ಹೆಸರುಗಳನ್ನು ಪಡೆದುಕೊಂಡು, ಭಾಷಾವಿಜ್ಞಾನ ಮುನ್ನಡೆಯುತ್ತಿದೆ. ಈ ಭಾಗದಲ್ಲೂ ಕೂಡ ಬಹಳಷ್ಟು ಕಾರ್ಯಸಾಧನೆ ನಡೆಯುತ್ತಿದೆ.

ಹೀಗೆ ದಿನೇ ದಿನೇ ಬೆಳೆಯುತ್ತಿರುವ ಭಾಷಾ ವಿಜ್ಞಾನ ಇಷ್ಟೊಂದು ವೈಜ್ಞಾನಿಕ, ತರ್ಕಪೂರ್ಣ, ಹಾಗೂ ವಿಸ್ತಾರವಾಗಿ ವ್ಯೆತಳೆದು ನಿಲ್ಲಲು ಅನ್ಯ ವಿಜ್ಞಾನಗಳೂ ಪೂರಕವಾಗಿವೆ ಎನ್ನುವುದನ್ನು ಇಲ್ಲಿ ಮರೆಯುವಂತಿಲ್ಲ. ಭೌತ ಶಾಸ್ತ್ರ, ಶರೀರಶಾಸ್ತ್ರ, ಭೂಗೋಳಶಾಸ್ತ್ರ, ಮನೋವಿಜ್ಞಾನ, ಯಾಂತ್ರಿಕ ಶಾಸ್ತ್ರ, ತರ್ಕಶಾಸ್ತ್ರ, ಸಾಹಿತ್ಯ, ಮಾನವಿಕ ಶಾಸ್ತ್ರ, ಸಮಾಜಶಾಸ್ತ್ರ, ಬೀಜಗಣಿತ, ಇತ್ಯಾದಿ ವಿಜ್ಞಾನಗಳು ಆಧುನಿಕ ಭಾಷಾವಿಜ್ಞಾನ ಅನೇಕ ಶಾಖೆಗಳಾಗಿ ಹರಡಿ ಕೊಳ್ಳಲು ಕಾರಣವಾಗಿವೆ. ಈ ಎಲ್ಲಾ ಅನ್ಯ ವಿಜ್ಞಾನಗಳೂ ಭಾಷಾವಿಜ್ಞಾನ ದೊಡನೆ ತಮ್ಮ ನಿಕಟತೆಯನ್ನು ಕಂಡುಕೊಳ್ಳುತ್ತಿವೆ. ಹೀಗೆ ಆಧುನಿಕ ಭಾಷಾ ವಿಜ್ಞಾನದ ವೈವಿಧ್ಯ ವಿಶಾಲಗೊಳ್ಳುತ್ತಿದೆ.

# ಕನ್ನಡ ಕಿಡಿಗಳು

## ಚಿಕುಪಾಧ್ಯಾಯನು ತೆರಕಣಾಂಬಿಯಲ್ಲಿ ಹುಟ್ಟಿದವನೇ?

ಚಿಕ್ಕದೇವರಾಯನ ಆಸ್ಥಾನ ಕವಿಯೂ ಅಮಾತ್ಯ ಶಿರೋಮಣಿಯೂ ಕರಣಿಕಾಗ್ರೇಸರನೂ ಆಗಿದ್ದ ಚಿಕುಪಾಧ್ಯಾಯನು ರಚಿಸಿರುವ ಗ್ರಂಥಸಮುದಾಯದಲ್ಲಿ 'ಕಾಮಂದಕ ನೀತಿ'ಯೂ ಒಂದು. ಈ ಗ್ರಂಥದಲ್ಲಿ ಹೀಗಿದೆ:

" ಧರಣೀವಧೂಟ ವದನಾಂ
ಬುರುಹದ ಚೆಲ್ವಿಕೆಯನಾಂತು ಸಕಲೈಶ್ವರ್ಯ ।
ಸ್ಫುರಿತಂ ತ್ರಿಕದಂಬಪುರಂ
ಪರಿಣತ ಜನಕೋಶಮೆಸಗುಮಾಪುರವರದೊಳ್ ॥
ವರಯಾಜುಶ್ಶಾಖೆಯೊಳುಂ
ಸ್ಫುರಿಪ ಮಹಾಪೌರಕುತ್ಸಗೋತ್ರಾಂಬುಧಿಯೊಳ್ ।
ಹರಿಣಾಂಕಂ ಹರಿಸೇವಾ
ನಿರತಮನಂ ಪುಟ್ಟಿದಂ ಬೃಹಸ್ಪತಿ [ರೂಪಂ] " ॥

ಮೊದಲನೆಯ ಪದ್ಯದಲ್ಲಿ 'ತ್ರಿಕದಂಬಪುರ' ಎಂಬ ಹೆಸರು ಬಂದಿದೆ. ಈ ಪುರ ಧರಣಿಯಲ್ಲಿ ಪ್ರಸಿದ್ಧವೂ ಸಕಲೈಶ್ವರ್ಯಯುತವೂ ವಿದ್ವಜ್ಜನಕೋಶಗಳಿಂದ ಪುಷ್ಟವೂ ಆಗಿತ್ತು ಎಂದು ವರ್ಣಿತವಾಗಿದೆ. ಈ ಪುರದ ಹೆಸರನ್ನು ಕವಿಚರಿತೆಕಾರರಾದ ಶ್ರೀಮಾನ್ ರಾ. ನರಸಿಂಹಾಚಾರ್ಯರು[1] 'ತೆರಕಣಾಂಬಿ' ಎಂದು ಕರೆದಿದ್ದಾರೆ. ಆದರೆ ಇದಕ್ಕೆ ಯಾವ ಪ್ರಮಾಣವನ್ನೂ ಉಲ್ಲೇಖಿಸಿರುವುದಿಲ್ಲ.

ಶ್ರೀ ಸಿ. ಹಯವದನರಾಯರು ಮೈಸೂರು ಗೆಜೆಟಿಯರ್ ಭಾಗ Vರಲ್ಲಿ ತಿಳಿಸಿರುವುದು ಇದು: 'ತೆರಕಣಾಂಬಿ'ಗೆ ಮೊದಲು ತ್ರಿಕದಂಬಪುರ ಎಂಬ ಹೆಸರಿದ್ದಿತು. ಕೂಡುಗಲ್ಲೂರು ಎಂಬ ಅಂಕಿತದ ಹಳ್ಳಿಯಿಂದ ಈ ಹೆಸರು ಬಂದಿದೆ. ಒಂದು ಕಾಲಕ್ಕೆ ದ್ರಾವಿಡ, ಕೇರಳ, ಹದಿನಾಡು ಎಂದರೆ ದಕ್ಷಿಣ ಕನ್ನಡ—ಈ ಮೂರು ದೇಶಗಳ (ಗಡಿಯ) ಎಲ್ಲೆಯ ಕಲ್ಲುಗಳು ಈ ಹಳ್ಳಿಯಲ್ಲೇ ಇದ್ದ ಕಾರಣ ಈ ಹಳ್ಳಿಗೆ ಕೂಡುಗಲ್ಲೂರು ಎಂಬ ಹೆಸರಿದ್ದಿತು. ಇದರಿಂದ ತ್ರಿಕದಂಬ ಎಂಬ ಹೆಸರು ಹುಟ್ಟಿದೆ. ಇಲ್ಲಿ ತ್ರಿನಯನೇಶ್ವರನ ದೇವಾಲಯ ಇದ್ದು ಅದು ಈ ಮೂರು ದೇಶಗಳ

---

[1] " ಇವನ ಸ್ಥಳ ತ್ರಿಕದಂಬಪುರ ಅಥವಾ ತೆರಕಣಾಂಬಿ "—ಕವಿಚರಿತೆ, ಭಾಗ II, ಪುಟ ೪೩೮.

ಗಡಿಯ ಗುರುತಾಗಿದ್ದಿತು. ಈ ಊರಿನಲ್ಲಿದ್ದ ಹನ್ನೆರಡು ದೇವಾಲಯಗಳಲ್ಲಿ ಲಕ್ಷ್ಮೀವರದರಾಜಸ್ವಾಮಿಯ ದೇವಾಲಯವೂ ಒಂದು. ಕ್ರಿ.ಶ. ೧೬೨೪ರಲ್ಲಿ ರಾಜ ಒಡೆಯರು ಈ ಊರನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಮುಸಲ್ಮಾನರ ಆಳ್ವಿಕೆ ಯಲ್ಲಿ ಇದು ತಾಲ್ಲೂಕಿಗೆ ಕೇಂದ್ರವಾಗಿತ್ತು. ರಾಜಒಡೆಯರ ವಶವಾದ ಬಳಿಕ ಗುಂಡ್ಲುಪೇಟೆಗೆ ಪ್ರಾಶಸ್ತ್ಯ ಬಂದು[2] ಇದರ ಪ್ರಾಧಾನ್ಯ ಕಡಿಮೆಯಾಯಿತು. ಪ್ರತಿ ಗುರುವಾರ ಇಲ್ಲಿ ಒಂದು ದೊಡ್ಡ ಸಂತೆ ನಡೆಯುತ್ತದೆ.

ಇದರಂತೆ ಲಕ್ಷ್ಮಯ್ಯನ 'ಮದನಮೋಹಿನೀ ಕಥೆ'ಯ ಅಂತ್ಯಭಾಗದಲ್ಲಿರುವ

ತ್ರಿಕದಂಬ ಪುರದೊಳು ಭಕ್ತ ಸಂತತಿಗಳ
ಸುಖಸಂಪದವಿತ್ತು ಸಲಹುವ
ಭಕತವತ್ಸಲೆ ಮಹಲಕ್ಷ್ಮಿಯ ಚರಣಸೇ
ವಕ ಲಕ್ಷ್ಮೀಪತಿಯು ಕೇಳಿದನಿದ ॥ ೧೧-೬೩

ತೆರಕಣಾಂಬಿಯ ರಂಗಪಂಡಿತರಾತ್ಮಜ
ಒರೆದ ಮದನ ಮೋಹಿಯ ಕಥೆ
ತರಣಿಚಂದ್ರರುಳ್ಳನ್ನ ಶುಭದೊಳಿಕ್ಕು
ವರಭಾರ್ಗವ ದೇವಿಯೊಲವಿಂದ ॥ ೧೧-೭೬

ಈ ಪದ್ಯಗಳಿಂದಲೂ ತೆರಕಣಾಂಬಿಗೆ ತ್ರಿಕದಂಬಪುರವೆಂಬ ಹೆಸರಿತ್ತೆಂದು ತಿಳಿದು ಬರುತ್ತದೆ. ಈ ಮೇಲಿನ ಎರಡು ಪ್ರಮಾಣಗಳಿಂದಲೂ ತೆರಕಣಾಂಬಿಗೆ ತ್ರಿಕದಂಬ ಪುರ ಎಂಬ ಹೆಸರಿದ್ದಿತು ಎಂದು ಸ್ಪಷ್ಟಪಡುತ್ತದೆ. ಒಂದು ಕಾಲದಲ್ಲಿ ಇದು ತಾಲ್ಲೂಕಿನ ಮುಖ್ಯ ಕೇಂದ್ರವಾಗಿದ್ದಿತು ಎಂಬುದೂ ವ್ಯಕ್ತಪಡುತ್ತದೆ.

ಆದರೆ ಚಿಕುಪಾಧ್ಯಾಯನು ಹೇಳಿರುವ ತ್ರಿಕದಂಬಪುರ ತೆರಕಣಾಂಬಿಯೋ? ಎಂಬುದು ವಿಮರ್ಶೆ ಮಾಡಬೇಕಾದ ವಿಚಾರವಾಗಿದೆ. ಚಿಕುಪಾಧ್ಯಾಯನ ಕಾಲಕ್ಕೆ ಈ ಊರಿನ ಪ್ರಾಮುಖ್ಯತೆ ಕಡಿಮೆಯಾಗಿತ್ತು ಎಂಬುದು[3] ಗೆಜೆಟಿಯರಿ ನಿಂದ ತಿಳಿದುಬರುತ್ತದೆ.

'ಕಾಮಂದಕ ನೀತಿ'ಯಲ್ಲಿರುವ ಪದ್ಯದಲ್ಲಿ ಚಿಕುಪಾಧ್ಯಾಯನ ಜನ್ಮಸ್ಥಳವನ್ನು ತಿಳಿಸುವುದು ಕವಿಯ ಗುರಿಯಲ್ಲ. ಕವಿ ತಾನು ರಚಿಸಿರುವ ಯಾವ ಗ್ರಂಥದಲ್ಲೇ ಆಗಲಿ ತನ್ನ ಜನ್ಮಸ್ಥಳವನ್ನು ನೆನೆಯದೆ ಈ ಒಂದು ಕೃತಿಯಲ್ಲಿ ಮಾತ್ರ ಅದನ್ನು ವಿಶೇಷವಾಗಿ ನೆನೆಯಲು ಕಾರಣವಿಲ್ಲ. ತನ್ನ ಇತರ ಕೃತಿಗಳಲ್ಲಿ. "ಯಾಜುಷನ ಮಳಯಶಂ ಪೌರಕುತ್ಸಾನ್ವಯೋತ್ಥಂ" "ಪುರುಕುತ್ಸ ಗೋತ್ರಪಾವನ ನೂರು

---

[2-3] Raja Wodeyar of Mysore took possesion of it in 1624 after which period it became secondary in importance to Gundalpet" ಮೈ. ಗೆ. ಸಂ. V, ಪುಟ 852

ಪಟ್ಟೂರಾಭಿಧಾನ ಸತ್ಕುಲದೀಪಂ ಸ್ಫುರಿಪ ಯಜಶ್ಶ್ಯಾಖಾ ಬಂಧುರ ರಂಗಾಚಾರ್ಯ ಪುತ್ರಂ" "ಪೌರಕುತ್ಸಾನ್ವಯಭವಂ" "ಪೌರಕುತ್ಸಕುಲ ಪಾಥೋರಾಶಿಚಂದ್ರಂ" "ರಂಗರಾಜಸುದರಾಂಭೋರಾಶಿ ಸಂಜಾತಂ" ಎಂದು ಪ್ರಸಿದ್ಧವಾದ ತನ್ನ ವಂಶದ ಉತ್ಕರ್ಷವನ್ನು ಎತ್ತಿಹಿಡಿಯುವುದರಲ್ಲಿ ಕವಿಯ ದೃಷ್ಟಿ ಎಂಬುದು ಸ್ಪಷ್ಟ ಪಡುತ್ತದೆ. 'ಕಾಮಂದಕ ನೀತಿ'ಯಲ್ಲಿ ಕಂಡುಬರುವ "ವರಯಾಜುಶ್ಶಾಖೆಯೊಳುಂ ಸ್ಫುರಿಪ ಪೌರಕುತ್ಸ ಗೋತ್ರಾಂಬುಧಿಯೊಳ್ ಹರಿಣಾಂಕಂ ಪುಟ್ಟಿದಂ" ಎನ್ನುವುದೂ ಮೇಲಿನ ಅಭಿಪ್ರಾಯಕ್ಕೆ ಅನುಗುಣವಾಗಿಯೇ ಇದೆ.

ಚಿಕುಪಾಧ್ಯಾಯನ ಪೂರ್ವಜರು ತೆರಕಣಾಂಬಿಗೆ ವಲಸೆ ಬಂದರೆಂದಾಗಲೀ ಅಥವಾ ಅಲ್ಲಿ ನೆಲಸಿದ್ದರೆನ್ನುವುದನ್ನಾಗಲೀ ಕವಿ ಎಲ್ಲೂ ಹೇಳಿಕೊಂಡಿರುವುದಿಲ್ಲ. ಕವಿಯೇ 'ಶ್ರೀರಂಗಮಾಹಾತ್ಮ್ಯ'ದಲ್ಲಿ ಹೇಳಿರುವಂತೆ

ಕುಲದಧಿದೈವಂ ವರದಂ
ಕುಲದೇವತೆ ವರದರಾಜನರಸಿ ನಿವಾಸ
ಸ್ಥಲಮಾ ಕಾಂಚೀನಗರಂ
ಬಳೆವಾಪಸ್ತಂಬ ಸೂತ್ರಮಾವಂಶಜರಾ ||

ಈತನ ಪೂರ್ವಜರ ಆವಾಸಸ್ಥಾನ ಕಂಚಿ ಎಂಬುದು ಸ್ಪಷ್ಟಪಡುತ್ತದೆ. ಈ (ತ್ರಿಕದಂಬ ಪುರದಲ್ಲಿ) ಕಂಚಿಯಲ್ಲಿ ಪ್ರಸಿದ್ಧವಾಗಿದ್ದ ಪೌರಕುತ್ಸಗೋತ್ರಾಂಬುಧಿಗೆ ಚಂದ್ರನಂತೆ ಈ ಕವಿ ಹುಟ್ಟಿದ ಎಂದು 'ಕಾಮಂದಕ ನೀತಿ'ಯಲ್ಲಿರುವ ಪದ್ಯಕ್ಕೆ ಅರ್ಥ ವಾಗುತ್ತದೆ. ಇದರಿಂದ ಕವಿಗೆ ತ್ರಿಕದಂಬಪುರವೆಂದರೆ ಕಂಚಿ ಎಂದೇ ಅಭಿಪ್ರಾಯ.

ಕಂಚಿ ಚಾರಿತ್ರಿಕವಾಗಿ ಪ್ರಸಿದ್ಧವಾದ ಸ್ಥಳ. ಧರಣಿಗೆ ಮುಖಪ್ರಾಯ ವಾಗಿರಲು ಸಾಧ್ಯ. ವಿದ್ವಾಂಸರ ನೆಲೆ ಆಗಿತ್ತು ಎಂಬುದು ಸುವಿದಿತ. ಇದೂ ಅಲ್ಲದೆ ಸಂಪದ್ಭರಿತವಾಗಿತ್ತು ಎನ್ನುವುದಕ್ಕೆ ಯಾವ ಅಡ್ಡಿಯೂ ಇಲ್ಲ. ತೆರಕಣಾಂಬಿ ಕವಿಯು ವಿಶೇಷಿಸಿರುವಷ್ಟು ಪ್ರಸಿದ್ಧ ನಗರಿಯಲ್ಲ. ಅದೂ ಅಲ್ಲದೆ ಕವಿಯ ಕಾಲಕ್ಕೆ ಅದಕ್ಕೆ ಇದ್ದ ಪ್ರಾಶಸ್ತ್ಯವೂ ಕುಂದಿತ್ತು. ಕಂಚಿಯಾದರೋ ಕವಿಯ ಕಾಲ ದಲ್ಲಿ ಮಾತ್ರವಲ್ಲದೆ ಅದಕ್ಕೆ ಪೂರ್ವದಲ್ಲೂ ಮತ್ತು ಇಂದಿಗೂ ಪ್ರಸಿದ್ಧವಾಗಿದೆ. ಆದಕಾರಣ ಕಂಚಿಯನ್ನೇ ಕವಿ ತ್ರಿಕದಂಬಪುರ ಎಂದು ಕರೆದಿದ್ದಾನೆ ಎಂದು ಹೇಳುವುದು ಸಾಧುವಾಗಿ ಕಂಡುಬರುತ್ತದೆ.

'ತ್ರಿಕದಂಬ' ಎಂದರೆ 'ಮೂರರ ಗುಂಪು' ಎಂದರ್ಥ. ಇದು ಕಂಚೀ ನಗರಿಗೆ ಸರಿಹೊಂದುತ್ತದೆ. ಶೈವ–ವೈಷ್ಣವ–ಜೈನ ಈ ಮೂರು ವರ್ಗದವರಿಗೂ ಪುಣ್ಯಕ್ಷೇತ್ರವಾದ ಈ ನಗರಿಯನ್ನು ಶಿವಕಂಚಿ ವಿಷ್ಣುಕಂಚಿ ಜಿನಕಂಚಿ ಎಂಬ ಅಭಿಧಾನಗಳಿಂದ ಕರೆಯುವುದು ಇಂದಿಗೂ ರೂಢಿಯಲ್ಲಿದೆ. ಹೀಗೆ ಈ ಮೂರು ವರ್ಗದವರ ಪುಣ್ಯಕ್ಷೇತ್ರಕದಂಬವಾಗಿರುವುದರಿಂದ ಈ ನಗರಿಗೆ ತ್ರಿಕದಂಬಪುರ ಎಂಬ ಹೆಸರು ಸರಿಹೊಂದುತ್ತದೆ. ಒಟ್ಟಿನಲ್ಲಿ ಚಿಕುಪಾಧ್ಯಾಯನು ತನ್ನ ಗ್ರಂಥದಲ್ಲಿ

ಉಲ್ಲೇಖಿಸಿರುವ 'ತ್ರಿಕದಂಬಪುರ' ಇದೇ ಅಭಿಧಾನದಿಂದ ಕೂಡಿದ್ದ ತೆರಕಣಾಂಬಿ ಅಲ್ಲ, ಕಂಚೀನಗರಿ ಎಂದು ಹೇಳುವುದು ಯುಕ್ತಿಯುಕ್ತವೂ ನ್ಯಾಯಸಮ್ಮತವೂ ಆಗಿದೆ.

ಚಿಕುಪಾಧ್ಯಾಯನು ತನ್ನ ಜನ್ಮಸ್ಥಳವನ್ನು ವಾಚ್ಯವಾಗಿ ಯಾವ ಗ್ರಂಥದಲ್ಲೂ ಹೇಳದಿರುವುದರಿಂದ ಮತ್ತು ಇತರ ಯಾವ ಆಧಾರಗಳೂ ದೊರೆಯದಿರುವುದರಿಂದ, ಈಗ ದೊರೆಯುತ್ತಿರುವ ಪ್ರಮಾಣಗಳಿಂದ ಈ ಕವಿಯ ಜನ್ಮಸ್ಥಳ ತೆರಕಣಾಂಬಿ ಎಂದು ನಿಷ್ಕರ್ಷಿಸಲು ಸಾಧ್ಯವಿಲ್ಲ.

—ಎಸ್. ಎನ್. ಕೃಷ್ಣಜೋಯಿಸ್

## ಬೂತು

### ಒಂದು ಟಿಪ್ಪಣಿ

ಭಾಷೆಯಲ್ಲಿ–ಯಾವುದೇ ಭಾಷೆ ಆಗಿರಲಿ–ಶಬ್ದಪ್ರಯೋಗ ಮುಖ್ಯವಾದುದು. ಪ್ರಯೋಗವಾಗುವ ಶಬ್ದಗಳಿಗೆ ಸಂದರ್ಭಾನುಸಾರ ಅರ್ಥವಾಗುವುದುಂಟು. ಕೆಲವು ವೇಳೆ ಒಂದು ಶಬ್ದಕ್ಕೆ ಅನೇಕ ಅರ್ಥಗಳು ಸ್ಫುರಿಸುತ್ತವೆ. ಕೆಲವೊಮ್ಮೆ ಮನೋಭಾವದ ಮೇಲೆ, ಇನ್ನು ಕೆಲವೊಮ್ಮೆ ವ್ಯಾಕರಣದ ನಿಯಮಗಳಿಗನುಸಾರವಾಗಿ ಅರ್ಥಗಳನ್ನು ಪತ್ತೆಹಚ್ಚಬೇಕಾಗುತ್ತದೆ. ಶಬ್ದಗಳ ಅರ್ಥನಿರ್ಣಯದಲ್ಲಿ ವಿರೋಧಾಭಿಪ್ರಾಯಗಳು ಬಂದು ವಿವಾದ ಉಂಟಾಗಬಹುದು. ಅಂತಹ ಸಂದರ್ಭಗಳಲ್ಲಿ ಶಬ್ದದ ಧಾತುರೂಪಕ್ಕೆ ಇರುವ ಅರ್ಥದ ಮೇಲೆ ಅರ್ಥವನ್ನು ನಿರ್ಣಯಿಸಬೇಕಾಗುತ್ತದೆ. ಮತ್ತು ಸೋದರ ಭಾಷೆಗಳಲ್ಲಿ ಆ ಅರ್ಥಬರುವ ಶಬ್ದರಚನೆಯತ್ತ ದೃಷ್ಟಿ ಹರಿಸುವುದೂ ಉಂಟು. ಹೀಗೆ ಜಿಜ್ಞಾಸೆಗೆ ಒಳಗಾಗಿರುವ 'ಬೂತು' ಶಬ್ದದ ಪ್ರಯೋಗ, ಅದರ ಅರ್ಥ ಮತ್ತು ಮೂಲವನ್ನು ಕುರಿತು ವಿಚಾರನಡಸುವುದು ಈ ಟಿಪ್ಪಣಿಯ ಉದ್ದೇಶವಾಗಿದೆ.

'ಬೂತು' ಶಬ್ದಕ್ಕೆ ಭಾರತ ನಿಘಂಟಿನಲ್ಲಿ 'ಭಂಡ' ಎಂದು ಅರ್ಥ ಹೇಳಲಾಗಿದೆ.[1] ರೆ. ಫಾ. ಕಿಟ್ಟೆಲ್ ಅವರು ಈ ಶಬ್ದಕ್ಕೆ Foul, Shameless, obscenity ಎಂದೂ, a shameless man, obscene man (ಬಣ್ಣ)[2] ಎಂದು ಅರ್ಥ ಕೊಡುತ್ತಾ, ಅವರೂ ಭಾರತ ನಿಘಂಟನ್ನು ಆಧಾರ ಕೊಡುತ್ತಾರೆ. ಈ ಧಾತುರೂಪದಿಂದ ಬೂತಟ್ಟು,[3] ಬೂತುಗ,[4] ಬೂತುಗೆಯ್,[5] ಬೂತುತನ[6] ಮೊದಲಾದ ಶಬ್ದಗಳು ಉಂಟಾಗುತ್ತವೆ.

ಶಬ್ದಮಂಜರಿ ಕೋಶದಲ್ಲಿ[7] 'ಬೂತು' ಅಚ್ಚಗನ್ನಡ ಶಬ್ದವೆಂದು ಅರ್ಥ ಹೇಳಿದೆ. ಭಟ್ಟಾಕಳಂಕನ ಶಬ್ದಾನುಶಾಸನದಲ್ಲಿ 'ಬೂತು' ಎಂದಾಗ 'ಭಂಡ'[8] ಎಂಬರ್ಥ ಬಂದಿದೆ.

ಇನ್ನು ಸಾಹಿತ್ಯಕೃತಿಗಳಲ್ಲಿ ಈ ಶಬ್ದದ ಪ್ರಯೋಗ ಮತ್ತು ಅರ್ಥಗಳನ್ನು ಗಮನಿಸೋಣ.

ಕನ್ನಡದಲ್ಲಿ ಉಪಲಬ್ಧವಿರುವ ಮೊದಲನೆ ಗದ್ಯಕೃತಿ ವಡ್ಡಾರಾಧನೆಯಲ್ಲಿ[9] ಈ ಶಬ್ದ ಪ್ರಯೋಗವಾಗಿರುವ ಸಂದರ್ಭ ಈ ರೀತಿ ಇದೆ. ಜೈನಯತಿಗಳಲ್ಲಿ ಅಪಾರ ನಂಬಿಕೆಯನ್ನು ತಳೆದಿದ್ದ ರಾಜನಲ್ಲಿ ಅವರ ಬಗೆಗೆ ಅಪನಂಬುಗೆಯನ್ನುಂಟುಮಾಡಲು ಮಂತ್ರಿ ಹಾಗೂ ರಾಣಿಯರು ಒಟ್ಟುಗೂಡಿ ಹೂಡುವ ಸಂಚು ಇದು. ಆದುದರಿಂದ ಒಬ್ಬ ಅಲ್ಪವ್ಯಕ್ತಿಯನ್ನು ಹಣದಾಸೆ ತೋರಿಸಿ ಒಪ್ಪಿಸಿ, ತಲೆ ಕೆರಿಸಿ, ಜೈನಯತಿಗಳಂತೆ ರೂಪಿಸಿ, ರಾಣಿಯೊಡನೆ ಸರಸವಾಡಲು ನಿಯೋಜಿಸುತ್ತಾರೆ. ಇಂತಹ ಹೇಯಕೃತ್ಯಕ್ಕೆ ಮನಮಾಡುವವನು ಅಲ್ಪನೇ ಸರಿ, ಭಂಡನೇ ಹೌದು. ಎಂತಲೇ ಕವಿ ಅವನನ್ನು ಕುರಿತು 'ಬೂತಿಂಗೆ' ಎಂದು ಹೇಳಿದ್ದಾನೆ.

ಪಂಪಭಾರತದಲ್ಲಿ ಅನೇಕ ಸಂದರ್ಭಗಳಲ್ಲಿ ಈ ಶಬ್ದದ ಪ್ರಯೋಗವಾಗಿದೆ.[10] ಆಯಾಸಂದರ್ಭಗಳಲ್ಲಿ ಅಲ್ಪ, ಪ್ರಾಣಿ, ಸಾಮಾನ್ಯ, ಎಂಬೆಲ್ಲ ಅರ್ಥಗಳು ಉಂಟಾಗುತ್ತವೆ. ಇದಲ್ಲದೆ 'ಭಂಡ' ಎಂಬರ್ಥದಲ್ಲಿಯೂ ಪ್ರಯೋಗವಾಗಿದೆ.[11] ಇದರ ಸಂಪಾದಕರಾದ ದಿ|| ಶ್ರೀಮಾನ್ ಬೆಳ್ಳಾವೆ ವೆಂಕಟನಾರಣಪ್ಪನವರು ಅರ್ಥ ಕೊಡುತ್ತಾ "ಬೂತು = ಭೂತ (ಸಂ) ಪ್ರಾಣಿ, ಆವೇಶ" ಎಂದು ಹೇಳಿದ್ದಾರೆ. ಕೆಲವೊಂದು ಸಂದರ್ಭಗಳಲ್ಲಿ ಈ ಅರ್ಥ ಒಪ್ಪಬಹುದಾದರೂ ಈ ಶಬ್ದ ಸಂಸ್ಕೃತದ ತದ್ಭವವೆಂಬಂಶ ಅನುಮಾನಾಸ್ಪದವಾಗಿದೆ. ಇದೇ ರೀತಿಯ ಅರ್ಥವನ್ನೂ ವ್ಯುತ್ಪತ್ತಿಯನ್ನೂ ಹಿರಿಯ ಆಚಾರ್ಯರುಗಳಾದ ಪ್ರೊ. ಟಿ. ಎಸ್. ವೆಂಕಣ್ಣಯ್ಯನವರೂ, ಪ್ರೊ. ಡಿ. ಎಲ್. ನರಸಿಂಹಾಚಾರ್ಯರೂ,[12] ಪ್ರೊ. ತೀ. ನಂ. ಶ್ರೀಕಂಠಯ್ಯನವರೂ ಕೊಟ್ಟಿದ್ದಾರೆ.[13] ಸಿದ್ಧರಾಮಚಾರಿತ್ರದ "ತನ್ನಂ ಪೊಗಳ್ವ ಬೂತೀತ" ಎಂದಾಗ ಅದರ ಅರ್ಥವನ್ನು ಪ್ರೊ. ಟಿ. ಎಸ್. ವೆಂ. ಮತ್ತು ಪ್ರೊ. ಡಿ. ಎಲ್. ಎನ್. ಅವರು "ಬೂತ:= (ತ್ಸ) ಭೂತ ; ಅಲ್ಪ"[14] ಎಂದು ಹೇಳಿದ್ದಾರೆ. ರನ್ನ ಮಹಾಕವಿಯ ಸಾಹಸಭೀಮ ವಿಜಯವನ್ನು ಸಂಗ್ರಹಿಸುತ್ತಾ ಪ್ರೊ. ತೀ. ನಂ. ಶ್ರೀಯವರು ಬೂತು = (ಸಂ) ಭೂತ: ಈ ಶಬ್ದಕ್ಕೆ ಪ್ರಾಣಿ ಎಂದು ಅರ್ಥ ಮಾಡಬಹುದು,[15] ಎಂದು ಹೇಳಿದ್ದಾರೆ. ಈ ಎಲ್ಲ ವಿದ್ವಾಂಸರುಗಳ ಅಭಿಪ್ರಾಯದಲ್ಲಿ 'ಬೂತು' ಸಂಸ್ಕೃತ 'ಭೂತ' ಶಬ್ದದ ತದ್ಭವರೂಪ ಎಂದೇ ಆಗಿದೆ. ಆದರೆ ಈ ಅಂಶ ಸಂದೇಹಾಸ್ಪದವಾಗಿದೆ.

ಕೇಶಿರಾಜ ತದ್ಭವ ಪ್ರಕರಣದಲ್ಲಿ ಸೂತ್ರವನ್ನು ಹೇಳುವಾಗ, ಸಂಸ್ಕೃತ ಶಬ್ದಗಳು ತದ್ಭವರೂಪ ತಳೆವಲ್ಲಿ ಕ, ಚ, ಟ, ತ,ಗಳು ಗ, ಜ, ಡ, ದ ಗಳಾಗುತ್ತವೆ. ಖ, ಛ, ಠ, ಥ, ಫ,ಗಳು ಕ, ಚ, ಟ, ತ, ಪ,ಗಳಾಗುತ್ತವೆ. ಘ, ಝ, ಢ, ಧ, ಭ,ಗಳು ಗ, ಜ, ಡ, ದ, ಬ,ಗಳಾಗುತ್ತವೆ[16] ಎಂದು ಹೇಳಿ ಪ್ರಯೋಗವನ್ನು ಕೊಡುವಾಗ

'ತ'ಕಾರವು 'ದ'ಕಾರವಾಗುವಲ್ಲಿ ಉದಾಹರಣೆಗಳನ್ನು ಜಾತಿ > ಜಾದಿ, ವಸತಿ > ಬಸದಿ, ಚತುರಂ > ಚದುರಂ, ಭೂತಿ > ಬೂದಿ ಮೊದಲಾದ ಉದಾಹರಣೆಗಳನ್ನು ಕೊಟ್ಟಿದ್ದಾನೆ. ಹಾಗೆಯೆ ಭ > ಬ ಆಗುವಲ್ಲಿ ಶುಭಂ > ಸುಬಂ ; ಕುಂಭಂ > ಕುಂಬಂ ; ಭೇರಿ > ಬೇರಿ ; ಭೀಮ > ಬೀಮಂ ; ಭೋಗಂ > ಬೋಗಂ ಮೊದಲಾದ ಉದಾಹರಣೆಗಳನ್ನು ಕೊಟ್ಟಿದ್ದಾನೆ. ಭೂತ > ಬೂತು ಆಗಿರುವಲ್ಲಿ 'ಭೂತ'ದಲ್ಲಿನ ಅಕಾರಾಂತವಾಗಿರುವ 'ತ' 'ಬೂತು' ಎಂಬಲ್ಲಿ 'ಉ'ಕಾರಾಂತವಾಗಿದೆ. ಈ ಪ್ರಕರಣದಲ್ಲಿ ತನ್ನ ಹಿಂದೆ ಇದ್ದ ಅನೇಕ ಕೃತಿಗಳಲ್ಲಿ ಪ್ರಯೋಗವಾಗಿರುವ 'ಬೂತು' ಶಬ್ದದ ಬಗೆಗೆ ಯಾವ ಮಾತನ್ನೂ ಹೇಳಿಲ್ಲ. ಇದಕ್ಕೆ ಎರಡು ಕಾರಣಗಳಿರಬೇಕು. ಒಂದು, ಇದು ಸಂಸ್ಕೃತದಿಂದ ತದ್ಭವ ರೂಪ ತಳೆದ ಶಬ್ದವಲ್ಲ; ಎರಡು, ಈ ಶಬ್ದಪ್ರಯೋಗ ಆ ಕಾಲಕ್ಕೆ ಜನ ಬಳಕೆಯದಾಗಿದ್ದು ಇದರ ಮೂಲರೂಪ ಸಂದಿಗ್ಧವಾಗಿದ್ದಿರಬೇಕು. ಇದರಲ್ಲಿ ಮೊದಲನೆ ಕಾರಣವೇ ಸರಿ ಎಂದು ನಮ್ಮ ನಮ್ರಭಾವನೆ. ಭಟ್ಟಾಕಳಂಕನೂ ಕೂಡ 'ಉದ್ರೂಪಸ್ಯ'[17] ಸೂತ್ರದಲ್ಲಿ 'ಅ'ಕಾರಾಂತ ಶಬ್ದವಾದ 'ರೂಪ' 'ರೂಪು' ಎಂಬ ತದ್ಭವ ರೂಪನ್ನು ತಳೆಯುತ್ತದೆ ಎಂದು ಹೇಳಿದ್ದಾನೆ. ಇಲ್ಲಿ 'ಉ'ಕಾರವು ವಿಕಲ್ಪವಾಗಿ ಆದೇಶವಾಗುತ್ತದೆ. ಇಲ್ಲಿ ಭೂತ > ಬೂತು ಆಗುವುದಿದ್ದರೆ ಇದನ್ನೂ ರೂಪ > ರೂಪು ಶಬ್ದದ ಜೊತೆಯಲ್ಲಿ ನಿತ್ಯವಾಗಿ ಬಳಸಲ್ಪಡುತ್ತಿದೆ ಎಂದು ಉದಾಹರಿಸುತ್ತಿದ್ದನು. ಆದರೆ ಈ ಸೂತ್ರಕ್ಕೆ 'ರೂಪ' ಒಂದೇ ಶಬ್ದವನ್ನು ಕೊಟ್ಟಿರುವುದರಿಂದ ಬಹುಶಃ ಇದು ದೇಶೀ ಶಬ್ದವಾಗಿರುವುದೇ ಕಾರಣವೆಂದು ಭಾವಿಸಬಹುದು. ಪಂಚದ್ರಾವಿಡ ಭಾಷೆಗಳಲ್ಲಿ ಒಂದಾದ ತೆಲುಗು ಭಾಷೆಯಲ್ಲಿ "ಬೂತು" ಶಬ್ದದ ಪ್ರಯೋಗವಿದೆ.[18] ಆದರೆ ಕನ್ನಡ, ತೆಲುಗು ಈ ಭಾಷೆಗಳ ಹೊರತಾಗಿ ಇತರ ದ್ರಾವಿಡ ಭಾಷೆಗಳಲ್ಲಿ ಈ ಪ್ರಯೋಗ ಇದುವರೆಗೂ ನಮಗೆ ದೊರಕಿಲ್ಲ.

ಆಧುನಿಕ ಧ್ವನಿಶಾಸ್ತ್ರದ ರೀತ್ಯಾ ಪೂರ್ವ ಅಕ್ಷರದಲ್ಲಿನ 'ಊ'ಕಾರವು ಉತ್ತರ ಅಕ್ಷರದ ಹ್ರಸ್ವದ ಮೇಲೆ ಪ್ರಭಾವ ಬೀರಿ 'ಉ'ಕಾರವಾಗುವುದು ಸಾಧ್ಯವಿದೆ ಎಂಬಂಶ ವ್ಯಕ್ತವಾಗುತ್ತದೆ[19]. ಉದಾಹರಣೆಗೆ ದ್ಯೂತ > ಜೂದು > ಜೂಜು. ಇಲ್ಲಿ ಸಂಸ್ಕೃತದ 'ಯ'ಕಾರವು 'ಜ'ಕಾರವಾಗುತ್ತದೆ. 'ದ್ಯೂತ' ಎಂದಾಗ ಸ್ಫುರಿಸುವ ಅರ್ಥವೇ ಜೂಜು, ಜೂದು ಎಂದಾಗಲೂ ಸ್ಫುರಿಸುತ್ತದೆ. ಆದರೆ 'ಭೂತ' ಎಂದಾದ ಸ್ಫುರಿಸುವ ಅರ್ಥ 'ಬೂತು' ಎಂದಾಗ ಸ್ಫುರಿಸುವುದಿಲ್ಲ. ಇಲ್ಲಿ 'ಭೂ' > 'ಬೂ' ಆಗಿದೆ ಮತ್ತು ತ > ತು ಆಗಿದೆ. ಆದುದರಿಂದ ಇದರ ಮೂಲ ಸಂದಿಗ್ಧವಾಗಿಯೇ ಇದೆ.

ಈ ಶಬ್ದ ಪ್ರಯೋಗವು ಆದಿಪುರಾಣ[20], ಅಜಿತಪುರಾಣ [21], ಶಾಂತಿಪುರಾಣ[22], ಧರ್ಮಾಮೃತ[23] ಲೀಲಾವತಿ[24] ವರ್ಧಮಾನ ಪುರಾಣ[25], ಕುಮಾರ

ರಾಮನ ಸಾಂಗತ್ಯ[26], ಪದಾರ್ಥಸಾರ[27], ಹರಿವಂಶಾಭ್ಯುದಯ,[28] ಪಕ್ಷಿಮರಂಗ ಧಾಮಸಾಂಗತ್ಯ[29], ಮೊದಲಾದ ಕೃತಿಗಳಲ್ಲೇ ಅಲ್ಲದೆ, ಕುಮಾರವ್ಯಾಸ ಭಾರತ[30], ರಾಮಾಶ್ವಮೇಧ[31]—ಕೃತಿಗಳಲ್ಲಿ ಅಲ್ಪ, ಕೀಳ, ಸಾಮಾನ್ಯ, ಭಂಡ ಎಂಬರ್ಥದಲ್ಲಿ ಆಗಿದೆ.

ಈ ಎಲ್ಲ ಪ್ರಯೋಗಗಳನ್ನು ಗಮನಿಸಿದಾಗ ಈ ಶಬ್ದವು ಭಂಡ, ನೀಚ, ಅಲ್ಪ, ಸಾಮಾನ್ಯ ಮೊದಲಾದರ್ಥಗಳುಳ್ಳ ಅಚ್ಚಗನ್ನಡ ಶಬ್ದವಾಗಿರಬಹುದೆಂದು ನಮ್ಮ ಭಾವನೆಯಾಗಿದೆ. ಮತ್ತು ಸಂಸ್ಕೃತದ 'ಭೂತ' ಶಬ್ದದಿಂದ ನಿಷ್ಪನ್ನವಾದುದಲ್ಲವೆಂದು ಹೇಳಬಹುದಾಗಿದೆ.

—ಆರ್. ರಾಜಪ್ಪ

## ಅಡಿಟಿಪ್ಪಣಿಗಳು

1 "ಬೂತುಗಳೆನೆ ಬಂಡರೆಂದು ತಿಳಿಗೆ"—ಭಾರತ ನಿಘಂಟು, ಪು. ೩೯.

2 ಕನ್ನಡ–ಇಂಗ್ಲಿಷ್ ನಿಘಂಟು—ಎಫ್. ಕಿಟ್ಟೆಲ್. ಪು. ೧೧೩೩. ಪ್ರಕಟಣೆ: ೧೮೯೪.

3 "ಎಂದಿಂದ್ರಮೃಗೇಂದ್ರನಂತೆ ಗರ್ಜಿಸಿ ಚತುರಂಗ ಬಲಸಮೇತ ಪೊಜಮಟ್ಟು ಬೂತಟ್ಟೆದೊಡೆ"—'ಶಾಂತಿಪುರಾಣ' ೬-೮೧; ಇಲ್ಲಿ 'ಬೆದರಿಕೆ ಹಾಕು' ಎಂಬರ್ಥದಲ್ಲಿ ಪ್ರಯೋಗವಾಗಿದೆ.

4 'ಶಬ್ದಮಣಿದರ್ಪಣ'; ಸೂತ್ರ ೨೧೨. ಪ್ರಯೋಗ: ಗಪ್ರತ್ಯಯಕ್ಕೆ "ಮಾತುಗಂ, ಬೂತುಗಂ".—(ಪ್ರ: ಶಾರದಾಮಂದಿರ, ೧೯೬೪)—ಬೂತುಗ ಎಂಬ ಒಬ್ಬ ರಾಜನಿದ್ದುದೂ ಗಮನಾರ್ಹವಾದುದು.

5 "ಬಲ್ಮರುಳ್ಮೆಯ್ಯನಾನರಿತೆ ನತದ್ದೂಷಕಬೂತುಗೆಯ್ಯುತುಂ"—ಪದ್ಮರಾಜಪುರಾಣ —೫-೧೧.

6 "ಬೂತುತನಂ ಪೆಱಗಾಗಿ ಮಾತುಗುಟ್ಟಿದಪಳ್" "ಲೀಲಾವತೀ ಪ್ರಬಂಧಂ" ಪದ್ಯ ೧೦೦, ಪು. ೩೮, (ಪ್ರ: ಶಾರದಾಮಂದಿರ, ೧೯೬೬.)

7 ಶಬ್ದಮಂಜರಿಕೋಶ: ಪು ೨೩೬; ಸಂ. ತೂರಮರಿ; ೧೮೯೦ನೇ ಮುದ್ರಣ.

8 "ತೇನಜೀವತಿ ಗವಣಿಗೌ'—ಅದರಿಂದ ಜೀವಿಸುತ್ತಾನೆ ಎಂಬರ್ಥದಲ್ಲಿ ತೃತೀಯಾಂತದ ಮೇಲೆ 'ಗ' ಪ್ರತ್ಯಯವೂ 'ವಣಿಗ' ಪ್ರತ್ಯಯವೂ ವಿಕಲ್ಪವಾಗಿ ಬರುವುವು. "ಬೂತು ಭಂಡಿಮಾತದುಪಜೀವಿ"—ಎಂದು 'ಬೂತುಗ' ಶಬ್ದಕ್ಕೆ ಅರ್ಥಮಾಡಿದೆ.-ಶಬ್ದಾನುಶಾಸನ: ಸಂ| ಶಿ. ಶಿ. ಬಸವನಾಳರ, ಸೂತ್ರ. ೪೧೫, ಪುಟ ೫೩೭ (೧೯೪೧.)

9 "ಸುವ್ರತೆಯೆಂಬ ಮಹಾದೇವಿಯೊಡನೆ ಮಂತ್ರಿ ಕಜ್ಜಮುಂ ಸಮುಕಟ್ಟಿಯೊಂದು ದಿವಸ ಮೊರ್ವ ಬೂತಿಂಗೆ ದ್ರಮ್ಮವನಾನ್ತವನ ತಲೆಯಂ ಕಿರಿಸಿ ಕರಿಯ ಕೋವಣವನುಡಿಸಿ ಪಲ್ಗಳೊಳ್ ಕವಡಿಕೆಯಂ ಕಟ್ಟಿಸಿ ಕುಂಚಮುಂ ಕೊಟ್ಟು............ಕಟಿಪಿದ ಬಟಿಕ್ಕೆ ಬರ್ಪೊನನ್ನೆಗಮಾ ಬೂತುಮಾ ಪ್ರಸ್ತಾವದೊಳ್.........." ವಡ್ಡಾರಾಧನೆ: ಪು ೧೭೦. ಪಂಕ್ತಿ ೧೦ ಮತ್ತು ೧೫; ಪರಿಷತ್ಪ್ರಕಟಣೆ, ೧೯೪೯.

10 ೧ "ಪುರೋಚನನೆಂಬ ಬೂತು ಸುಯೋಧನನ ಬೆಸದಿಂ ನಮಗಿನಿತಾವರಂಗೆಯ್ವುದೆಲ್ಲಂ ನಮ್ಮಂ ಮೆಳ್ಪಡಿಸಲೆಂದೆ ಮಾಡಿದಂ"—ಪಂಪಭಾರತ (೩-೪ ವ.).

೨ "ಅಂತು ದ್ರುಪದನ ಪೊೞಲೊಳ್ ಪಾಂಡವರ್ ಚಾಗಕ್ಕೆ ಬೂತುಂ ಭೋಗಕ್ಕೆ ಪೊಟ್ಟುಂ ನೆರೆಯವೆನಿಸಿ—ಅದೇ: (೩-೪ ವ.)

೩ "............ ಮತ್ತಿನ ಬೂತು ತಪಂಗಳೆಸ್ಮ ಪು
ರ್ವಿನ ಕಡೆಯೊಂದು ಜರ್ವಿನೊಳೆ ತೀರ್ಪುವಲ್ಲದೆ ........"—ಅದೇ (೭-೮೧)

೪ "ತಲೆಯೊಳ್ ನಾಲಗೆಯುಳ್ಳ ಬೂತುಗಳ್ಗೆಲ್ಲವಿಲ್ಲೆನದೀಯುತ್ತುಂ"—ಅದೇ, (೧೨-೫೨ ವ.)

11 "ಭೇರಿಯಂ ತಾಡಿಸಿಯುಮೇಗೆಯ್ದುಂ ಪೊಱಮಡದಿರೆ ಭೀಮಸೇನನೆನ್ನ ಸರಂಗೇಳ್ದಲ್ಲದೀ ಬೂತು ಪೊಱಮಡುವನಲ್ಲ" ಅದೇ (೧೩–೭೬ ವ.).

12 "ಸಿದ್ಧರಾಮ ಚಾರಿತ್ರ'—, ೧-೩ ; ಸಂ। ಪ್ರೊ. ಟಿ. ಎಸ್. ವೆಂ. ಮತ್ತು ಪ್ರೊ. ಡಿ. ಎಲ್. ಎನ್. ಕರ್ಣಾಟಕ ಸಂಘ, ಶಿವಮೊಗ್ಗ—ಪ್ರಕಟಣೆ: ೧೯೪೧.

13 "ಆ ನುಡಿಗೆ ಸೈರಿಸಲಾರದೀ ಬೂತೆನ್ನ ಸರಂಗೇಳ್ದೊಡಲ್ಲವೆ ಪೊಱಮಡುವವನಲ್ಲಂ" ಗದಾಯುದ್ಧಸಂಗ್ರಹಂ ; ೭–೨೯. ಸಂ. ಪ್ರೊ. ತೀ. ನಂ. ಶ್ರೀ., ಕಾವ್ಯಾಲಯ ಪ್ರಕಟಣೆ, ೧೯೬೩.

14 ಸಿದ್ಧರಾಮ ಚಾರಿತ್ರ—ಪುಟ ೧೯೮.

15 ಗದಾಯುದ್ಧ ಸಂಗ್ರಹ—ಪುಟ ೧೩೦.

16 "ಶಬ್ದಮಣಿ ದರ್ಪಣ'—ಸೂತ್ರ ೨೫೫ ; ಪು. ೩೯೭–೯೯, (ಮಂಗಳೂರು.)

17 'ಉದ್ರೂಪಸ್ಯ'—ಪೂರ್ವಪದಭೂತವಲ್ಲದ 'ರೂಪ' ಶಬ್ದದ ಕೊನೆಗೆ 'ಉ' ಕಾರಾದೇಶವು ವಿಕಲ್ಪವಾಗಿ ಬರುವುದು. ರೂಪ>ರೂಪು. ಶಬ್ದಾನುಶಾಸನ, ಸೂತ್ರ ೧೨೧. ಪುಟ ೨೧೯.

18 Būtu (Tel) Foul, Shameless—DED, 1961, P. 289.

19 ಈ ಅಂಶವನ್ನು ಸೂಚಿಸಿ ವಿಚಾರಮಾಡಲು ಹೇಳಿದ ಡಾ. ಎಂ. ಚಿದಾನಂದಮೂರ್ತಿಯವರಿಗೆ ಲೇಖಕ ಋಣಿ.

20 "ಅರುಣಜಲಪರಿಪೂರ್ಣ ವಾಪಿಯಂ ಸಮೆಯಿಸಿದೊಡದಂ ಕಂಡು ರಾಗಿಸಿ ಪೊಕ್ಕು ನೀಡುಮೋಲಾಡಿ ಮುಕ್ಕುಳಿಸಿ ನೋಡಿ ಕೃತರುಧಿರಮಪ್ಪುದನಱಿದೀ ಬೂತೆನ್ನಂ ಬಂಚಿಸಿದನೆಂದು"—ಆದಿಪುರಾಣ: ೨–೧೪ ವ., ಸಂ. ಕೆ. ಜಿ. ಕುಂದಣಗಾರ, ಬೆಳಗಾವಿ ೧೯೫೩.

21 "ನೆರೆದ ಬೂತುಗಳ ಕೋಳಾಹಳರವಂಗಳಿಂ"—ಅಜಿತ ಪುರಾಣತಿಲಕಂ: ೪–೭. (೧೯೫೯)

22 "ಬೀಡಂ ಬಿಟ್ಟು ಮಡುವೆ ನೆರೆದಿರ್ದ ವರನುಮಂ ನೆರೆದಿರ್ದ ನೃಪವರರುಮಂ ಮೂದಲಿಸಿ ಮಾತಂ ಬೂತುಮನಟ್ಟುವುದಂ"—ಶಾಂತಿಪುರಾಣ ; ೫–೪೭ ವ. (ಮದರಾಸು, ೧೯೨೯)

23 (1) "ಜಗೆವಂದೀ ಬಾಡೀ ಕೂಟಿಗಣಿತರುಚಿಯೂದುವಕ್ಕ ನಿನ್ನಂತಾರೀ ಜಗದೊಳಡಬಲ್ಲರೆನ್ನುತೆ ಮಿಗೆ ಪೊಗಟ್ದಿಂಬುವನೆ ರುಷಿಯರೊಳ್ ಬೂತೆನಿಕುಂ" ಧರ್ಮಾಮೃತ ಸಂಗ್ರಹ, ೫–೯೮.

(2) "ಎರ್ದೋಡುವನಟ್ಟಬೇಡುವನಣಂ ನಾಣಿಲ್ಲ ಬೂತೆಂದು ದೂಱುವರಾರಾದೊಡಂ" ಅದೇ. ೭–೩೮

(3) "ಬೂತಿನಂತೆ ಪೆಂಪಿಲ್ಲದೆ" ಅದೇ ೨-೧೫೫.

24 "ಜಾತಿಸೂಳೆಗೆ ರಣಭೀತನ ಪುಸಿನುಡಿವಾತನ ಖಳನ ಕೆಳೆಯುನ ಬದಗನ ಬೂತಿನ ಮಾತು ದಿಟವುಲ್ತು"—ಲೀಲಾವತಿ ಪ್ರಬಂಧಂ: ೨–೩೪ (ಮೈಸೂರು ೧೯೬೬.)

25 "ಅವಜಿಯುದನ್ನನಶ್ವಗ್ರೀವಂಬೇಱಿಸೂರ್ವನಾಗಳಾದನೆಂ ಗಳ ಗ॥
ಜ್ರಾವಷ್ಟಂಭದಿನೆನಿತಂ ಜಾವಳಿಸುವೆಯೆಲವೊ ಪೂತಸೋ ನೀಂ ಬೂತೋ"
—ವರ್ಧಮಾನ ಪುರಾಣಂ; ೭–೫೮ (೧೯೫೩.)

26 "ಜಾತಿಸೂಳೆಗೆ ಜಡಿನುಡಿದು ಜಗಳವಾಡುವಾತನೊಳನೃತವಾದಿಯೊಳು
ಬೂತಿನೊಳ್ಮೇಕುದೋಱುವನೊಳಾಡುವುದದು ನೀತಿಯಲ್ಲಱಿ ಜೆಲೆವೆಣ್ಗೆ"
—ರಾಮನಾಥಚಾರಿತ್ರ ೨೮–೬೪ (೧೯೬೪.)

27 ತಱುಱಿಗರ ತೊನ್ನರ ದೊಂಬುಗಳಳಿಪರ ಬೂತುಗಳ ಕಾರುಕರ್ಕಳ ಪೆಱರುಂ ಕೆಯೆ ಕಿಸುಗುಳರ ಲೋಳಿಯ ಗುಳಿಗೆಗಳಂ ಮುಟ್ಟಲಕ್ಕುಮೆ ಸೂಳೆಯರಂ"—ಪದಾರ್ಥಸಾರ: ಸಮುದಾಯ ಪೊಘಣಂದಿ; ೬೦೧–೪ ಹಸ್ತಪ್ರತಿ ಕೆ. ಎ. ೩೨೫. ಓ. ರಿ. ಇ. ಮೈಸೂರು.

28 "ಅರ್ಜುನಂ ಕರ್ಣನಲ್ಲಿಗೆ ನಾಳೆ ಪೆಱರ್ತೊಡರದೆ ತಾನುಮಾನುಂ ಕಾದುವಮೆಂಬುದಂ ಪೇಳ್ದು ಬನ್ನಿಮೆಂದು ಬೂತನಟ್ಟದೊಡವರ್ಬಂದು ಕರ್ಣನರ್ ಕಾಣ್ಬಾಗಳ್"—ಬಂಧುವರ್ಮನ ಹರಿವಂಶಾಭ್ಯುದಯ, ೧೨–೩೧ ವ. ಹಸ್ತಪ್ರತಿ, ಕೆ. ४. ಓ. ರಿ. ಇ. ಮೈಸೂರು.

29 "ಬೂತಿಗೆ ಭಂಡಗೆ ಕಾಕಗೆ ಕಳ್ಳಗೆ ಪ್ರೇತಿಗೆ ಕಷ್ಮಸಿಷ್ಮುರಗೆ ನೀನೆ ಗತಿ"—ಚಿಕ್ಕುಪಾಧ್ಯಾಯನ ಪಶ್ಚಿಮರಂಗಧಾಮ ಸಾಂಗತ್ಯ, ೩–೩೨; ಹಸ್ತಪ್ರತಿ, ಕೆ. ಬಿ. ೨೫೦. ಓ. ರಿ. ಇ ಮೈಸೂರು.

30 (೧) "ಭೀತಿಮನದಲಿ ಪೌರುಷಾಂಗದ
ಮಾತು ಮುಖದಲಿ ಮುರಿವು ಕಾಲಲಿ
ಬೂತುಗಳು ಕುರುವೀರರೆನುತಿದಿರಾದುವರಿಸೇನೆ"
(ದ್ರೋಣಪರ್ವ ಸಂ. ೧೫. ಪ. ೨೫.)

(೨) "ಬೂತಿನ ಬೀಕಲನ ಬಡಗಿಯುನು" (ಸಂ. ೧೬. ಸ. ೧೫.)

31 "ಇಹಕಂ ಪರಕಂ ಪೆಱಗಾದ ಬೂತಾವೆಂ"—ರಾಮಾಶ್ವಮೇಧ; ಪು. ೧೦೫, ಪಂಕ್ತಿ ೧. ಕಾವ್ಯಾಲಯ ಪ್ರಕಾಶನ, ೧೯೫೭.

ಕವಳಿಗೆ :

ಕಿಟ್ಟೆಲ್ ಕೋಶದಲ್ಲಿ ಈ ಶಬ್ದದ ಎರಡು ಪ್ರಯೋಗ ಮತ್ತು ಅರ್ಥ ನೀಡಲಾಗಿದೆ ೧. ಕವಳಿಗೆ ಕಪಾಲಿಕೆಯ ತದ್ಭವ.

Siva's alms-pot, a skull, a kind of metal Vessel of various dimensions. ೨. ಕವಳಿಗೆ = ಕವಳಿಕ. A quantity embraced: a pack or bundle of betel or plantain leaves; a pack of written palm-leaves. ಕವಳಿಗೆ ಮನೆ—A house with a gable—roof ಕವಳಿಗೆ ಸೂರು A coupled or gable roof. ಕವಳಿಗೆ ಹಾರು = ಕವಳಿಗೆ ಸೂರು.

'ಕವಳಿಕಾ' ಶಬ್ದಕ್ಕೆ ಆಪ್ಟೆಯವರ ನಿಘಂಟಿನಲ್ಲಿ A bandage ಎಂಬ ಅರ್ಥ ನೀಡಲಾಗಿದೆ.

ಆದರೆ ಕವಳಿಗೆ ಮನೆ ಓಲೆಗರಿಯ ಕಟ್ಟು, ವೀಳೆಯದೆಲೆಯ ಕವಳಿಗೆ ಮೊದಲಾದ ಪ್ರಯೋಗಗಳಲ್ಲೆಲ್ಲ ಈ ಶಬ್ದಕ್ಕೆ ಒಂದೇ ಅರ್ಥವೇ ಎಂಬ ಪ್ರಶ್ನೆ ಏಳುತ್ತದೆ. ವೀಳೆಯದೆಲೆಯಲ್ಲಿ 'ಕಟ್ಟು' ಬೇರೆ 'ಕವಳಿಗೆ' ಬೇರೆ. 'ಕವಳಿಗೆ' ಇಪ್ಪತ್ತು ಎಲೆಗಳಿಗೆ ಮಾತ್ರ ಅನ್ವಯಿಸುತ್ತದೆ. ಒಂದು ಕಟ್ಟಿಗೆ ಐದು ಇಲ್ಲವೆ ಹತ್ತು ಕವಳಿಗೆಗಳಾಗುತ್ತವೆ. ಎಂದರೆ 'ಕವಳಿಗೆ' ವೀಳೆಯದೆಲೆಯ ಕಂತೆಯಲ್ಲಿ ಎಣಿಕೆಯ ಒಂದು ಘಟಕ. ಕವಳಿಗೆ ಮನೆಗೂ ವೀಳೆಯದೆಲೆಯ ಕವಳಿಗೆಗೂ ಯಾವ ಸಂಬಂಧವೂ ಇಲ್ಲ. ಹಾಗಾದರೆ ಈ ಕವಳಿಗೆಯ ಅರ್ಥವೇನು?

'ತಾಂಬೂಲ' ಇಂದು ಭಾರತೀಯ ಸಂಸ್ಕೃತಿಯ ಅಭಿನ್ನ ಅಂಗವಾಗಿದೆ. ಆದರೆ ಆ ವಸ್ತು ಮತ್ತು ಶಬ್ದ ಎರಡೂ ಆಗ್ನೇಯ ಜನಾಂಗದಿಂದ ಭಾರತಕ್ಕೆ ಬಂದವೆಂದು ಜಿ. ಸಿಲ್ಯೂಸ್ಕಿ ಮೊದಲಾದವರು ಅಭಿಪ್ರಾಯಪಟ್ಟಿದ್ದಾರೆ. ಆಗ್ನೇಯ ಪರಿವಾರದ 'ಮುಂಡಾ' ಭಾಷೆಗಳು ಭಾರತದಲ್ಲಿ ಪಶ್ಚಿಮ ಬಂಗಾಳ, ಬಿಹಾರ್, ಒರಿಸ್ಸಾ, ಮಧ್ಯಭಾರತ, ನೇಪಾಳದ ಕೆಲಭಾಗಗಳು, ಉತ್ತರಪ್ರದೇಶದ ಕೆಲ ಭಾಗಗಳು ಹಾಗೂ 'ಗಂಜಾಂ' ಜಿಲ್ಲೆ ಮೊದಲಾದ ಕಡೆಗಳಲ್ಲಿ ಹಬ್ಬಿವೆ. ಈ ಭಾಷಾ ವರ್ಗದ ಪ್ರಭಾವ ಭಾರತೀಯ ಭಾಷೆ ಹಾಗೂ ಸಂಸ್ಕೃತಿಯ ಮೇಲೆ ವಿಪುಲವಾಗಿದೆ. ದ್ರಾವಿಡ ಭಾಷೆಗಳಲ್ಲಿ ಉತ್ತಮಪುರುಷ ಸರ್ವನಾಮದಲ್ಲಿ ವಕ್ತೃಸಹಿತ, ವಕ್ತೃರಹಿತ ಎಂಬ ಭೇದ ಇದರ ಪ್ರಭಾವವೇ ಎಂದು ಹೇಳಲಾಗಿದೆ. ಒಂದೇ ಶಬ್ದ ಕರ್ತೃಕ್ರಿಯೆ ಮೊದಲಾದ ಹಲವು ರೂಪಗಳಲ್ಲಿ ಬಳಕೆಗೊಳ್ಳುವುದೂ ಇದರ ಪ್ರಭಾವವೇ ಎಂದು ಹೇಳಲಾಗಿದೆ. ತಾಂಬೂಲ, ಲಾಂಗಲ, ಅಲಾಬೂ, ಲಾಂಗೂಲ ಮೊದಲಾದ ಇದರ ಶಬ್ದಗಳು ಸಂಸ್ಕೃತ ಶಬ್ದಭಂಡಾರವನ್ನು ಹೊಕ್ಕಿವೆ. ಇಷ್ಟೇ ಅಲ್ಲ; ಹಿಂದಿ ಮೊದಲಾದ ಆಧುನಿಕ ಆರ್ಯ ಭಾಷೆಗಳಲ್ಲಿ ಇದರ ಮತ್ತೊಂದು ಶಬ್ದ 'ಕೋಡಿ' ವಿಶೇಷವಾಗಿ ಬಳಕೆಯಲ್ಲಿರುವುದು ಕಂಡುಬರುತ್ತದೆ. ಇಪ್ಪತ್ತರ

ಎಣಿಕೆ ಈ ಭಾಷೆಯ ಒಂದು ವೈಶಿಷ್ಟ್ಯ. 'ಕೋಡಿ' ಇಂಗ್ಲೀಷಿನ 'Score' ಎಂಬುದರ ಸಮಾನಾರ್ಥವಾಚಿ. 'ಕೋಡಿ' 'ಕೋರಿ' 'ಕೌರಿ' ಮೊದಲಾದ ರೂಪದಲ್ಲಿ ಈ ಶಬ್ದ ಹಿಂದಿಯಲ್ಲಿ ದೊರೆಯುತ್ತದೆ. ಇದೇ ಅರ್ಥದಲ್ಲಿ ಈ 'ಕೋಡಿ' ಶಬ್ದ ಕನ್ನಡವನ್ನೂ ಹೊಕ್ಕಿರಬಹುದು. ಕೋಡಿ > ಕೌಡಿ > ಕವಡಿ ಆಗಿರಬಹುದು. ಡಕಾರ ಳಕಾರ ವ್ಯತ್ಯಯ ದ್ರಾವಿಡ ಭಾಷೆಗಳ ವೈಲಕ್ಷಣ್ಯಗಳಲ್ಲಿ ಒಂದು. ಆದ್ದರಿಂದ 'ಕವಡಿ' 'ಕವಳಿ' ಆಗಿರಬಹುದು. 'ಕಾ' ಸ್ವಾರ್ಥೀ ಪ್ರತ್ಯಯ. ಅದು ಇಲ್ಲಿ'ಗೆ' ಆಗಿದೆ. ಈ ರೀತಿ ಮೂಲ ಇಪ್ಪತ್ತರ ವಾಚಕ ಆಗ್ನೇಯ ಶಬ್ದ, ಕನ್ನಡದಲ್ಲಿ 'ಕವಳಿಗೆ'ಯಾಗಿದೆ. 'ವೀಳೆಯದೆಲೆ' 'ತಾಂಬೂಲ' ಅನಾರ್ಯ ವಸ್ತುವಿರಬಹುದು ಎನ್ನುವುದು 'ನಾಗವಲ್ಲಿ' ಎಂಬ ಶಬ್ದದಿಂದಲೂ ಸಮರ್ಥಿತವಾಗುತ್ತದೆ. ನಾಗವಲ್ಲಿಗೂ 'ನಾಗಜನಾಂಗ'ಕ್ಕೂ ಗಂಟು ಹಾಕುವ ಪ್ರಯತ್ನ ಕೂಡ ನಡೆದುದುಂಟು.

—ಮ. ಸು. ಕೃಷ್ಣಮೂರ್ತಿ

# ಕಾವ್ಯಾವಲೋಕನ

ಶ್ರೀಮಾತಾ, ಕವಿ: ದ. ರಾ. ಬೇಂದ್ರೆ; ಪ್ರಕಾಶಕರು: ಸಮಾಜ ಪುಸ್ತಕಾಲಯ, ಶಿವಾಜಿ ಬೀದಿ, ಧಾರವಾಡ-೧; ಪುಟಗಳು, viii + ೭೭; ಬೆಲೆ: ರೂ. ೨-೦೦.

ನಂದಿಕೋಲು, ಕವಿ: ಚಂದ್ರಕಾಂತ ಕುಸುನೂರು; ಪ್ರ: ಸತ್ಯಸ್ನೇಹ ಪ್ರಕಾಶನ, ರಾಯಚೂರು; ಪುಟಗಳು, ೮+೮೦; ಬೆಲೆ: ರೂ. ೨-೦೦.

ಒಳದನಿ, ಕವಿ: ಕಿರಣ; ಪ್ರಕಾಶಕರು: ವಸಂತ ಸಾಹಿತ್ಯ, ಜೊಕ್ಕಾಡಿ, ದಕ್ಷಿಣ ಕನ್ನಡ; ಪುಟ: ೮+೨೮; ಬೆಲೆ: ರೂ. ೧-೨೫.

೧

ಸಾಹಿತ್ಯ ನಿರ್ಮಿತಿಯು ಒಂದು ವಿಶಿಷ್ಟ ಮನೋಧರ್ಮಕ್ಕೆ ಸಂಬಂಧಿಸಿದ್ದು. ಅನಿಸಿಕೆಗಳನ್ನು ಅವುಗಳ ಎಲ್ಲ ಸಂಕೀರ್ಣ ಭಾವಸತ್ಯಗಳೊಡನೆ ಪರಿಣಾಮಕಾರಿಯಾಗಿ ಅಭಿವ್ಯಕ್ತಿಸುವ ವಿಧಾನ ಯಾವುದು ಎಂಬುದು ಆ ಮನೋಧರ್ಮದ ಎದುರಿಗಿರುವ ಸಮಸ್ಯೆ. ಈ ವಿಧಾನವು ಕಾಲಾನುಕಾಲಕ್ಕೆ ಸಾರ್ವಜನಿಕವಾದ ವೈಚಾರಿಕ ಮನೋಧರ್ಮವನ್ನು ಅನುಸರಿಸಿ ಸಾಮಾಜಿಕವಾದ ಮೌಲ್ಯಗಳನ್ನು ಪರಿವಿವೇಚಿಸಿ ಅಗತ್ಯವಾದ ಮಾರ್ಪಾಡುಗಳನ್ನು ಕಂಡುಕೊಳ್ಳುತ್ತಿರುತ್ತದೆ. ಈ ಕಾರಣಕ್ಕಾಗಿಯೆ ಸಾಹಿತಿಯು ಬಿಡುವಿಲ್ಲದ ಅಧ್ಯಯನಶೀಲ ಪ್ರವೃತ್ತಿಯೊಂದನ್ನು ಬೆಳಸಿಕೊಳ್ಳಬೇಕಾಗಿರುವುದು. ಯಾಕೆಂದರೆ ಬರಿಯ ಅನುಭವದ ಶ್ರೀಮಂತಿಕೆಯಿಂದಲೆ ಎಲ್ಲವೂ ಆಗಿ ಹೋಗಲಾರದು. ಮತ್ತು ಅದೊಂದು ಸರ್ವಶ್ರೇಷ್ಠ ಕಲಾವೇದಿಕೆಯಾಗಿರುವುದರಿಂದ ಅದರಲ್ಲಿ ಪರಿಪೂರ್ಣತೆಯನ್ನು ಸಾಧಿಸುವುದೂ ಪುಗಸಟ್ಟೆಯ ಮಾತಲ್ಲ. ಇಂಥ ಸಾಧನಶೀಲ ಮನೋಧರ್ಮಕ್ಕೆ ವಯಸ್ಸು-ಮನಸ್ಸುಗಳ 'ಮಾಗು' ಪೂರಕವಾದೊಂದು ಅಡಿಪಾಯವನ್ನೊದಗಿಸುತ್ತದೆ. ಹೊಸ ರೀತಿಯ ಆಲೋಚನೆ ಹಳಮೆಯ ಅಸ್ತಿವಾರದ ಮೇಲೆ ನಿಂತರೆ ಅದಕ್ಕೊಂದು ಪರಂಪರೆ ದೊರೆತಂತಾಗಿ ಗಾಳಿಯಲ್ಲಿ ವಾಲಿಯಾಡದೆ ಭೂಮಿಯಲ್ಲಿ ತಳವೂರಿ ಭದ್ರವಾಗಿ ನಿಲ್ಲುತ್ತದೆ. ಯೌವನದ ಕಾವಿನಲ್ಲಿ ಆಧುನಿಕವಾದ ನಾಲ್ಕು ಆಲೋಚನಾ ವಾಕ್ಯಗಳನ್ನು ಹಿಡಿದು ಓಡಿಯಾಡುವುದರಿಂದ ಯಾವ ಪುರುಷಾರ್ಥವೂ ಸಾಧಿತವಾಗಲಾರದು. ಅಂದಾಗ ಹಳಮೆಗೇ ಅಂಟಿನಿಂತು ಅಪ್ಪ ಹಾಕಿದ ಆಲದ ಮರಕ್ಕೇನೆ ನೇಣು ಬಿಗಿದುಕೊಳ್ಳಬೇಕೆಂಬುದೇನೂ ನಮ್ಮ ಅಭಿಪ್ರಾಯವಲ್ಲ. ಜೀವನವಿಕಾಸವು ಯಾವುದೇ ಕಾರಣಕ್ಕೂ ತಳತಪ್ಪಿ ಪ್ರಾರಂಭವಾಗುವುದಿಲ್ಲ. ಬದುಕಿನ ಎಂಥದೇ ಸಂಕ್ರಮಣ ಕಾಲದಲ್ಲಿಯೂ

ಸಾರ್ಥಕವಾಗಿ ಜೀವಿಸುವುದಕ್ಕೆ ಆ ಸಮಾಜದಲ್ಲಿ ಪ್ರಚಲಿತವಾಗಿರುವ ಎಲ್ಲ ಜೀವನ ಮೌಲ್ಯಗಳೂ ಸಂಪೂರ್ಣವಾಗಿ ಅನುಚಿತ ಹಾಗೂ ಅಸಂಗತವಾಗಿರುವುದು ತೀರ ಅಸಂಭವ. ಅದೇ ಸಂದರ್ಭದಲ್ಲಿಯೆ ಪ್ರತಿಯೊಂದು ಸೂರ್ಯೋದಯವೂ ವಿಕಾಸಶೀಲಕಾರಣಕ್ಕಾಗಿ ಕೆಲವೊಂದು ಮಾರ್ಪಾಡುಗಳನ್ನು ಎದುರುಗೊಳ್ಳುವುದೂ ಅಷ್ಟೇ ಸಂಭವನೀಯ. ಈ ಪ್ರಕೃತಿತತ್ತ್ವವನ್ನು ಗಮನಿಸಿಯೆ ಕವಿ ಬೇಂದ್ರೆಯವರು ತಮ್ಮ ಕೃತಿ 'ಶ್ರೀಮಾತಾ'ದಲ್ಲಿ

ಕ್ರಮವಾಗಿ ಆಕ್ರಮಿಸಿ ವಿಕ್ರಮಿಸುವ ಸ್ಥಾಪಿಸುವ
ಪ್ರಕೃತಿಕ್ರಮವೆ ಭವವು.
ಜಾರಿ ಬೀಳವೆ ಕೆಳಗೆ, ಮೂರ್ತಿ ಮುಕ್ತಾಗವೆ
ಸಂಕ್ರಮಣಪರ್ವವೇ ತಾ ನವೋದಯವು
ಈ ವಿಶೇಷದ ವಾಸಕಿಲ್ಲಭಿಕ್ರಮ ನಾಶ

ಎಂದು ಹೇಳುತ್ತಾ ಮುಂದುವರಿದು

ಉತ್ಕ್ರಾಂತಿ—ಗರ್ಭಿತದ ಅವತಾರಲೀಲೆ
ದೇವನರ್ಭಕ ಕ್ರಮಕೆ ಉದ್ಧಾರಶಾಲೆ

ಎಂಬ ಮಹತ್ತ್ವವಾದೊಂದು ವೈಚಾರಿಕ ನಿಲುವನ್ನು ತಾಳುತ್ತಾರೆ.

ಹೃದಯದ ನೀತಿಯೆ ಸಾಹಿತ್ಯದ ರೀತಿ. ಯಾವ ಮಾನವ ಹೃದಯದಲ್ಲಿ ಉನ್ನತವಾದ ಆಲೋಚನೆ ಅಂಕುರಿಸುತ್ತದೊ ಅಲ್ಲಿ ಶ್ರೇಷ್ಠ ಸಾಹಿತ್ಯ ಪ್ರಾದುರ್ಭವಿಸುತ್ತದೆ. ನೈತಿಕ ಜೀವನ ಶ್ರದ್ಧೆ ಮತ್ತು ವೈಚಾರಿಕ ಪರಿಣತಿ ಕವಿ ಪ್ರತಿಭೆಯನ್ನು ಉದ್ದೀಪಿಸುವ ಎರಡು ಮಹತ್ತ್ವದ ಗುಣಗಳಾಗಿವೆ. ಆದರೆ ಇವುಗಳಲ್ಲಿ ಯಾವುದಾದರೂ ಒಂದು ಮತ್ತೊಂದನ್ನು ಅತಿಕ್ರಮಿಸಿ ಮುಂದಾಗಬಾರದು; ಆಗ ಕಾವ್ಯಧರ್ಮಕ್ಕೆ ಭಂಗ ಬರುತ್ತದೆ. ಬೇಂದ್ರೆಯವರ 'ಶ್ರೀಮಾತಾ'ದಲ್ಲಿ ಸಂಗ್ರಹವಾಗಿರುವ ಗೀತಗಳು ಅವರ ಹಿಂದಿನ ಕಾವ್ಯಗೀತಗಳಲ್ಲಿ ಕಂಡುಬರುವ 'ಸಾಹಿತ್ಯ'ವನ್ನು ಕಳೆದುಕೊಂಡಿರುವುದಕ್ಕೆ ಕಾರಣವನ್ನು ಇಲ್ಲಿ ಕಾಣಬೇಕು. ಈಗಿನ ಜೀವನದಲ್ಲಿ ಆಗುತ್ತಿರುವ ಸಂಕ್ರಮಣಕ್ರಿಯೆ ಅವರ ಸಂಸ್ಕಾರವತ್ತಾದ ಚೇತನಕ್ಕೆ ಅತ್ಯಂತ ಅಸಹನೀಯವಾಗಿಬಿಟ್ಟಿದೆ. ಇದು ಅವರ ಮಾತಿನ ಮೋಡಿಯಲ್ಲಿ ಸುಪ್ರಕಾಶವಾಗಿ ಮೂಡಿದ್ದು ಕಾವ್ಯತೆಯನ್ನು ಹಿಂದಿಕ್ಕಿಬಿಟ್ಟಿದೆ. 'ಯುಗಾದಿ' ಕವನದ ಕೆಲವು ಸಾಲುಗಳು ಇವು:

ಕಾಮದ ಹೋಮಾ ಮಾಡಿದಮ್ಯಾಲೆ
ವಸಂತದ ಭೂಮಾ ಬೇಕೆ ಬೇಕು.
ಗಂಧವತೀ ಪೃಥ್ವೀ ಯೋಜನಗಂಧಿ, ಪ್ರಯೋಜನಗಂಧಿ
'ಯಾಮಾಹುಃ ಸರ್ವಬೀಜ ಪ್ರಕೃತಿಃ' ಅಂದಾ ಕಾಲಿದಾಸಕವಿ
ನಿಗರಿದವು ಮಹಾಕರ್ಣರ ಕಿವಿ

ಮನೀ ಮುರ್ಕ್ಯೋ ಜನಾ;
ಅಶ್ಲೀಲಕ್ಕs ಅಂಗಾರ ಹಚ್ಚಿದ್ರು
ಬೀಭತ್ಸಕ್ಕೆ ಮುದ್ರಿ ಒತ್ತಿದರು
ಸಿಹೀ ಸಿಗದವರು–ಸಿಕ್ಕಿದ್ದು ತಿಂತಾರ.
ಮನೀ ಮುರಿಯುದ ಜನ;
ಶೀಲದ ಶೃಂಗಾರಕ್ಕs ಬಂಗಾರ ಅಂತಾರ
ಕುಡೀಬಾರದ್ದು ಕುಡಿದು ನೆಲಸಮಾ ಆದವರಿಗೆ
ತನೂನೂ ಅಷ್ಟೇ–ಉತ್ತಾಮಾನು ಅಷ್ಟೇ.
ಎಲ್ಲಾ ಭಸ್ಮಾ, ಬೂದಿ
ಅವರಿಗೆಲ್ಲ್ಯದs ಯುಗಾದಿ?

ಕವಿ ಸಮಾಜ ಸುಧಾರಕನೂ ಹೌದು. ಅಂದಮಾತ್ರಕ್ಕೆ ಮೇಲೆ ಕಾಣಿಸಿರುವಂತೆ ನೇರವಾದ ಪ್ರಚಾರ ಕಾರ್ಯ ಸಾಹಿತ್ಯಕ್ಕೆ ಒಗ್ಗಿದ್ದಲ್ಲ. ಈ ಸಂಕಲನದ ತುಂಬ ಬಹುಮಟ್ಟಿಗೆ ಇದೇ ಮಾದರಿಯ ಪದ್ಯಗಳು ತುಂಬಿಕೊಂಡಿವೆ. ಹೊಸ ಕಾವ್ಯನಿರ್ಮಿತಿಯನ್ನು ಕುರಿತು ಬೇಂದ್ರೆಯವರು ಬರೆಯುತ್ತಾರೆ:

ಮಲಯಗಿರಿ ಮನದೇರಿ। ಒಲಿಯದಿದ್ದರ ಜಾರಿ
ಪ್ರಲಯದ ತಳಕ ಇಳಿದಿಳಿದು। ಲಯಿಸುವರು
ಕಲೆಯ ಜಾಡಿರದ ಕೆಸರಾಗ.
ಎದೆಯ ಪೂಲಿಯ ಜಾತಿ। ಎದೆಯುಲಿದ್ದವ ಬಲ್ಲಾ
ಕೆದರಿದರೇನು ತಿಪ್ಪ್ಯಾಗ? ಮೊದಲಿಗೇ
ಹೃದಯುದ ಸುದ್ದಿ; ರಸಸಿದ್ಧಿ

ಮುಂತಾದ ಅಭಿಪ್ರಾಯಗಳು ಬೇರೆಯ ಕಾರಣಗಳಿಗಾಗಿ ಎಷ್ಟೆ ಮಹತ್ವದವುಗಳಾದರೂ ಸಾಹಿತ್ಯದ ಕಾರಣಕ್ಕಾಗಿ ಖಂಡಿತ ಅಲ್ಲ. "ಹೃದಯುದ ಸುದ್ದಿ" ಎಂಬಲ್ಲಿಯ ಶ್ಲೇಷೆ ಬೇಂದ್ರೆಯವರಿಗೆ ಸರ್ವೇಸಾಮಾನ್ಯ. 'ಶ್ರೀಮಾತಾ'ದ ಬಹುಮಟ್ಟಿನ ಕವನಗಳೆಲ್ಲ ಆಧ್ಯಾತ್ಮಿಕ ಮುಖವಾಗಿರುವುದು ಗಮನಾರ್ಹ ಸಂಗತಿ. ಎಂದಿನ ಮಾತಿನ ಮೋಡಿ ಶಬ್ದಾಲಂಕಾರ ಚಮತ್ಕಾರ ಪರಿಹಾಸ್ಯ ಇಂದಿಗೂ ಈ ಕವಿಯಲ್ಲಿ ಉಳಿದು ಬಂದಿದೆ ಮಾತ್ರವಲ್ಲ, ಕೊಂಚ ಅತಿರೇಕವಾಗಿಯೆ ಕಂಡುಬರುವುದೂ ಉಂಟು. ಆದರೆ ಹಿಂದಿನ ರಸಾರ್ದ್ರತೆ, ಕಾವ್ಯತೆ ಇಂದು ಉಳಿದಿಲ್ಲ. ಬೇಂದ್ರೆಯವರ ಕಾವ್ಯಶಕ್ತಿ ಒಂದು ಮಿತಿಯನ್ನು ಕಂಡುಕೊಂಡಿರುವುದು ತೀರ ಸ್ಪಷ್ಟವಾಗಿದೆ.

೨

ಹೊಸ ಪೀಳಿಗೆಯು ದಿನದಿನಕ್ಕೂ ತಮ್ಮ ಭಾರತೀಯತೆಯನ್ನು ಕುಂಠಿತಗೊಳಿಸಿಕೊಳ್ಳುತ್ತಿರುವುದು ಈಗ ಹೊಸ ಸಮಾಚಾರವಾಗಿ ಉಳಿದಿಲ್ಲ. ಎಂದು

ಇವರು ಪರಂಗಿಯುವರ ಹ್ಯಾಟು ಹೊರುವ ಬೂಟು ಒರಸುವ ಧನ್ಯ ಕೈಂಕರ್ಯದಲ್ಲಿ ತೊಡಗಿದರೊ ಅಂದಿನಿಂದಲೆ ಬೆಳ್ಳಿಕಾರನನ್ನು ಬಿಟ್ಟರೆ ಇನ್ನಿಲ್ಲ ಎಂಬ ತೀರ್ಮಾನಕ್ಕೆ ಹಳ್ಳಿಯ ಗಮಾರನು ಬಂದದ್ದು ಹಾಗಿರಲಿ, ಸುಶಿಕ್ಷಿತ ವಿದ್ಯಾವಂತ ತರುಣನೂ ನಾಲ್ಕು ಸಾಹೇಬರ ಕಾಲೊತ್ತಿ ನಾಲ್ಕು ಆಂಗ್ಲ ಹೊತ್ತಗೆಗಳನ್ನು ಓದಿ 'What is there in India and in its culture?' ಎಂಬಂಥ ಅವಿವೇಕದ ಪ್ರಶ್ನೆಗಳನ್ನು ಕೇಳುತ್ತಿರುವುದೂ ವಿರಳವಲ್ಲ. ಅದಕ್ಕೆ ತಕ್ಕಂತೆ ಇತ್ತೀಚಿನ ಸಾಹಿತ್ಯನಿರ್ಮಿತಿಯೂ ಇಂಥ ಹೊಸ ರೀತಿಯ ಜೀವನವಿಧಾನವನ್ನು ಪ್ರತಿಬಿಂಬಿಸಲು ಹೊರಟದ್ದು ಅತ್ಯಂತ ಅನ್ಯಾಯದ ಸಂಗತಿ. ಕೆಲವು ವೇಳೆ ಇವರು ಊದುತ್ತಿರುವ ಶಂಖದ ಅಂತರಾರ್ಥವೇನೆಂದು ತಿಳಿದಾಗ, ತರುಣ ಜನಾಂಗದ ಆಲೋಚನಾವಿಲಾಸವನ್ನು ಅರಿತಾಗ ಎಂಥ ಕಡಿದಾದ ನೈತಿಕ ಪತನದ ಇಳಿಜಾರಿನಲ್ಲಿ ನಾವಿದ್ದೇವೆ ಎಂಬುದರ ಪರಿವೆಯಾಗದಿರದು. ಸಾಹಿತ್ಯದಲ್ಲಿ ಈ ತರಹೆಯ ಗುಂಪುಗುಳಿತನದ ವಿದ್ವೇಷದ ವಿಕ್ರಿಯಾರೂಪದ ಸಂಘ ಸಂಸ್ಥೆಗಳು ನೇರ್ಪಟ್ಟಾಗ ಏನಾಗಬಹುದೆಂಬುದೂ ಊಹಾತೀತವಲ್ಲ. ಅದೃಷ್ಟವಶದಿಂದ ಈ ಗೊಂದಲಿಗರ ನಡುವೆಯೆ ಅದಕ್ಕೆ ಪ್ರತಿಕ್ರಿಯೆಯನ್ನು ಸಮರ್ಥ ರೀತಿಯಲ್ಲಿಯೆ ಸೂಚಿಸುವ ತರುಣರು ಮುಂದೆ ಬರುತ್ತಿದ್ದಾರೆ. ಒಬ್ಬ ತರುಣನ ಈ ಪರಿಹಾಸವನ್ನು ಕೇಳಿ;

ಬನ್ನಿ ಗುಲ್ಲೂರಿಗೆ
ಬನ್ನಿ ಸಂಜೆಯ ಹೊತ್ತಿಗೆ
    ಮೊಲೆ ಬೆಳೆದು ನೆಲ ಕಾಣದಂಥ ಹುಡುಗಿಯರು
    ದೇಶ ಕಾಣದ ಚಿಗುರು ಮೀಸೆಯ ಹುಡುಗರು
    ಗೋಸೆಯಿಲ್ಲದ ಮನೆಗೆ ಹೊಸ ಹುಡುಗಿ ಬಂದಾಗ
        ಯುವಕರಾಗುವ ಮುದುಕರು
        ನಿಮಗೆ ಎದುರಾಗುವರು.

ಬನ್ನಿ ಗುಲ್ಲೂರಿಗೆ
ಬನ್ನಿ ಸಂಜೆಯ ಹೊತ್ತಿಗೆ
    ಆ ದಾರಿ ದೇವರ ದಾರಿ
    ಬರುತಾನೆ ಭಗವಂತ ಹೂಮುಡಿದ ತೇರನೇರಿ
    ಚೆಲುವೆಯರ ಮೈಮೇಲೆ ದೃಷ್ಟಿ ಹೊರಳಾಡುವುದು
    ಬಾಯಲ್ಲಿ ಭಕ್ತಿ ಘೋರ್ಗರೆಯುವುದು

ಬನ್ನಿ ಗುಲ್ಲೂರಿಗೆ
ಬನ್ನಿ ಊರಿನ ತೇರಿಗೆ
    ಮಿಲ್ಟನ್, ಡ್ರೈಡನ್. ಬುನಿಯನ್, ಡನ್
    ಮಾತಿನ ನಡುವೆ ನುಸುಳುವರು
    (ಕನ್ನಡ ಕವಿಗಳ ಸುಳಿವಿಲ್ಲ!)

ಮೆಕ್ನೀಸ್, ಲೂಯಿಸ್, ಈಲಿಯೆಟ್, ಸ್ಪೆಂಡರ್
ಎಳೆಯರ ಮುಂಡೆಗೆ ಸುಗ್ಗುವರು,
ಕನ್ನಡ ಲಿಪಿಯಲಿ ಬದುಕುವರು.

ಗುಂಡು ಪಂಡಿತರು ಮೇಜು ಗುದ್ದುವರು
ಹಾಜರಾಗುವ ಮುನಿಯ
ಬಗ್ಗಿಸಿಕೊಡುವ, ಹಿಗ್ಗಿಸಿ ಮಡಿಸುವ
ಖುಷಿಗೊಳಿಸುವ ಧನಿಯು.

ಎಂಕ ಎಡಕೆ ಚಿಕ್ಕ ಬಲಕೆ
ನಾಣಿ ಹಿಂದೆ, ಶೀನ ಮುಂದೆ
ಭಲೆ ಗಟ್ಟಿಗರು ಶಿಷ್ಯರು !
ನಿಮ್ಮ ಕವಿತೆ; ಏನು ಪ್ರತಿಭೆ! ಎಂಥ ಪ್ರತಿಮೆ!!
—ಪಂಪು ಸ್ವಿಚ್ಚನೊತ್ತುವರು
ಬಂದರೆ ಭೆಟ್ಟಿಯಾಗುವರು

ಬನ್ನಿ ಗುಲ್ಲೂರಿಗೆ;
ಬನ್ನಿ ಸಂಜೆಯು ಹೊತ್ತಿಗೆ.

ಭಾರತೀಯ ಸಮಾಜದಲ್ಲಿ ವಿವಿಧವಾಗಿ ತಾಂಡವಿಸುತ್ತಿರುವ ಅಸಂಬದ್ಧ ಹಾಗೂ ಅನುಚಿತ ಸಮಸ್ಯೆಗಳ ಒಂದು ವಿಧ ಮಾತ್ರ ಇದು. ತಮ್ಮದೆ ಆದೊಂದು ಗಟ್ಟಿ ನೆಲವನ್ನು ಗುರುತಿಸಿ ಭದ್ರವಾಗಿ ಪದತಲವೂರಿ ನಿಲ್ಲದ ಈ ಜನ ಮತ್ತೇನು ತಾನೆ ಮಾಡಿಯಾರು, ಗಲಾಟೆಯನ್ನುಳಿದು? ಇದನ್ನು ಮಾರ್ಮಿಕವಾಗಿ ಅನುಭವಿಸಿದ ಬೇಂದ್ರೆ

ನೆಲದಾಗs ಬದುಕದಾವs
ಅಂತರಿಕ್ಷದೊಳಗ ಏನು ಸತ್ತಾನು?

ಎಂದು ಲೇವಡಿ ಮಾಡಿರುವುದು ಈ ಎಲ್ಲ ವಿವಿಧಗಳನ್ನು ಒಟ್ಟುಗೂಡಿಸಿಯೆ.

ಇಂದು ನಮ್ಮ ಬದುಕಿನಲ್ಲಿ ಎಲ್ಲ ಕ್ಷೇತ್ರಗಳಂತೆಯೆ ಸಾಹಿತ್ಯನಿರ್ಮಿತಿ ಯಲ್ಲಿಯೂ ಪರಿಣತಿ ಕಡಿಮೆಯಾಗುತ್ತಿದೆ. ಅದರಲ್ಲಿ ಆಳವೂ ಇಲ್ಲ, ಅಗಲವೂ ಇಲ್ಲ. ಎಲ್ಲ ಕೆಸರಿನ ಮೇಲೆ ಪಸರಿಸುವ ಹಸುರಿನಂತೆ ಕ್ಷಣಿಕ ಮೋಹವನ್ನು ಕೆರಳಿಸುವಂಥದಾಗಿದೆ. ಅಗಣಿ ವುಂಟೆಯಿಂದ ಹಣ್ಣು ಮಾಡಿದ ಹಲಸಿನ ಕಾಯಂತೆ ಆಟಿಸಿದರೆ ಡುಂ ಡುಂ, ಅಗಿದರೆ ಸಪ್ಪೆ ಸಪ್ಪೆ. ಈ ಪರಿಸ್ಥಿತಿಯನ್ನು 'ನಂದಿಕೋಲು'ನ ಚಂದ್ರಕಾಂತ ಕುಸುನೂರರು ಹೀಗೆ ಕೀಟಲೆ ಮಾಡುತ್ತಾರೆ:

ಅವಳು
ತನ್ನ
ಹಣ್ಣಾಗಿದ್ದರೂ

ಹಸಿರಾದ, ಉಬ್ಬಿರುವ ಹೊಟ್ಟೆಯನ್ನು
ತಿಕ್ಕಿ–ತೀಡಿ–ಒತ್ತಿ
ಹೊರಗೆ ಒಗೆದಿದ್ದಾಳೆ–ಒಳಗಿದ್ದ–
ಭ್ರೂಣವನ್ನು
ಬರಿ ಹಗುರಾಗಬೇಕೆಂಬ
ಹಂಬಲ.

ಈ ಸಾಲುಗಳ ತಾತ್ಪರ್ಯವು ಜೀವನದ ಉಳಿದೆಲ್ಲ ಪರಿಸ್ಥಿತಿಗಳಿಗಿಂತಲೂ ಇಂದಿನ ಕಾವ್ಯಜೀವನದ ಸ್ಥಿತಿಗತಿಗಳನ್ನು ಬಹು ಸುಂದರವಾಗಿ ಧ್ವನಿಸುತ್ತದೆ, ಸ್ವತಃ 'ನಂದಿಕೋಲು'ನ ಪದ್ಯಗಳನ್ನೂ ಸೇರಿಸಿಕೊಂಡು. ತಮ್ಮ ಅಪಕ್ವ ಅನುಭವಗಳನ್ನೂ ಅಪರಿಣತ ಸಂವೇದನೆಗಳನ್ನೂ 'ಸಾಹಿತ್ಯದಲ್ಲಿ ವೈಚಾರಿಕತೆ' ಎಂಬ ಅಸಂಬದ್ಧ ಕಾವ್ಯತತ್ವದ ನೆಪದಿಂದ ಗೊತ್ತುಗುರಿಯಿಲ್ಲದೆ ಪ್ರಕಾಶಿಸುತ್ತಿರುವುದು ಬರಿಯ ಹಗುರಾಗಬೇಕೆಂಬ ಹಂಬಲವಲ್ಲದೆ ಮತ್ತೇನು ? ಇಂಥವುಗಳನ್ನು ಅಭ್ಯಾಸ ಮಾಡುವುದಕ್ಕಾಗಿ ಕೊಟ್ಟ ಕಾಲ, ಪಟ್ಟ ಶ್ರಮಗಳೆಲ್ಲ ನಿರ್ವಿವಾದವಾಗಿ ವ್ಯರ್ಥ.

ಲೈಂಗಿಕ ಸಮಸ್ಯೆ ಎಷ್ಟೆ ಪ್ರಮುಖವಾದರೂ ಜೀವನ ವಿಧಾನದ ಒಂದು ಅಂಗ ಮಾತ್ರ. ಅಲ್ಲಿಯ ಸಮಸ್ಯೆಗಳು ಒಂದು ಕಾಲಕ್ಕೆ ಪರಿಮಿತವಾದವುಗಳೂ ಅಲ್ಲ. ಅದು ಎಲ್ಲ ಕಾಲದ ಎಲ್ಲ ದೇಶದ ಒಂದು ಎಚ್ಚತ್ತ ಸಮಸ್ಯೆಯಾಗಿಯೆ ಉಳಿದಿರುವುದನ್ನು ನಮ್ಮ ಕಾವ್ಯೇತಿಹಾಸಗಳು ಸಾರಿ ಹೇಳುತ್ತಿವೆ. ಈಗ ಅದೊಂದೆ ಜೀವನದ 'ಎಲ್ಲ' ಎಂಬಂತೆ ಆಲೋಚಿಸುತ್ತಿರುವುದು ಕ್ಷುದ್ರತೆಗೊಂದು ಉದಾಹರಣೆಯಷ್ಟೆ. ಯಾಕಂದರೆ ಜೀವನದ ಸಾರ್ಥಕತೆಯಿರುವುದು ಈ ಸಮಸ್ಯೆಯ ಎಲ್ಲೆಗಟ್ಟಿನಿಂದಾಚೆಗೆ. ಎಳೆಯ–ಹಳೆಯರಲ್ಲೆಲ್ಲ ಈ ನೈತಿಕ ಪತನವಿದೆಯೆಂದು ತಮ್ಮ ಅನಿಸಿಕೆಗಳನ್ನು ಸಾರ್ವತ್ರಿಕಗೊಳಿಸುತ್ತಿರುವುದು ತಮ್ಮ ಶೀಲದ ಬಗೆಗೆ ತಮಗೆ ಇರುವ ಅಪನಂಬುಗೆ ಎನ್ನದೆ ವಿಧಿಯಿಲ್ಲ. ಊರಿದ್ದ ಕಡೆ ಹೊಲೆಗೇರಿಯೆ ಹೊರತು ಊರೆಲ್ಲ ಹೊಲೆಗೇರಿಯಲ್ಲ. ಈ ಕಾರಣಕ್ಕಾಗಿಯೆ 'ನಂದಿಕೋಲು'ನ ಬಹುಮಟ್ಟಿನ ಪದ್ಯಗಳು ಪ್ರಯೋಜನದ ದೃಷ್ಟಿಯಿಂದ ನಿಷ್ಫಲವಾಗಿವೆ, ಅಪ್ರಯೋಜಕವಾಗಿದೆ. ಅಶುದ್ಧ ಗದ್ಯದ ಆಲಂಬನದಿಂದ ಹಲವು ಕವನಗಳು ಕಾವ್ಯತೆಯಿಂದಲೂ ವಂಚಿತವಾಗಿದೆ. ನಿದರ್ಶನಕ್ಕಾಗಿ 'ಮುಗಿದ ಮೇಲೆ' 'ನಿಮಗಾಗಿ' 'ಸಂಜೆಗತ್ತಲು' ಪದ್ಯಗಳನ್ನು ಪರಿಲಕ್ಷಿಸಬಹುದು.

ಗಣಿತ ಶಾಸ್ತ್ರದಂತೆ ಸಾಹಿತ್ಯವು ಸೂತ್ರಪ್ರಾಯವಾಗಿ ಕನ್ನಡಿಯಲ್ಲಿನ ಕರಿಯಂತೆ, ಸಾಸಿವೆಯಲ್ಲಿನ ಸಾಗರದಂತೆ ಅಪಾರವಾದ ಅರ್ಥವ್ಯಕ್ತಿಯಿಂದ ಸಂಭವಿಸಬೇಕು ಎಂದಾಗ ಎಜ್ರಾಪೌಂಡ್‌ನ ಅರ್ಥವು ಗಣಿತವನ್ನೆ ಬರೆಯಬೇಕೆಂದೇನೂ ಆಗಿರಲಿಲ್ಲ. ಅಥವಾ ಜೀವನವನ್ನು ಸಂಖ್ಯಾ ಶಾಸ್ತ್ರದಲ್ಲಿ ವ್ಯಾಖ್ಯಾನಿಸಬೇಕೆಂದೂ ಅಲ್ಲ. ಜೀವನದಲ್ಲಿ ಅಸಂಬದ್ಧತೆಯಿದೆಯೆಂದೂ ಅನರ್ಥವಿದೆಯೆಂದೂ ಅಸಂಬದ್ಧವಾದ

ಸಾಲುಗಳನ್ನೂ ಅರ್ಥರಾಹಿತ್ಯ ಸಾಲುಗಳನ್ನೂ ಕಾವ್ಯವೆಂದು ಒಪ್ಪುವುದಾದರೆ ಅದಕ್ಕಿಂತ ಅಪಚಾರ ಇನ್ನೊಂದಿಲ್ಲ. ಸಾಹಿತ್ಯದ ಕಾರಣಗಳಿಗಾಗಿ 'ಸಂದಿ ಕೋಲು' ಶುದ್ಧಾಂಗವಾಗಿ ಅಸಂಬದ್ಧಪ್ರಲಾಪ. ಆದರೆ ಅಲ್ಲಲ್ಲಿ ಒಂದೊಂದು ಕಾವ್ಯಸಂವೇದನೆಗಳಿವೆಂಬುದು ಗಮನಾರ್ಹ ಸಂಗತಿ.

ಕತ್ತಲೆಯಲ್ಲಿ ಬತ್ತಲೆ ತಿರುಗುತ್ತಿರುವ—
ನಮ್ಮ ಶೀಲ ಕನ್ನಿಕೆಗೆ—
ಒಂದು ಬೆಳಕಿನ ಸೀರೆ—
ತರುವುದಿದೆ—
ಬರುವಿರಾ?

ಎಂಬುದೊಂದು ಉದಾಹರಣೆ.

೩

'ಕಿರಣ' ಕಾವ್ಯನಾಮದ ಕುತ್ಯಾಳ ನಾಗಪ್ಪಗೌಡರ 'ಒಳದನಿ' ಒಂದು ಭರವಸೆಯನ್ನು ಮೂಡಿಸುವ ಕವನ ಸಂಗ್ರಹವಾಗಿದೆ. 'ಬನ್ನಿ ಗುಲ್ಲೂರಿಗೆ' ಈಗಾಗಲೆ ಇವರ ಕಾವ್ಯಶ್ರದ್ಧೆಯ ಗತಿಯನ್ನು ಅರಿವುಮಾಡಿಕೊಟ್ಟಿದೆ. ನೆಲದ ಮೇಲೆ ನಿಂತು ಹೊಸ ರೀತಿಯಲ್ಲಿ ರೂಪಿಸಲು ಹವಣಿಸಿರುವುದು ಅವರ ಬೆಳವಣಿಗೆಯ ಕಳಕಳಿಯನ್ನು ತೋರಿಸುತ್ತಿದೆ. ಅವರ ಜೀವನಾನುಭವಕ್ಕೂ ಅನಿಸಿಕೆಗಳಿಗೂ ಮೇಳವಿದ್ದು ವಿಚಾರಸರಣಿ ಹೊಂದಿ ಬಂದಿರುವುದರಿಂದ ಕಾವ್ಯಸಹಜವಾಗಿ ರೂಪ ತೊಡುತ್ತದೆ. ಆದರೆ ಇಲ್ಲಿಯ ಹಲವು ಭಾವಗಳು ಹಳೆಯವಾದುದರಿಂದ ರೀತಿಯೊಂದೆ ಹೊಸತಾಗಿ ಕಂಡು ಕಾವ್ಯಗುಣ ಮುಸುಳಿಸಿಹೋಗಿದೆ. ಇವರ ಕಾವ್ಯದ ಕೈ ಕುದುರಿರುವುದರಿಂದ ಹೊಸ ಸಂವೇದನೆಯ ಉತ್ತಮ ಕಾವ್ಯಗಳನ್ನು ನಿರೀಕ್ಷಿಸಬಹುದು. ಯಾಕಂದರೆ ಬಿಂಬಿತವಾಗುವ ಕವಿಯ ಸಂವೇದನೆಯೆ ಕಾವ್ಯದ ತಿರುಳು. ಬರಿಯ ನಿರೂಪಣೆಯ ನೂತನತೆಯಿಂದ ಎಲ್ಲವೂ ಮುಗಿದುಹೋಗುವುದಿಲ್ಲ. ಆದರೆ ಹೇಳಿದ್ದೆ ಆದರೂ, ಕೇಳಿದ್ದೆ ಆದರೂ ಹೊಸ ರೂಪ ಮನಸ್ಸಿಗೊಂದು ತಣಿವನ್ನು ತರುವುದು ಸ್ವಾಭಾವಿಕ.

—ಎಂ. ಬೋರಲಿಂಗಯ್ಯ

ಇಲಿಯಡ್, ಅನುವಾದ: ಎಲ್. ಎಸ್. ಶೇಷಗಿರಿರಾವ್; ಪ್ರಕಾಶಕರು: ತ. ವೆಂ. ಸ್ಮಾರಕ ಗ್ರಂಥಮಾಲೆ, ಕೃಷ್ಣಮೂರ್ತಿಪುರಂ, ಮೈಸೂರು, ೧೯೬೯; ಪುಟಗಳು: ೧೮೨: ಬೆಲೆ: ರೂ. ೪–೫೦.

ಜಗತ್ತಿನ ಎಲ್ಲ ಸಾಹಿತ್ಯಗಳ ಅತ್ಯುತ್ತಮವೂ ಪ್ರಖ್ಯಾತವೂ ಆದ ಕೃತಿಗಳನ್ನು ನಮ್ಮ ಭಾಷೆಗೆ ಅನುವಾದಿಸಿಕೊಳ್ಳುವುದರಿಂದ ನಮ್ಮವರಿಗೆ ವಿವಿಧ ದೇಶಗಳ ಜನ ಜೀವನದ ಮತ್ತು ಆದರ್ಶಗಳ ಪರಿಚಯವಾಗುವುದಷ್ಟೇ ಅಲ್ಲದೆ ನಮ್ಮಲ್ಲಿಲ್ಲದ

ಸಾಹಿತ್ಯ ಪ್ರಕಾರಗಳ ಪರಿಚಯವೂ ಆಗುತ್ತದೆ. ಎಲ್ಲಕ್ಕಿಂತಲೂ ಮೇಲಾಗಿ ಶ್ರೇಷ್ಠಗ್ರಂಥಗಳ ವಾಚನ ಅವರ ಅಭಿರುಚಿಯನ್ನು ಶುದ್ಧವಾಗಿಸಿ ತನ್ಮೂಲಕ ಅವರು ನಮ್ಮ ಭಾಷೆಯಲ್ಲೇ ಮೇಲ್ದರ್ಜೆಯ ಕೃತಿರಚನೆಯನ್ನು ಬಯಸುವಂತೆಯೂ ಅದಕ್ಕೆ ಪ್ರೋತ್ಸಾಹ ಕೊಡುವಂತೆಯೂ ಮಾಡುತ್ತದೆ. ಆದಕಾರಣ ಅಂಥ ಅನುವಾದಗಳು ಎಷ್ಟು ಬಂದರೂ ಸಂತೋಷವೇ. ಅದರಲ್ಲೂ ಹೋಮರನಂಥ ಜಗದ್ವಿಖ್ಯಾತನೂ ಒಂದು ಇಡೀ ಜನಾಂಗದ ಆದಿಕವಿಯೂ ಆದ ಕವಿತಿಲಕನ ಕೃತಿಗಳ ಅನುವಾದ ಜಗತ್ತಿನ ಪ್ರಬುದ್ಧ ಭಾಷೆಗಳನೇಕವುಗಳಲ್ಲಿ ಬಂದಿರುವುದಲ್ಲದೆ ಆ ಭಾಷೆಗಳಲ್ಲಿ ಹೊಸಸಾಹಿತ್ಯ ಸಂಪ್ರದಾಯಗಳ ಸೃಷ್ಟಿಗೆ ಪ್ರೇರಕವಾಗಿದೆ. 'ಮಹಾಕಾವ್ಯ' (ಎಪಿಕ್) ಎಂದು ಕರೆಸಿಕೊಳ್ಳುವ ಕಾವ್ಯವರ್ಗದಲ್ಲಿ ಬೆಳೆದುಬಂದಿರುವ ಹಲವು ಲಕ್ಷಣಗಳನ್ನು ಮೊದಲು ಬಳಕೆಗೆ ತಂದವನು ಹೋಮರ್. ಅವನ 'ಇಲಿಯಡ್' ಮತ್ತು 'ಒಡಿಸ್ಸಿ' ಕಾವ್ಯಗಳು ನಮ್ಮ 'ರಾಮಾಯಣ' 'ಮಹಾಭಾರತ'ಗಳಂತೆ ಪಾಶ್ಚಾತ್ಯ ಸಾಹಿತ್ಯದ ಅನೇಕ ಕೃತಿಗಳಿಗೆ ವಸ್ತುಗಳನ್ನು ಒದಗಿಸಿ ಕೊಟ್ಟು ಶತಮಾನಗಳ ಪರ್ಯಂತರ ಸಾಹಿತಿಗಳಿಗೆ ಆಕರಗ್ರಂಥಗಳಾಗಿ ಶೋಭಿಸಿವೆ.

ಇಂಗ್ಲಿಷ್ ಬಾರದ ಕನ್ನಡಿಗರಿಗೆ ಇದುವರೆಗೂ ದುರ್ಲಭವಾಗಿದ್ದ ಈ ಮಹಾಕಾವ್ಯಗಳು ಈಚೆಗೆ ಒಂದೆರಡು ಭಾಷಾಂತರಗಳಲ್ಲಿ ಲಭ್ಯವಾಗಿರುವುದು ಸಂತೋಷದ ಸಂಗತಿ. ಈ ಹಿಂದೆಯೇ ಶ್ರೀ ಅಶ್ವತ್ಥನಾರಾಯಣರೆಡ್ಡಿಯವರು 'ಇಲಿಯಡ್' ಮತ್ತು 'ಒಡಿಸ್ಸಿ' ಕಾವ್ಯಗಳೆರಡನ್ನೂ ಕನ್ನಡಿಸಿದ್ದರು. ಪ್ರಕೃತ ಗ್ರಂಥದಲ್ಲಿ ಶ್ರೀ ಎಲ್. ಎಸ್. ಶೇಷಗಿರಿರಾಯರು 'ಇಲಿಯಡ್' ಕಾವ್ಯದ ಸಾರವನ್ನು ಸರಳವೂ ಸುಲಲಿತವೂ ಆದ ಮಾತುಗಳಲ್ಲಿ ಕನ್ನಡದಲ್ಲಿ ನಿರೂಪಿಸಿ ಕನ್ನಡನಾಡಿನ ಓದುಗರಿಗೆ ಉಪಕಾರವೆಸಗಿದ್ದಾರೆ. ಅವರ ಭಾಷೆ ಕಾವ್ಯದ ಧಾಟಿಯನ್ನು ಅನುಕರಿಸಿ ಓದುವುದಕ್ಕೆ ಹಿತವಾಗಿರುವಂತೆ ಕೇಳುವುದಕ್ಕೆ ಶ್ರಾವ್ಯವಾಗಿಯೂ ಇದೆ. ಮಾಸಪತ್ರಿಕೆಯೊಂದರಲ್ಲಿ ಭಾಗಶಃ ಪ್ರಕಟಣೆಗೆಂದು ಬರೆದುದರಿಂದ ಅವರು ಸಾಮಾನ್ಯ ಓದುಗರಿಗೂ ಅರ್ಥವಾಗುವಂತಹ ಶೈಲಿಯನ್ನೇ ಬಳಸಿದ್ದಾರೆ. ಇದರಿಂದ ವಿಷಯ ಪರದೇಶದ್ದಾದರೂ ಈ ಅನುವಾದ ನಮ್ಮವರು ಕ್ಲೇಶಪಡದೆ ಸುಸೂತ್ರವಾಗಿ ಪಠಿಸಲು ಅನುಕೂಲವಾಗಿದೆ. ಎಲ್ಲ ದೇಶಗಳ ಜನಗಳ ಮೂಲಭಾವಗಳೂ ಆಶಯಗಳೂ ಗುಣದೋಷಗಳೂ ಹೇಗೆ ಒಂದೇ ಆಗಿರುತ್ತವೆಂಬುದನ್ನು ತಿಳಿಯಲು ಈ ಮಹಾಕಾವ್ಯಗಳು ವಾಚಕನಿಗೆ ಸಹಾಯಕವಾಗುತ್ತವೆ. ಹಾಗೆಯೇ ನಮ್ಮ ಮಹಾಕಾವ್ಯಗಳ ನಾಯಕ ನಾಯಿಕೆಯರಿಗೂ ಪಾಶ್ಚಾತ್ಯ ಕಾವ್ಯಗಳಲ್ಲಿ ಬರುವವರಿಗೂ ಇರಬಹುದಾದ ತಾರತಮ್ಯಗಳನ್ನು ಪರಿಶೀಲಿಸುವುದೂ ಪ್ರಯೋಜನಕಾರಿಯಾದ ವಿಮರ್ಶೆಯೇ ಆಗುತ್ತದೆ.

ಶ್ರೀ ಶೇಷಗಿರಿರಾಯರ ಪುಸ್ತಕದಲ್ಲಿರುವ ಇನ್ನೊಂದು ವೈಶಿಷ್ಟ್ಯ ಅದರ

ಮುನ್ನುಡಿ. ಡೆಮಿ ಆಕಾರದ ಐವತ್ತೈದು ಪುಟಗಳ ಈ ಪ್ರಸ್ತಾವನೆಯಲ್ಲಿ ಅವರು ಹೋಮರನನ್ನೂ ಇಲಿಯಡ್ ಕಾವ್ಯವನ್ನೂ ಅದರಲ್ಲಿ ವರ್ಣಿತರಾಗಿರುವ ಪಾತ್ರಗಳನ್ನೂ ಕುರಿತು ದೀರ್ಘವೂ ವಿಚಾರಪೂರ್ಣವೂ ಪಾಂಡಿತ್ಯಪೂರ್ಣವೂ ಆದ ವಿಮರ್ಶಾತ್ಮಕ ಪ್ರಬಂಧವೊಂದನ್ನು ಬರೆದಿದ್ದಾರೆ. ಅದು ಅವರ ಅನುವಾದವನ್ನು ಓದುವವರಿಗೆ ಮಾತ್ರವಲ್ಲದೆ ಹೋಮರನ ವಿಷಯವನ್ನು ತಿಳಿಯಲಿಚ್ಛಿಸುವ ಇತರರಿಗೂ ಆಕರ್ಷಕವಾಗಿದೆ.

ಇಂಥ ಕೆಲಸವನ್ನು ಕೈಕೊಂಡು ಯಶಸ್ವಿಯಾಗಿ ಮಾಡಿರುವುದಕ್ಕೆ ಅನುವಾದಕರು ಅಭಿನಂದನಾರ್ಹರು. ಅವರು 'ಒಡಿಸ್ಸಿ' ಕಾವ್ಯವನ್ನೂ ಇದೇ ರೀತಿ ಕನ್ನಡಿಸಿ ಟೀಕೆಟಿಪ್ಪಣಿಗಳೊಡನೆ ಪ್ರಕಟಿಸಲೆಂದು ಹಾರೈಸುತ್ತೇನೆ.

**ಸಾಹಿತ್ಯ ವಿಮರ್ಶೆಯ ಮಾರ್ಗದರ್ಶಕ ಸೂತ್ರಗಳು, ಲೇಖಕರು : ಡಾ. ರಂ. ಶ್ರೀ. ಮುಗಳಿ; ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೬; ಪುಟಗಳು: ೧೨೦+vi ; ಬೆಲೆ ರೂ. ೩–೦೦.**

ಡಾ. ರಂ. ಶ್ರೀ. ಮುಗಳಿಯವರ ಈ ಪುಸ್ತಕ ಅವರು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕೊಟ್ಟ ಮೂರು ವಿಶೇಷೋಪನ್ಯಾಸಗಳಿಂದ ಬೆಳೆದುಬಂದುದು. ಕನ್ನಡದಲ್ಲಿ ದೊರೆಯುವ ಕೆಲವೇ ಕೆಲವು ವಿಮರ್ಶೆಯ ಗ್ರಂಥಗಳ ಸಂಖ್ಯೆಗೆ ಇದೊಂದು ಸ್ವಾಗತಾರ್ಹವಾದ ಕಾಣಿಕೆ.

'ಸಾಹಿತ್ಯವಿಮರ್ಶೆಯ ಸೂತ್ರಗಳ ಸಾಧ್ಯಾಸಾಧ್ಯತೆ', 'ಸಾಹಿತ್ಯವಿಮರ್ಶೆಯ ವಿಧಿ ವಿಧಾನ', 'ಸಾಹಿತ್ಯ ವಿಮರ್ಶೆಯಲ್ಲಿ ತರತಮ ಮೌಲ್ಯನಿರ್ಣಯ' ಎಂಬ ಮೂರು ಅಧ್ಯಾಯಗಳನ್ನು ಒಳಗೊಂಡಿರುವ ಈ ಪುಸ್ತಕ ಸಾಹಿತ್ಯದ ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಗ್ರಂಥ. ಸಾಹಿತ್ಯ ಮತ್ತು ವಿಮರ್ಶೆಯ ಸ್ವರೂಪ, ಉದ್ದೇಶಗಳು ; ವಿಮರ್ಶಕನ ಮನೋಧರ್ಮ, ಅರ್ಹತೆಗಳು ; ವಿಮರ್ಶೆಯ ಮಾರ್ಗದರ್ಶಕ ಸೂತ್ರಗಳು, ವಿಮರ್ಶೆಯಲ್ಲಿ ಬಳಕೆಯಲ್ಲಿರುವ ವಿವಿಧರೀತಿಗಳು, ಕೃತಿಯ ಮೌಲ್ಯನಿರ್ಣಯ, ಒಳ್ಳೆಯದಲ್ಲದ ಕೃತಿಯ ಸ್ವರೂಪ, ಮೊದಲಾದ ಸಾಹಿತ್ಯದ ಆಸ್ವಾದನೆಗೆ ಸಮೀಪ ಸಂಬಂಧವುಳ್ಳ ವಿಷಯಗಳನ್ನು ಗ್ರಂಥಕಾರರು ಮನಸದಟ್ಟುವಂತೆ ವಿವರಿಸಿದ್ದಾರೆ. ವಿಮರ್ಶೆಯ ಲಕ್ಷಣಗಳು, ತತ್ವಗಳು, ಮೊ. ನ್ನು ಚರ್ಚಿಸುವುದು ಪೆಡಸಾದ ಕೆಲಸ; ಬರೆಯುವವನು ಓದುವವನು ಇಬ್ಬರಿಗೂ ತಲೆನೋವು ತರುವಂಥದು. ಬರೆಯುವವನ ಆಲೋಚನೆಗಳಲ್ಲೇ ನಿಷ್ಕೃಷ್ಟತೆಯಿಲ್ಲದಿದ್ದರಂತೂ ಅವನು ಹೇಳುವುದೆಲ್ಲಾ ಓದುವವನಿಗೆ ಕಬ್ಬಿಣದ ಕಡಲೆಯಾದೀತು. ಆದಕಾರಣ ಚೆನ್ನಾಗಿ ವಿಷಯ ಸ್ವಾಮ್ಯವಿರುವವರು, ತಾವು ತಿಳಿದುಕೊಂಡಿರುವುದನ್ನೂ ಯೋಚಿಸಿರುವುದನ್ನೂ ಸಂದಿಗ್ಧತೆಗೆ ಎಡೆಯಿಲ್ಲದಂತೆ ಹೇಳಬಲ್ಲವರು ಮಾತ್ರ ಕೈಗೊಳ್ಳಬೇಕಾದ ಕೆಲಸ ಇದು. ಈ ಕೆಲಸವನ್ನು ಡಾ. ಮುಗಳಿಯವರು ಮೆಚ್ಚ

ತಕ್ಕ ರೀತಿಯಲ್ಲಿ ನೆರವೇರಿಸಿದ್ದಾರೆ. ವಿವಿಧ ಕಾವ್ಯ ಪರಿಚಯ, ಇತರ ವಿಮರ್ಶಕರ ಅಭಿಪ್ರಾಯಗಳ ಪರಿಚಯ, ನಿದರ್ಶನಗಳ ವೈಪುಲ್ಯ, ಭಾಷಾಸೌಲಭ್ಯ, ಸಂದರ್ಭಾನುಸಾರ ಬೇಕಾಗುವ ಉಚಿತ ಪದಗಳ ಭಂಡಾರ ವಿಮರ್ಶಕನಲ್ಲಿರಬೇಕು. ಇಲ್ಲದಿದ್ದರೆ ಅವನ ವಿಷಯ ಪ್ರತಿಪಾದನೆ ಒಂದು ಕಡೆ ಅಸ್ಪಷ್ಟವೂ ಕ್ಲಿಷ್ಟವೂ ಆದರೆ ಇನ್ನೊಂದು ಕಡೆ ತೀರಾ ತೆಳುವಾಗುವ ಸಾಧ್ಯತೆಯೂ ಉಂಟು. ಮುಗಳಿಯವರ ಗ್ರಂಥ ಮೂಲತಃ ಉಪನ್ಯಾಸರೂಪದ್ದಾದ ಕಾರಣ ಈ ದೋಷಗಳಿಂದ ಬಹುಮಟ್ಟಿಗೆ ಮುಕ್ತವಾಗಿದೆ. ಅವರು ತಮ್ಮ ಅಭಿಪ್ರಾಯಗಳನ್ನು ನೇರವಾಗಿ ವ್ಯಕ್ತಪಡಿಸಿರುವರಲ್ಲದೆ ಕನ್ನಡ ಇಂಗ್ಲಿಷ್ ಗ್ರಂಥಗಳಿಂದಲೂ ಪಾಶ್ಚಾತ್ಯ ಪೌರ್ವಾತ್ಯ ಕವಿಗಳಿಂದಲೂ ವಿಮರ್ಶಕರಿಂದಲೂ ಉದಾಹರಣೆಗಳನ್ನು ಉದ್ಧರಿಸಿ ಕೊಟ್ಟು ಪುಸ್ತಕದ ಬೆಲೆಯನ್ನು ಹೆಚ್ಚಿಸಿದ್ದಾರೆ. ಪುಸ್ತಕದಲ್ಲಿ ಗಾಢವಾದುದೂ ಹೊಚ್ಚ ಹೊಸತಾದುದೂ ಏನೂ ಇಲ್ಲದಿದ್ದರೂ ವಿಮರ್ಶೆಗೆ ಸಂಬಂಧಪಟ್ಟ ಮುಖ್ಯಾಂಶಗಳನ್ನು ವಿಶದವಾಗಿ ನಿರೂಪಿಸಿ ಗ್ರಂಥಕಾರರು ಸಾಹಿತ್ಯವ್ಯಾಸಂಗಿಗಳಿಗೆ ಉಪಕಾರ ಮಾಡಿದ್ದಾರೆ.

—ಎಂ. ರಾಮರಾವ್

ತುಳುನಾಡಿನ ಇತಿಹಾಸ, ಲೇ: ಕೆ. ವಿ. ರಮೇಶ; ಪ್ರ: ರಾಷ್ಟ್ರಕವಿ ಗೋವಿಂದಪೈ ಸ್ಮಾರಕ ಸಂಶೋಧನ ಕೇಂದ್ರ, ಮಹಾತ್ಮಗಾಂಧಿ ಮೆಮೋರಿಯಲ್ ಕಾಲೇಜು, ಉಡುಪಿ; ೧೯೬೮; ಪು. ೧೪೨; ಬೆಲೆ ೧೨–೫೦.

ಕರ್ಣಾಟಕ ಚರಿತ್ರೆಯ ಗ್ರಂಥಗಳು ಕನ್ನಡ ಮತ್ತು ಇಂಗ್ಲಿಷಿನಲ್ಲಿ ಬಹು ವಿರಳ. ಫ್ಲೀಟ್, ಭಂಡಾರಕರ್ ಮೊದಲಾದವರಿಂದ ಪ್ರಾರಂಭಿಸಲ್ಪಟ್ಟ ಆ ಕಾರ್ಯ ಮಂದಗತಿಯಿಂದ ಸಾಗುತ್ತಿದೆ. ಅಲ್ಲೊಂದು, ಇಲ್ಲೊಂದು ರಾಜಮನೆತನಗಳ ಚರಿತ್ರೆಯ ಗ್ರಂಥಗಳು ಹೊರಬೀಳುತ್ತಿವೆ. ಅದೇ ರೀತಿಯಲ್ಲಿ ಈ ಗ್ರಂಥವು ತುಳುನಾಡಿನ ಚರಿತ್ರೆಯನ್ನು ಸರಳವಾಗಿ ಚಿತ್ರಿಸುವ ಒಂದು ಉತ್ತಮ ಗ್ರಂಥ. ಡಾ. ಭಾಸ್ಕರ ಸಾಲೆತೊರರ ಗ್ರಂಥವು ಪ್ರಕಟವಾಗಿ ಇಂದಿಗೆ ಮೂರು ದಶಕಗಳ ಮೇಲಾದವು. ಅಂದಿನಿಂದ ಇಲ್ಲಿಯವರೆಗೆ ನೂರಾರು ಹೊಸ ಶಾಸನಗಳು ಬೆಳಕಿಗೆ ಬಂದು ಡಾ. ಸಾಲೆತೊರರ ಅನೇಕ ಅಭಿಪ್ರಾಯಗಳು ಬದಲಾಗಿವೆ. ಇವುಗಳನ್ನೆಲ್ಲಾ ಗಮನಕ್ಕೆ ತೆಗೆದುಕೊಂಡು ಡಾ. ರಮೇಶ ಅವರು ಈ ಚೊಕ್ಕ ಗ್ರಂಥವನ್ನು ರಚಿಸಿದ್ದಾರೆ. ಶಾಸನಗಳು ಚರಿತ್ರಕಾರನಿಗೆ ಯಾವರೀತಿ ಸಹಾಯ ಮಾಡುತ್ತವೆ ಎಂದು ತಿಳಿಯಲು ಇದೊಂದು ಉತ್ತಮ ನಿದರ್ಶನ. ಶಾಸನದ ಮೂಲಪ್ರತಿಯನ್ನು ನೋಡದೆ ಅಲ್ಲಲ್ಲಿ ಸಿಕ್ಕುವ ಮಾಹಿತಿಗಳಿಂದ ಇತಿಹಾಸ ರಚನೆ ಇತ್ತೀಚೆಗೆ ಹೆಚ್ಚುತ್ತಿದೆ. ಆದರೆ ಈ ಗ್ರಂಥದ ಲೇಖಕರು ಶಾಸನ ಮತ್ತು ಲಿಪಿ ಶಾಸ್ತ್ರಗಳಲ್ಲಿ ಪರಿಣತರು. ಕರ್ಣಾಟಕ ಚರಿತ್ರೆಯ ವಿದ್ಯಾರ್ಥಿಗಳು ಇವರಿಗೆ ಈ ಗ್ರಂಥಕ್ಕಾಗಿ ಋಣಿಯಾಗಿರಬೇಕು.

ಪುರಾತನ ಕಾಲದಿಂದ ವಿಜಯನಗರದ ಕಾಲದವರೆಗಿನ ತುಳುನಾಡಿನ

ರಾಜಕೀಯ ಚರಿತ್ರೆ, ಸಾಮಾಜಿಕ, ಆಡಳಿತ, ಧಾರ್ಮಿಕ ಪದ್ಧತಿಗಳನ್ನು ವಿವರಿಸಿದ್ದಾರೆ. ಪುರಾತನ ತುಳುನಾಡಿನ ಇತಿಹಾಸವನ್ನು ತಿಳಿಯಲು ಹೊರಟಾಗ ಉಂಟಾಗುವ ನಿರುತ್ಸಾಹ ಅಪಾರವಾದುದು. ತುಳುನಾಡಿನ ಯಾವ ಪ್ರಾಚೀನ ನಿವೇಶನದಲ್ಲಿಯೇ ಆಗಲೀ ಇದುವರೆವಿಗೂ ಉತ್ಖನನಗಳು ನಡೆಯದೆ, ಅಶೋಕನ ಕಾಲಕ್ಕಿಂತ ಮುಂಚೆ, ಅಲ್ಲಿನ ಚರಿತ್ರೆ ಮತ್ತು ಪ್ರಾಗಿತಿಹಾಸ ನಮಗೆ ಏನೂ ತಿಳಿದಿಲ್ಲ ಉದ್ಯಾವರ, ಬಾರಕೂರು, ಮಂಗಳೂರು, ಬಸರೂರು, ಕಾರ್ಕಳ ಮುಂತಾದ ಸ್ಥಳಗಳು ಪುರಾತತ್ವಜ್ಞನ ಗುದ್ದಲಿಯ ಪೆಟ್ಟಿಗಾಗಿ ಕಾಯುತ್ತಿವೆ.

ತುಳುನಾಡಿನ ರಾಜಕೀಯ ಮತ್ತು ಸಾಮಾಜಿಕ ಚರಿತ್ರೆಯನ್ನು ಪ್ರಾಚೀನ, ಮಧ್ಯಯುಗೀನ ಮತ್ತು ವಿಜಯನಗರ ಕಾಲವೆಂದು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಈ ಕಾಲಗಳಲ್ಲಿ ಆಳುತ್ತಿದ್ದ ಕರ್ಣಾಟಕ ರಾಜಮನೆತನ ಗಳೊಂದಿಗೆ ತುಳುನಾಡು ಹೊಂದಿದ್ದ ರಾಜಕೀಯ ಸಂಪರ್ಕಗಳನ್ನು ಚರ್ಚಿಸ ಲಾಗಿದೆ. ತುಳು, ಆಳುಪ ಮುಂತಾದ ಪದಗಳ ಉಗಮದ ವಿಚಾರವನ್ನು ಲೇಖಕರು ವಿವೇಚಿಸಿದ್ದಾರೆ. ಈ ವಿಚಾರದಲ್ಲಿ ನಿರ್ದಿಷ್ಟವಾದ ಅಭಿಪ್ರಾಯವನ್ನು ತಿಳಿಸುವ ಮಾಹಿತಿಗಳು ಇನ್ನೂ ದೊರಕಿಲ್ಲ. ಕಾಡುಗಳನ್ನು ಅಳಿಸುವ ಮಹತ್ಸಾಧ ನೆಯು ಕಬ್ಬಿಣದ ಕೊಡಲಿಯ ಸಹಾಯವಿಲ್ಲದ ಮನುಷ್ಯರಿಂದ ಸಾಧ್ಯವಾಗಿರಲಾರ ದೆಂಬ ಬ್ರೂಸ್‌ಫುಟ್‌ನ ಸಿದ್ಧಾಂತವನ್ನು ಲೇಖಕರು ಹೇಳಿದ್ದಾರೆ. ಆದರೆ ಬ್ರೂಸ್ ಫುಟ್‌ನ ನಂತರ ಬಂದ ಪುರಾತತ್ವಜ್ಞರ ಸಂಶೋಧನೆಗಳಿಂದ ಈ ಹೇಳಿಕೆಯು ಸರಿಯಲ್ಲವೆಂದು ತಿಳಿದುಬಂದಿದೆ. ಕಬ್ಬಿಣದ ಯುಗಕ್ಕೆ ಮುಂಚೆಯೇ ಮಾನವನು ಕಾಡುಗಳನ್ನು ಅಳಿಸಿಹಾಕುತ್ತಿದ್ದನೆಂಬುದು ಈಗ ಖಚಿತವಾಗಿದೆ. ಕಬ್ಬಿಣದ ಯುಗದ ಮಾನವನೇ ತುಳುನಾಡಿನ ಆದಿಮಾನವನಿರಬಹುದೆಂದು ಲೇಖಕರು ಊಹಿಸಿದ್ದಾರೆ. ಈ ದಿಶೆಯಲ್ಲಿ ನಿವೇಶನಾನ್ವೇಷಣೆ (exploration) ಮತ್ತು ಉತ್ಖನನಗಳು ಮುಖ್ಯವಾಗಿ ಆಗಬೇಕಾದ ಕಾರ್ಯ. ಸುಗಮ ಆಡಳಿತ ದೃಷ್ಟಿ ಯಿಂದ ರಾಜ್ಯವನ್ನು ನಾಡುಗಳಾಗಿ ವಿಂಗಡಿಸಿದ್ದರೆಂದು ಎಲ್ಲರ ಒಪ್ಪಿಗೆಗೆ ಪಾತ್ರ ವಾಗಿದ್ದರೂ, ನಾಡುಗಳ ಜೊತೆಯಲ್ಲಿ ಕಾಣಬರುವ ಸಂಖ್ಯೆಗಳ ಅರ್ಥವಿನ್ನೂ ಚರ್ಚಾಸ್ಪದವಾಗಿಯೇ ಇದೆ.

ಈ ಗ್ರಂಥವು ರಾಷ್ಟ್ರಕವಿ ಗೋವಿಂದ ಪೈ ಸ್ಮಾರಕ ಸಂಶೋಧನಾ ಕೇಂದ್ರದ ಎರಡನೆಯ ಪ್ರಕಟನೆ. ಗೋವಿಂದ ಪೈ ಅವರಿಗೆ ತುಳುನಾಡಿನ ಇತಿಹಾಸ ಮತ್ತು ಸಂಸ್ಕೃತಿಯ ಬಗೆಗೆ ಇದ್ದ ಆಸಕ್ತಿ ಮತ್ತು ಪಾಂಡಿತ್ಯ ಎಲ್ಲರಿಗೂ ತಿಳಿದೇ ಇದೆ. ಆದುದರಿಂದ ಈ ಸಂಸ್ಥೆಯವರು ಈ ಗ್ರಂಥವನ್ನು ಪ್ರಕಟಿಸುತ್ತಿರುವುದು ಅವರಿಗೆ ನೀಡಬಹುದಾದ ಕಾಣಿಕೆ. ಶಾಸನತಜ್ಞ ಡಾ. ರಮೇಶ ಅವರು ಈ ಕಾರ್ಯವನ್ನು ಸ್ತುತ್ಯರ್ಹವಾಗಿ ಮಾಡಿ ಕನ್ನಡ ನಾಡಿನ ಜನಗಳಿಗೆ ಉಪಕಾರಮಾಡಿದ್ದಾರೆ. ಇದನ್ನು ಪ್ರಕಟಿಸಿದ ಸಂಶೋಧನಾ ಕೇಂದ್ರದವರೂ ಮತ್ತು ಮೈಸೂರಿನ ಗೀತಾ

ಬುಕ್ ಹೌಸ್ ಸಂಸ್ಥೆಯವರೂ ಅಭಿನಂದನಾರ್ಹರು. ಪುಸ್ತಕದ ರಕ್ಷಾಕವಚ ಮತ್ತು ಮುದ್ರಣ ಸುಂದರವಾಗಿವೆ.

—ಎ. ವಿ. ನರಸಿಂಹಮೂರ್ತಿ

**ವೈದಿಕ ಪುರಾಣಗಳು,** ಬರೆದವರು : ಡಾ. ಸದಾನಂದ ನಾಯಕ, ಪ್ರಕಾಶಕರು : ಸುರುಚಿ ಪ್ರಕಾಶನ, ಸರಸ್ವತೀಪುರಂ, ಮೈಸೂರು–೯, ಪುಟ : ೭೮ ; ಬೆಲೆ : ಸಾಧಾರಣಪ್ರತಿ : ೨–೫೦ ರೂ., ಉತ್ತಮ ಪ್ರತಿ : ೪–೦೦ ರೂ.

ಈ ಪುಸ್ತಕದ ಹೆಸರನ್ನು ಪುಸ್ತಕದ ರಟ್ಟಿನ ಮೇಲೆ 'ವೈದಿಕ ಪುರಾಣಗಳು' ಎಂದೂ ಒಳ ಪುಟದಲ್ಲಿ 'ಕನ್ನಡ ಸಾಹಿತ್ಯದಲ್ಲಿ ವೈದಿಕ ಪುರಾಣಗಳು' ಎಂದೂ ಉಲ್ಲೇಖಿಸಲಾಗಿದೆ. ಈ ಗ್ರಂಥಕ್ಕೆ ಡಾ. ಹಾ.ಮಾ. ನಾಯಕ ಅವರು 'ಕೆಳೆನುಡಿ' ಬರೆದಿದ್ದಾರೆ. ಡಾ. ಸದಾನಂದ ನಾಯಕರು ಈ ಪುಸ್ತಕದಲ್ಲಿ ನಮ್ಮ ವೈದಿಕ ಪುರಾಣಗಳ ಸ್ಥೂಲಪರಿಚಯವನ್ನು ಮಾಡಿಕೊಡಲು ಪ್ರಯತ್ನಿಸಿದ್ದಾರೆ. ಶ್ರೀಯುತರು ಜೈನಪುರಾಣಗಳು, ವೀರಶೈವಪುರಾಣಗಳು ಎಂಬ ಎರಡು ಕೃತಿಗಳನ್ನೂ ಈ ಹಿಂದೆ ಪ್ರಕಟಿಸಿದ್ದಾರೆ. ಅವುಗಳಿಗೆ ಈ ಕೃತಿ ಪೂರಕವಾಗಿದೆ.

ಈ ಗ್ರಂಥದಲ್ಲಿ ವೈದಿಕ ಪುರಾಣಗಳ ಸಂಖ್ಯೆ ಹಾಗೂ ವಿಸ್ತಾರ, ಪುರಾಣಗಳನ್ನು ಬರೆದ ಕವಿಗಳು, ಪುರಾಣಗಳ ಕಾಲ, ಪುರಾಣಗಳ ಲಕ್ಷಣಗಳು, ಸಂಸ್ಕೃತ ಸಾಹಿತ್ಯದಲ್ಲಿ ಪುರಾಣಗಳ ಸ್ಥಾನಮಾನ, ಕನ್ನಡ ಸಾಹಿತ್ಯದಲ್ಲಿ ವೈದಿಕ ಪುರಾಣಗಳ ಪ್ರಪಂಚ, ಉಪಸಂಹಾರ, ಪೌರಾಣಿಕ ರಾಜರ ವಂಶಾವಳಿ—ಈ ವಿಷಯಗಳನ್ನು ವಿವರಿಸಲಾಗಿದೆ.

"ಪ್ರತಿಯೊಂದು ಪುರಾಣವೂ ಪ್ರತ್ಯೇಕವಾಗಿ ರಚಿತವಾಯಿತೆಂದು ಅನ್ನುವುದಕ್ಕಿಂತ ಪುರಾಣಸಾಹಿತ್ಯವು ನೂರಾರು ವರ್ಷಗಳ ವರೆಗೆ ಹಲವು ಮುಖಗಳಿಂದ ಬೆಳೆದು ಕೊನೆಗೊಂದು ವ್ಯಾಸಸಮುದಾಯವು ಅವುಗಳನ್ನು ಪೃಥಕ್ಕರಣ ಮಾಡಿ ಹದಿನೆಂಟು ಪುರಾಣಗಳನ್ನಾಗಿ ಮಾಡಿರಬಹುದೆಂದು ಭಾವಿಸುವುದು ಹೆಚ್ಚು ಸಮಂಜಸವೆನಿಸುವುದು"; ಪುರಾಣಗಳು "ವೈದಿಕಧರ್ಮದ ವಿಶ್ವಕೋಶಗಳೆಂದರೂ ಸಲ್ಲುವುವು"—ಎಂಬಂತಹ ಕೆಲವು ಅಭಿಪ್ರಾಯಗಳು ಸಮಂಜಸವಾಗಿವೆ. ಆದರೆ ಕನ್ನಡ ಪುರಾಣಗಳ ಬಗೆಗೆ ಬರೆದುದು ಏನೇನೂ ಸಾಲದು ಎಂಬಂತಿದೆ; ಕೇವಲ ಟಿಪ್ಪಣಿಗಳಂತಿದೆ.

ವರಕವಿ ಬತ್ತಲೇಶ್ವರನ ವಿಚಾರವಾಗಿ ಚರ್ಚೆ ಇದೆ. ಅವನು ಬರೆದುದು 'ಕೌಶಿಕ ರಾಮಾಯಣ'ವೆಂದು ಡಾ. ಶಿವರಾಮಕಾರಂತರ ಅಭಿಪ್ರಾಯ. ಆದರೆ ೧೭೫೧ರಲ್ಲಿ ರಚಿತವಾದ 'ವರದ ವಿಠ್ಠಲ·ರಾಮಾಯಣ'ವೂ, ಇದೂ ಒಂದೇ ಎಂಬುದಕ್ಕೆ ಸಾಕಷ್ಟು ಆಧಾರಗಳಿವೆ ಎಂದು ತಿಳಿದು ಬಂದಿದೆ. ('ಉತ್ತರ ಕನ್ನಡ ಜಿಲ್ಲೆಯ ಗ್ರಂಥಕಾರರು' ಎಂಬ ಗ್ರಂಥದ ೨೩ನೇ ಪುಟನೋಡಿ.) ವರಕವಿ

ಬತ್ತಲೇಶ್ವರ, ವಾಲಗಳ್ಳಿಯ ವರದ ವಿಠ್ಠಲ—ಇಬ್ಬರು ಬೇರೆ ಬೇರೆಯಲ್ಲ. ಈ ಗ್ರಂಥದಲ್ಲಿ ಇವರಿಬ್ಬರೂ ಬೇರೆ ಬೇರೆ ಎಂದು ನಿರೂಪಿಸಲಾಗಿದೆ. (ಪು. ೫೩ ಮತ್ತು ಪು. ೫೮). ಈ ಬಗ್ಗೆ ಈ ಗ್ರಂಥದಲ್ಲಿ ಖಚಿತತೆ ಇಲ್ಲ.

ಹರಿಶರಣಾರೆನ್ನ ಮನೆಯಾ ಮೆಟ್ಟುಲು ಮನೇ
ಪರಮಪಾವನವಾಯಿತು...............॥ ಧ್ರು ॥

ಎಂದು ಅಚ್ಚಾದ ಪದ್ಯಭಾಗವನ್ನು (ಪುಟ. ೪೮)

ಹರಿಶರಣರೆನ್ನ ಮನೆಯ ಮೆಟ್ಟಲು ಮನೆ
ಪರಮಪಾವನವಾಯಿತು........ ...... ॥ ಧ್ರು ॥

ಎಂದು ಬರೆಯಬೇಕಿತ್ತು.

ಪುರಾಣಗಳೆಂದರೇನು, ಅವು ಯಾವುವು, ಅವುಗಳನ್ನು ಯಾರು ಬರೆದರು, ಕಾಲವೇನು, ಅವುಗಳಲ್ಲಿ ಏನೇನಿವೆ ಎಂಬೆಲ್ಲ ವಿಚಾರ ಕುತೂಹಲ ಕೆರಳಿಸುವಂತಿದೆ. ಇವುಗಳ ಸ್ಥೂಲಪರಿಚಯವನ್ನು ಕನ್ನಡದಲ್ಲಿ ಮೊತ್ತಮೊದಲಬಾರಿಗೆ ಮಾಡಿಕೊಟ್ಟ ಡಾ. ಸದಾನಂದರಿಂದಲೇ ಪುರಾಣಗಳ ಬಗೆಗೆ ಒಂದು ಉದ್ಗ್ರಂಥ ಬರಲಿ ಎಂದು ಹಾರೈಸುತ್ತೇವೆ.

ಉಶ್ಯಾಪ, ಆರಣ್ಯಕ, ಪ್ರಾವೀಣ್ಯತೆ, ಪ್ರಸ್ಥಾಪಿಸು, ತಿಮ್ಮಮಾತ್ಯ, ಅವಶ್ಯಕ —ಮೊದಲಾದ ಅಪರೂಪಗಳು ಈ ಗ್ರಂಥದಲ್ಲಿ ಅಚ್ಚಾಗಿರುವುದು ವಿಷಾದಕರ.

—ಗುಂಡ್ಮಿ, ಚಂದ್ರಶೇಖರ ಐತಾಳ

ಚಿನ್ನದ ಗೆರೆ (ಬೆಂಗಳೂರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳ ಪ್ರಾತಿನಿಧಿಕ ಕವನಗಳು), ಸಂಪಾದಕರು: ಡಾ. ಜಿ. ಎಸ್. ಶಿವರುದ್ರಪ್ಪ ಮತ್ತು ಇತರರು; ಪ್ರಕಾಶಕರು: ಸೆಂಟ್ರಲ್ ಕಾಲೆಜ್ ಕರ್ಣಾಟಕ ಸಂಘ, ಬೆಂಗಳೂರು; ಪುಟಗಳು: ೬೦; ಬೆಲೆ: ರೂ. ೨–೦೦: ೧೯೬೮.

ನಲವತ್ತೆರಡು ಪ್ರಾತಿನಿಧಿಕ ಕವನಗಳುಳ್ಳ ಈ ಸಂಕಲನದ ಬಹುಪಾಲು ಕವನಗಳು ಕಳೆದ ದಶಕಗಳ ಕವಿಗಳ ದಟ್ಟವಾದ ಪ್ರಭಾವಕ್ಕೆ ಒಳಗಾಗಿವೆ; ಬೇರೆ ಬೇರೆ ಪದ್ಯಗಳಲ್ಲಿ ಅದೇ ಭಾವ, ಅದೇ ಧಾಟಿ. ಅನೇಕರಲ್ಲಿ ಅನುಭವದ ನಿಷ್ಠುರ ಶೋಧನೆಯ ಹಟವಾಗಲಿ, ಭಾಷೆಯಲ್ಲಿ ಸಂಭವವಾಗುವ ಸ್ವಂತಾನುಸ್ವಂತ ಅಭಿವ್ಯಕ್ತಿಯ ಛಲ, ಹೋರಾಟಗಳಾಗಲಿ ಇಲ್ಲದೆ ಹೂತ ಕಾಲುಗಳ ಬರೀ ನರಳುವಿಕೆಯೇ ಕಾಣುತ್ತದೆ: ಪ್ರೇಮ ಅಮರ; ದೇವರು ವಿಶ್ವವ್ಯಾಪಿ; ತಾಯಿ ದೊಡ್ಡವಸ್ತು; ಮನಸ್ಸು ಕೆಟ್ಟದ್ದು; ಬದುಕಿನಲ್ಲಿ ನಗಬೇಕು; ಹೂವು ಸುಂದರವಾದುದು—ಮುಂತಾದ (ಸಾರ್ವತ್ರಿಕ) ಮಾಮೂಲೀ ವಿಚಾರಗಳನ್ನು ಕಣ್ಣುಮುಚ್ಚಿ ಬರೆಯುತ್ತಾ ಹೋಗುವ ಸರಳ ವ್ಯಾಖ್ಯಾನದ ಚಾಳಿಗೆ ಬಲಿಯಾಗಿದ್ದಾರೆ. ಕೆಲವು ಸಲ ತಾನು ಹೇಳಿದ್ದೆಲ್ಲಾ ಸರಿಯಾಗಿ ಓದುಗನಿಗೆ ತಲುಪುತ್ತದೆಯೋ

ಇಲ್ಲವೋ ಎನ್ನುವ ತವಕದಲ್ಲಿ ಕವನ ಹೇಳಬೇಕಾದ್ದನ್ನು ಬರೆದಾತನೇ ಹೇಳಿರುವುದೂ ಉಂಟು. ಉದಾ:

. . . . ಇದು ನಮ್ಮ ಮಲೆನಾಡಿನೊಂದು ಸಂಜೆಯ ನೋಟ
ಸಹಜ ಸುಂದರ ಚಿತ್ರ; ಸರಳ ಸುಂದರ ಪಾಠ.

'ಬಯಕೆ' ಮತ್ತು 'ಕಾಳಗವೀರ' ಅನುವಾದಿತ ಕವನಗಳು. 'ಕಾಳಗವೀರ' ಕನ್ನಡದ ಜಾಯಮಾನಕ್ಕೆ ಹೊಂದಿದ ತ್ರಿಪದಿಗಳಲ್ಲಿ ರೂಪುಗೊಂಡ ಯಶಸ್ವಿ ಕವನ. 'ಮಾವಯ್ಯ' 'ಮಾವಯ್ಯ' ಎಂದು ಮತ್ತೆ ಮತ್ತೆ ಪ್ರಕಟವಾಗುವ ಪ್ರೀತಿಪೂರ್ವಕ ಪದ ಕಾಳಗವೀರ ಮತ್ತು ಹುಡುಗಿಯ ಸ್ಥಿತಿಯನ್ನು ಅಭಿನಯಿಸುತ್ತದೆ. 'ಕಾರಕೂನನ ಮಗಳು' ತನ್ನ ಪರಿಮಿತಿಯಲ್ಲಿ ಸಫಲವಾದ ಅಣಕುವಾಡು. ಒಂದೆರಡು ಸುಂದರ ಸಾಲುಗಳನ್ನೂ ಬರೆಯದ ಹುಡುಗಿಯರ ಕವನಗಳೂ ಇಲ್ಲಿವೆ. (ಕನ್ನಡದ ಈ ರೀತಿಯ ಕೊರತೆಯನ್ನು ಕಂಡೇ ಇರಬೇಕು, ಈಚಿನ ಕೆಲವು ಶಕ್ತರು ಹುಡುಗಿಯರ ಹೆಸರಿನಲ್ಲಿ ಕವನಗಳನ್ನು ಪ್ರಕಟಿಸಿ ಖುಷಿಪಟ್ಟರು.)

ಕಾವ್ಯ, ಅತ್ಯವಶ್ಯಕ ಜೀವನಮೌಲ್ಯಗಳ ಶೋಧನೆಯ ಮಾಧ್ಯಮವಾಗಬೇಕೆಂದು ಕೆಲವರಾದರೂ ಅನುಭವವಲಯದಲ್ಲಿ ಪ್ರಾಮಾಣಿಕ ಹೆಣಗಾಟ ನಡೆಸಿರುವುದನ್ನು ಕಾಣಬಹುದು. 'ಕ್ಲಿಯೋಪಾತ್ರ ಮತ್ತು ನಾನು', 'ಮುದುಕ', 'ನೋವು', 'ಪ್ರೇಮ?' 'ಗಿಲೀಟು ಫೋಟೋಗಳು', 'ನನ್ನ ಕವನ', 'ವಿಫಲ'—ಮುಂತಾದ ಕವನಗಳಲ್ಲಿ ಅಂತಹ ಕೆಲವು ಎಳೆಗಳಾದರೂ ಇವೆ. ಸತ್ಯ ಕಂಡಾಗ,

. . . . ಎದೆ ಬೆಚ್ಚಿ, ನಡುಗಿ ಹಳೆಯ ನಂಬಿಕೆಯೆಲ್ಲ
ಎಲ್ಲೆಲ್ಲಿಯೋ ತೂರಿ ಕಾಗದದ ಚೂರಾಗಿ ಗಾಳಿಗಾಯ್ತು!

ಆರೋಗ್ಯದ ದೃಷ್ಟಿಯಿಂದ ಈ ಅನುಭವ ಒಳ್ಳೆಯದು. ಮುಂದೆ ಇನ್ನೂ ಸುತ್ತಿದ ನೋವಿನ ಕಾಟ:

ಬದುಕ ಬೆದಕಿ
ವ್ಯಕ್ತಿ–ಜಗತ್ತಿನ ಮಧ್ಯೆ ಅತೃಪ್ತ ಹಳುಬೆಳೆದ
ಕಾಡ ಕಂಡು,
ಕಾಲು ಕೀಲುಗಳಲ್ಲಿ ಯಾತನೆ.

ಅಭಿವ್ಯಕ್ತಿಯ ಕುತೂಹಲಕ್ಕಾಗಿ ಈ ಸಾಲುಗಳನ್ನು ಗಮನಿಸಬಹುದು:

ನಿನ್ನ ಮರೆಯಬೇಕೆನಿಸಿದಾಗೆಲ್ಲ
ನೆನಪು–ಕಜ್ಜಿ ತುರಿಯಾಗಿ ಕಾಡುತ್ತೆ,
ನಿನ್ನ ಕಣ್ಣಾರೆ ಕಾಣದ ಹುಚ್ಚು
ಗಾಳಿಯನು ಹಾಯುತ್ತೆ
ಇರುಳೆಲ್ಲ ಎಚ್ಚರವಾಗಿ ಹಗಲ ನೇಯುತ್ತೆ, . . . .

"ಭಿನ್ನವತ್ತಳೆ", 'ಮಾರ್ಗದರ್ಶಿ', 'ನರಪೇತಲ', 'ಮಹಾಪುರುಷ ಚರಿತವು'— ವ್ಯಂಗ್ಯದ ಮೂಲಕ ಹೇಳಬೇಕಾದ್ದನ್ನು ಹೇಳಹೊರಟ ಸುಂದರಕವನಗಳು. ಸಾವಯವ ಸಂಬಂಧವುಳ್ಳ ಜವಾಬ್ದಾರಿಯುತ ಪೂರ್ಣಶಿಲ್ಪದ 'ಕಟ್ಟು' ಈ ಜಾತಿಯ ಕವನಗಳ ಹಣೆಬರಹವನ್ನೂ ನಿರ್ಣಯಿಸುತ್ತದೆಂಬುದನ್ನು ನಾವು ಯೋಚಿಸಬೇಕು.

—ಕಾಳೇಗೌಡ ನಾಗವಾರ

ಚಂದ್ರಮಾಯೆ, ಕವಿ: ಗಂಗಪ್ಪವಾಲಿ; ಪ್ರಕಾಶಕರು: ಬಸಪ್ಪಾಸಜ್ಜನಶೆಟ್ಟಿ, ಚಿತ್ತಾಪೂರ, ಗುಲ್ಬರ್ಗಾ ಜಿಲ್ಲಾ; ಪುಟಗಳು: ೩೨ ; ಬೆಲೆ: ?

ಕವಿ ಗಂಗಪ್ಪವಾಲಿಯವರ 'ಚಂದ್ರಮಾಯೆ' ಇಪ್ಪತ್ತೇಳು ಅನುವಾದಿತ ಕವನಗಳ ಸಂಕಲನ. 'ದೇವತಾತಿಕೃತ ಶಿವಸೇನಾ ವರ್ಣನೆ' ಎಂಬುದು ಸಂಸ್ಕೃತದ 'ಸಿದ್ಧಾಂತ ಶಿಖಾಮಣಿ' ಎಂಬ ಸಂಸ್ಕೃತ ಗ್ರಂಥದಿಂದ ಆರಿಸಿಕೊಂಡ ಶ್ಲೋಕಗಳ ಅನುವಾದ. ಉಳಿದವೆಲ್ಲ ಇಂಗ್ಲಿಷ್ ಕವನಗಳ ಭಾವಾನುವಾದ. ಠಾಕೂರರವೇ ಎಂಟು ಕವನಗಳಿವೆ; ಇನ್ನಿತರವುಗಳು ಬೇರೆ ಬೇರೆ ಕವಿಗಳವು.

ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ಯಾವ ಕೃತಿಯನ್ನಾದರೂ ಪರಿವರ್ತಿಸಿದಾಗ ಮೂಲದ ಭಾಷೆಯ ಬನಿಯನ್ನಾಗಲಿ ಭಾವಸೌರಭವನ್ನಾಗಲಿ ಅಭಿವ್ಯಕ್ತಿಯ ಶಕ್ತಿಯನ್ನಾಗಲಿ ಮೂಲಕ್ಕೆ ಯಾವ ವಿಧದಲ್ಲಿಯೂ ಚ್ಯುತಿಬಾರದಂತೆ ಮೂಡಿಸಿದ್ದೇನೆಂಬುದು ಧಾರ್ಷ್ಟ್ಯದ ಮಾತಾದೀತು. ಅನುವಾದ ಕೃತಿಯಿಂದ ನಾವಿಷ್ಟೆಲ್ಲವನ್ನೂ ಬಯಸುವುದೂ ತರವಲ್ಲವೆಂದು ಕಾಣುತ್ತದೆ.

ಇಲ್ಲಿ ವಾಲಿಯವರು ಅನುವಾದಕ್ಕಾಗಿ ಆರಿಸಿಕೊಂಡಿರುವ ಕವಿತೆಗಳು ಮೂಲದಲ್ಲಿಯೂ ಕೂಡ ಹೇಳಿಕೊಳ್ಳುವಂತಹ ಉತ್ತಮ ಕವಿತೆಗಳೇನಲ್ಲ. ಅನುವಾದದ ಹಿಡಿತಕ್ಕೆ ಸುಲಭಗ್ರಾಹ್ಯವಾದ ಕವನಗಳನ್ನು ತೆಗೆದುಕೊಂಡು ಮೂಲದ ಸಾರವನ್ನು ಪ್ರತಿಬಿಂಬಿಸಲು ಸಾಕಷ್ಟು ಶ್ರಮ ನಡೆದಿದೆಯಾದರೂ 'ಚಂದ್ರಮಾಯೆ' 'ಸುಜನರಾಜ' 'ಮರಣರಹಿತನ ಬೆರೆಯಲು' 'ತೇಜಸ್ತೇಜಿ' 'ಪೂರ್ಣ ಜೀವನ' ಎಂಬ ಕವಿತೆಗಳು ಆಯಶಸ್ಸಿನ ಪ್ರತಿನಿಧಿಗಳಾಗಿ ನಿಲ್ಲುತ್ತವೆ.

'ಅಲ್ಲಿ! ಅಲ್ಲಿ! ಅಲ್ಲಿ!' (ಟಾಕೂರರ Where the mind is without fear ಎಂದು ಪ್ರಾರಂಭವಾಗುವ ಕವನ) ಮೂಲವನ್ನು ಮರೆಸುವಷ್ಟು ಸ್ವಾತಂತ್ರ್ಯವನ್ನು ವಹಿಸಿದೆ. ಇದೇ ಮಾತು ಬೆನ್ ಜಾನ್‌ಸನ್ ಕವಿಯ 'ಪೂರ್ಣ ಜೀವನ' (The perfect life) ಕವಿತೆಗೂ ಅನ್ವಯಿಸುತ್ತದೆ. ಟಾಕೂರರ 'Leave this chanting and singing and telling of beads' ಎಂಬ ಕವನ 'ದರ್ಶನ' ಎಂಬ ಹೆಸರಿನಲ್ಲಿ ಅನುವಾದಿಸಲ್ಪಟ್ಟು ಸರಳವಾಗಿ ಸುಲಲಿತವಾಗಿ ಸಾಲುಗಳು ಮುನ್ನಡೆದು ಮೂಲದ ಸೌಂದರ್ಯವನ್ನು ಉಳಿಸಿಕೊಳ್ಳಲು ಸೆಣಸಾಟ ನಡೆಸಿದೆ :

ಬಿಟ್ಟುಬಿಡು ಈ ಬಣಗು ಭಕ್ತಿಗಾನವನು
ಇಟ್ಟುಬಿಡು ಇಟ್ಟುಬಿಡು ಜಪಮಾಲೆಯನ್ನು
ದೇಗುಲದ ಬಾಗಿಲುಗಳೆಲ್ಲವನು ಮುಚ್ಚಿ
ಕತ್ತಲೆಯ ಮೂಲೆಯಲಿ ಕುಳಿತು ಕಣ್ಮುಚ್ಚಿ
ಪೂಜಿಸುತ್ತಿಹೆ ನೀನು ಯಾವ ದೇವನನು ?

ಹೀಗೆ ಹರಿದುಬಂದ ಗೀತೆ ಅಂತ್ಯದ ವೇಳೆಗೆ ಮರುಭೂಮಿಯಲ್ಲಿ ಹರಿದ ಕಿರು ದೊರೆಯಂತಾಗಿದೆ.

ಆದರೆ ಈ ಸಂಕಲನದಲ್ಲಿ ಮೆಚ್ಚುವಂತಿರುವ ಅನುವಾದ ಕವನವೆಂದರೆ ಥಾಮಸ್ ಗ್ರೇಯ ಎಲಿಜಿಯ ಮೊದಲ ಪಾಠಗಳು. ಚಿಕ್ಕ ಪದ್ಯವಾದರೂ ಚೊಕ್ಕ ವಾಗಿ ಮೂಡಿಬಂದಿದೆ. ಮೂಲದ ಸವಿಯನ್ನು ಹೊತ್ತುಕೊಂಡು ಸಾರ್ಥಕವಾದ ರೀತಿಯಲ್ಲಿ ಅನುವಾದಿಸಲ್ಪಟ್ಟು ಅಪವಾದದಿಂದ ಪಾರಾಗಿದೆ—

ಕಾಣದರಳುತ ಕಾಡ ಗಾಳಿಗೆ
ಬರಿದೆ ಕಂಪನು ಸುರಿವುದು
ಕ್ಷೋಣಿ ತಳದೊಳಗೆನಿತೊ ಹೂಗಳ
ಹಣೆಯ ಬರಹದೊಳಿರುವುದು
ಗುಣಿತ ಗಣಿತದ ತೆಕ್ಕೆಗಮರದ
ತಿಳಿಯ ಬೆಳಕಿನ ಮಣಿಗಳು
ಮಿನುಗುತಡಗಿವೆ ತಳವ ಕಾಣದ
ಕಡಲ ಕಗ್ಗವಿಯೊಡಲೊಳು

'ಕಡಲ ಕಗ್ಗವಿಯೊಡಲೊಳು' ಎಂಬ ಶಬ್ದಪ್ರಯೋಗ ಅನುವಾದದ ಸಿದ್ಧಿಯ ಸೂಚಿಯಾಗಿದೆ.

'ಆಯಾಸ ತುಂಬಿದಿರುಳು' 'ಕವಿ' 'ಬಾಲರವಿ' 'ಎಲ್ಲ ಪ್ರಾಕ್ತನ' ಮುಂತಾದ ಕವಿತೆಗಳಲ್ಲಿ ಅಲ್ಲಲ್ಲಿ ಕೆಲವು ಸಾಲುಗಳು ಜಯಭೇರಿ ಹೊಡೆದಿರುವು ದನ್ನು ಗುರುತಿಸಬಹುದಾಗಿದೆ :

ಇನಿಗೆನೆಯ ಹೋಲಿಕೆಯ ಚೀನಾಂಬರವನುಟ್ಟು
ಅಣಿಮುತ್ತುಗಳ ಸರಗಳನು ಕೊರಳಿಗಿಟ್ಟು
ಮನಸೆಳೆವ ಮುಂಗುರುಳ ಮಾಲೆಯನು ಮಿಳಿಸುತ
ಮನದನ್ನೆ ಬಾ೯ರನ್ನೆ ಮೆಲ್ಲಡಿಯನಿಟ್ಟು

(ಕಾಸಾರ ಮತ್ತು ಯಕ್ಷನೌಕೆ)

ಘನವಿಶಾಲ ಸುನೀಲ ಗಗನದಿ
ಹಿಮವು ಪವಡಿಸುವೆಡೆಯೊಳು
ಜನಿಸಿ ಧರೆಗೈತರುವ ನಿರ್ಜರ
ಗಂಗೆಯಾ ನೀರ್‌ಜಡೆಗಳು

(ಎಲ್ಲ ಪ್ರಾಕ್ತನ)

ಇಂತಹ ಸಾಲುಗಳು ಮುಗಿಲಿನ ಮರೆಯಿಂದ ಹೇಗೋ ತೂರಿಕೊಂಡು ಬಂದ ಚಂದ್ರಮಾಯೆಯ ಕಿರಣಗಳು.

ಒಟ್ಟಿನಲ್ಲಿ ಗಂಗಪ್ಪವಾಲಿಯವರು ಹಿಡಿದಿರುವ ಅನುವಾದದ ಪಥ ವಿಸ್ತಾರವಾಗಿದೆ. ಈ ಪಥದಲ್ಲಿ ಉತ್ತಮ ಕವಿತೆಗಳ ರಥಗಳು ಸುಗಮವಾಗಿ ಸಂಚರಿಸುವಂತಾಗಲಿ.

—ಪಿ. ಕೆ. ರಾಜಶೇಖರ

ಎರಡ. ಉಂಗುರ, ಲೇಖಕ: ಶೇಷನಾರಾಯಣ. ಪ್ರಕಾಶಕರು: ಮ. ಗೋವಿಂದರಾವ್, ಸಾಹಿತ್ಯಭಂಡಾರ, ೨೪೬, ರಾಷ್ಟ್ರೀಯ ವಿದ್ಯಾಲಯ ಬೀದಿ, ವಿಶ್ವೇಶ್ವರಪುರ, ಬೆಂಗಳೂರು-೪; ಪುಟಗಳು: ೨೪೯; ಬೆಲೆ: ಐದು ರೂಪಾಯಿಗಳು.

'ಎರಡು ಉಂಗುರ' ಸಾಮಾಜಿಕ ಕಾದಂಬರಿ. ಕಾದಂಬರಿಕಾರರ ಮಾತಿನಲ್ಲಿ ಹೇಳುವುದಾದರೆ 'ಮಾನವನ ಹೇರಾಸೆಗೆ ಒಂದು ಇತಿಯಿಲ್ಲ; ಮಿತಿಯಿಲ್ಲ. ಬಳಸುಮಾರ್ಗದಲ್ಲಿ ಅಡಿಯಿಟ್ಟು ಹೆಚ್ಚು ಸೌಕರ್ಯಗಳನ್ನು ದೊರಕಿಸಿಕೊಳ್ಳಬೇಕೆನ್ನುವ ಪ್ರಯತ್ನಕ್ಕೆ ಅವನು ಏನೂ ಮಾಡಲು ಸಿದ್ಧ. ಇಂಥ ಒಂದು ಪ್ರಯತ್ನ ಈ ಕೃತಿಯ ವಸ್ತು'. ಆದರೆ ಕಾದಂಬರಿಯನ್ನು ಓದಿ ಮುಗಿಸಿದ ಮೇಲೆ ಮನವರಿಕೆಯಾಗುವ ಮೊದಲನೆಯ ಅಂಶ ಈ ಕಾದಂಬರಿಯ ವಸ್ತುಕೇಂದ್ರದ ದುರ್ಬಲತೆ. ಇಲ್ಲಿನ ಕಥಾವಸ್ತು ಯಾದೃಚ್ಛಿಕವಾಗಿ ಅತ್ತಿತ್ತ ಅಲೆದಾಡುತ್ತದೆ. ಇನ್ನು ಕಾದಂಬರಿಯ ವಸ್ತುವಿಗೆ ತೀರ ಅಪೇಕ್ಷಣೀಯವಾದ ಕುತೂಹಲದ ಸನ್ನಿವೇಶಗಳಾಗಲಿ, ಚುರುಕಾಗಿ ಸಂಭವಿಸುವ ಕ್ರಿಯಾಸನ್ನಿವೇಶಗಳಾಗಲಿ, ಪಾತ್ರಗಳ ಮನೋವಿಶ್ಲೇಷಣೆಯಾಗಲಿ ಈ ಕಾದಂಬರಿಯಲ್ಲಿ ಸುಸ್ಪಷ್ಟವಾಗಿ ಕಂಡು ಬರುವುದಿಲ್ಲ. ಇಲ್ಲಿನ ಬಹುಪಾಲು ಪಾತ್ರಗಳು ಕಾದಂಬರಿಕಾರರ ಆದೇಶದ ಮೇಲೆಯೇ ನಡೆಯುತ್ತಿರುವಂತೆ ಭಾಸವಾಗದೆ ಇರದು.

ಪ್ರಸ್ತುತ ಕಾದಂಬರಿಯ ವಸ್ತು ಒಮ್ಮೆ ಮನೋಹರ, ದೊಡ್ಡೆ ಇವರ ಜೀವನದ ಹಿನ್ನೆಲೆಗಳತ್ತ ಸಾಗಿದರೆ, ಮತ್ತೊಮ್ಮೆ ಅವರ ಬಂಗಾರ ತಯಾರಿಕೆಯ ಕಾರ್ಯೋನ್ಮುಖತೆಯ ಕಡೆಗೆ—ಹೀಗೆ ಅತ್ತಿಂದಿತ್ತ ಜಗ್ಗುತ್ತದೆ. ಹೀಗಾಗಿ ಕಾದಂಬರಿ ಸಾಧಿಸಬೇಕಾದ ಉದ್ದೇಶಗಳಿಗೆ ಕಾದಂಬರಿಯಲ್ಲಿ ಸಾಕಷ್ಟು ಸ್ಥಳವೇ ಇಲ್ಲವಾಗಿ ಹೋಗಿ ಅಲ್ಲೊಮ್ಮೆ ಇಲ್ಲೊಮ್ಮೆ ಚರ್ವಿತಚರ್ವಣವಾದ ಈ ಸಂಬಂಧವಾದ ನಾಲ್ಕಾರು ಮಾತುಗಳು ತಲೆಹಾಕುತ್ತವೆ. ಹೀಗಾಗಿ ಕೃತಿಕಾರರು ಹೇಳುವ 'ಬಂಗಾರವನ್ನು ತಯಾರಿಸಲು ಹೊರಟ ಒಬ್ಬ ಯುವಕನ ರೋಮಾಂಚಕಾರೀ ಚಿತ್ರಣವಾಗಿದೆ' ಎನ್ನುವ ಮಾತು ದೂರವಾಗಿಯೇ ಉಳಿಯುತ್ತದೆ. ಮನೋಹರನೇ 'ಶಿದ್ದಲಿಂಗಪ್ಪ'ನಾಗುವಿಕೆ, ಅವನು ಅನುಭವಿಸುವ ಯಾತನಾಮಯ ಜೀವನ—ಇಂತಹ ಒಂದೆರಡು ಕಡೆ ಮನೋಹರನ ಪಾತ್ರ ಸ್ವಲ್ಪ

ಮಟ್ಟಿಗೆ ನಮ್ಮ ಸಂವೇದನೆಯನ್ನು ಮುಟ್ಟಿದಂತೆ ಭಾಸವಾಗುವುದೇ ವಿನಾ ಉಳಿದಂತೆ ಇದು ರೋಮಾಂಚಕಾರಿ ಚಿತ್ರಣವನ್ನೇನೂ ನೀಡಲಾರದು.

ಕಾದಂಬರಿಯ ನಾಯಕ ಮನೋಹರನಾದರೂ ಅವನ ಪಾತ್ರ ಅಷ್ಟೇನೂ ಪರಿಣಾಮಕಾರಿಯಾಗಿ ಮೂಡಿಬಂದಿಲ್ಲ. ಕಾದಂಬರಿಯ ಮತ್ತೊಂದು ಪ್ರಮುಖ ಪಾತ್ರವಾದ ದೊಡ್ಡಿ ಕಾದಂಬರಿಯಲ್ಲಿ ಸಾಕಷ್ಟು ಗಮನ ಸೆಳೆಯುವ ಪಾತ್ರ. ಇಷ್ಟಾದರೂ ಈ ಪಾತ್ರ ಮತ್ತಷ್ಟು ಜೀವಂತವಾಗಿ, ಮತ್ತಷ್ಟು ಹಸಿರಾಗಿ ಮೂಡಿ ಬರುವ ಸಾಧ್ಯತೆಯನ್ನು ಕಳೆದುಕೊಂಡಿದೆ ಎನ್ನದೆ ವಿಧಿಯಿಲ್ಲ. ಉಳಿದ ಪಾತ್ರ ಗಳಲ್ಲಿ, ಅವುಗಳ ಕ್ರಿಯೆಯಲ್ಲಿ ಹೇಳಿಕೊಳ್ಳುವಂತಹ ಹೊಸತೇನೂ ಇಲ್ಲ.

ಸನ್ನಿವೇಶಗಳ ದೃಷ್ಟಿಯಿಂದ ಮನೋಹರ 'ಶಿದ್ದಲಿಂಗಪ್ಪ'ನಾಗಿ ತನ್ನ ಮಗಳು ರೂಪಾಳ ವಿವಾಹದಲ್ಲಿ ಪಾಲ್ಗೊಂಡು, ಅನಾಮಧೇಯ ವ್ಯಕ್ತಿಯಾಗಿ ನಿಂತು ಮಗಳಿಗೆ ಹರಸುವುದು, ತನ್ನ ಪತ್ನಿ ಶೈಲುವಿನ ಉಂಗುರವನ್ನು ಮಗಳಿಗೆ ಬಾಲಕನೊಬ್ಬನ ಕೈಲಿ ಉಡುಗೊರೆಯಾಗಿ ಕೊಟ್ಟು ಕಳುಹಿಸಿ ತಾನು ಅಲ್ಲಿ ನಿಲ್ಲದೆ ಹೊರಟು ಹೋಗುವುದು—ಇದು ಸ್ವಲ್ಪಮಟ್ಟಿಗೆ ಪರಿಣಾಮಕಾರಿಯಾಗಿದೆ.

ಮನೋಹರನ ಪಾತ್ರ ದುರಂತವಾದುದು ; ದೊಡ್ಡಿಯ ಪಾತ್ರಕ್ಕೆ ದುರಂತ ಒದಗಿದರೂ, ಅದಕ್ಕೆ ಉದ್ಧಾರದ ಮೆಟ್ಟಲು ಅವಳ ಪಶ್ಚಾತ್ತಾಪ; ಅದು ಅವಳ ದೇಹ ತ್ಯಾಗದಿಂದ ದೊರಕಿ, ದೊಡ್ಡಿಯ ಪಾತ್ರಕ್ಕೆ ಕಾದಂಬರಿಯಲ್ಲಿ ಜೀವಕಳೆ ಇದೆ.

ಪ್ರಾದೇಶಿಕ ಹಿನ್ನೆಲೆಯಲ್ಲಿ ಗುಡ್ಡಗಾಡು ಜನರ ಆಚಾರ ವಿಚಾರ, ಮೂಢ ನಂಬಿಕೆ, ಮದ್ದುಮಾಟ ಇತ್ಯಾದಿಗಳನ್ನು ಈ ಕೃತಿಯಲ್ಲಿ ಚಿತ್ರಿಸಲು ಕಾದಂಬರಿ ಕಾರರು ಪ್ರಯತ್ನಿಸಿದ್ದಾರೆ. ಆದರೆ ಅವರಿಗೆ ಸಿಕ್ಕಿರುವ ಯಶಸ್ಸು ತೀರ ಕಡಿಮೆ. ಕರ್ನಾಟಕದ ದಕ್ಷಿಣಭಾಗ ಮತ್ತು ನೀಲಗಿರಿ ಜಿಲ್ಲೆಯಲ್ಲಿ ವಾಸಿಸುವ ಸೋಲಿಗ ಜನಾಂಗದ ಜೀವನಚಿತ್ರಣ ಸಾಕಷ್ಟು ಸಾಂದ್ರವಾಗಿ, ಪರಿಣಾಮಕಾರಿಯಾಗಿ ಮೂಡಿ ಬಂದಿಲ್ಲವೆಂದು ಹೇಳಬಹುದು.

ಇಷ್ಟಾದರೂ ಇವರ ಪ್ರಯತ್ನ ತೀರ ವ್ಯರ್ಥವೇನೂ ಅಲ್ಲವೆಂಬ ಸಮಾಧಾನ ತಾಳಬಹುದು. 'ಎರಡು ಉಂಗುರ' ಒಮ್ಮೆ ಓದಬಹುದಾದ ಕಾದಂಬರಿ.

—ಕೆ. ಭೈರವಮೂರ್ತಿ

**ಕರ್ನಾಟಕದಲ್ಲಿ ಗ್ರಂಥಾಲಯಗಳು, ಲೇ : ಎಸ್. ಆರ್. ಗುಂಜಾಳ ; ಪ್ರ : ಧಾರವಾಡ, ಕರ್ನಾಟಕ ವಿಶ್ವವಿದ್ಯಾಲಯ, ೧೯೬೯ ; x, ೬೨ ಪುಟಗಳು ; ಬೆಲೆ ೨೫ ಪೈಸೆ.**

ಕರ್ನಾಟಕದಲ್ಲಿ ಗ್ರಂಥಾಲಯಗಳ ಬೆಳವಣಿಗೆ ಬಗ್ಗೆ ಸ್ಥೂಲವಿವರಣೆ ಯೀಯುವ ಪುಸ್ತಕವಿದು. ೧೧ನೇ ಶತಮಾನದ ನಾಗಾವಿಯ (ಗುಲ್ಬರ್ಗ ಜಿಲ್ಲೆ) ಶಾಸನದಿಂದ ತಿಳಿದುಬರುವ ಸರಸ್ವತೀ ಭಂಡಾರಗಳ (ಗ್ರಂಥಾಲಯಗಳು) ಕಾಲ ದಿಂದ ಆರಂಭವಾಗಿ, ಶಾಂತರಸನ ಖಾಸಗಿ ಗ್ರಂಥಾಲಯ, ಬಿಜಾಪುರದ

ಆದಿಲಶಹನ ' ಗ್ರಂಥಾಲಯ ' ಮತ್ತು ಟೀಪು ಸುಲ್ತಾನನ ಖಾಸಗಿ ' ಗ್ರಂಥಾಲಯ ', ಆಂಗ್ಲರ ಕಾಲದಲ್ಲಿ ಸ್ಥಾಪಿತವಾದ ' ಗ್ರಂಥಾಲಯಗಳು ' ೧೮೯೦ರಲ್ಲಿ ಸ್ಥಾಪಿತವಾದ ಕರ್ನಾಟಕ ವಿದ್ಯಾವರ್ಧಕ ಸಂಸ್ಥೆಯ ಕಾರ್ಯ, ೧೯೩೦ರ ದಶಕದಲ್ಲಿ ಗ್ರಂಥ ಭಂಡಾರಗಳ ಸ್ಥಾಪನೆ ಬಗ್ಗೆ ಖಾಸಗಿಯಾಗಿ ನಡೆದ ವಿಫಲ ಯತ್ನಗಳು, ಆಗಿನ ಬೊಂಬಾಯಿ ಸರಕಾರ ನೇಮಿಸಿದ ಫೈಜಿ ಸಮಿತಿ, ಗ್ರಂಥಾಲಯಗಳ ಸ್ಥಾಪನೆ ಬಗ್ಗೆ ಕರ್ನಾಟಕದ ನಾನಾ ಭಾಗಗಳಲ್ಲಿ ನಡೆದ ಚಟುವಟಿಕೆಗಳು, ೧೯೬೫ರ ಮೈಸೂರು ಸಾರ್ವಜನಿಕ ಪುಸ್ತಕ ಭಂಡಾರ ಕಾಯದೆ, ಮೈಸೂರು, ಧಾರವಾಡ, ಬೆಂಗಳೂರು ವಿಶ್ವವಿದ್ಯಾನಿಲಯಗಳ ಗ್ರಂಥಾಲಯಗಳು, ಮೈಸೂರಿನ ವಯಸ್ಕರ ಶಿಕ್ಷಣ ಸಮಿತಿ ಗ್ರಂಥಾಲಯಗಳು, ಗ್ರಂಥಾಲಯ ಶಿಕ್ಷಣತರಬೇತಿ ಕೇಂದ್ರಗಳು—ಇವುಗಳ ಬಗ್ಗೆ ಉಲ್ಲೇಖವಿದೆ.

ಪ್ರಜಾಪ್ರಭುತ್ವದಲ್ಲಿನ ಶಿಕ್ಷಣ ವ್ಯವಸ್ಥೆಯಲ್ಲಿ ಗ್ರಂಥಾಲಯಗಳಿಗೆ ವಿಶಿಷ್ಟ ಸ್ಥಾನವಿದೆ. ಸಮಾಜದ ಹಿತವೇ ಪ್ರಧಾನವಾಗಿ, ಸರ್ವಜನರಿಗೂ ಅವರವರ ಅಭಿರುಚಿಗೆ ತಕ್ಕಂತೆ ಓದು ಸಾಮಗ್ರಿಯನ್ನು ಸಾರ್ವಜನಿಕ ಗ್ರಂಥಾಲಯ ಗಳಿಂದ ಪಡೆಯುವ ಹಕ್ಕು ಇದೆ. ಕಾಯದೆ ಪ್ರಕಾರ ಸಾರ್ವಜನಿಕ ಗ್ರಂಥಾಲಯ ವ್ಯವಸ್ಥೆ ಸರಕಾರದ್ದು.

ಹನ್ನೆರಡನೆಯ ಶತಮಾನದ ಶಾಂತರಸನು ಖಾಸಗಿಯಾಗಿ ಗ್ರಂಥ ಭಂಡಾರ ವನ್ನು ಹೊಂದಿದ್ದನೆಂಬುದು ನಿಜವಾದರೂ, ಆತನ ಭಂಡಾರವು ಹಲವು ಶರಣ ರಿಂದ ಉಪಯೋಗಿಸಲ್ಪಟ್ಟಿತೆಂಬ ಊಹೆಯ ಮೇಲೆ ಅದನ್ನು ' ಸಾರ್ವಜನಿಕ ಗ್ರಂಥಾಲಯ 'ವೆಂದು ಕರೆಯುವುದು ಸಮಂಜಸವೆನಿಸಲಾರದು. ಆಗಿನ ಕಾಲ ಗಳಲ್ಲಿ ಉದ್ದಾಮ ಪಂಡಿತರು, ಅರಸರು, ಧಾರ್ಮಿಕ ಮಠಗಳು ತಮ್ಮದೇ ಆದ ಗ್ರಂಥ ಭಂಡಾರವನ್ನು ವ್ಯವಸ್ಥೆಗೊಳಿಸಿದ್ದುವು. ಆದರೆ ಕೆಲವರಿಗೆ ಮಾತ್ರ ಈ ಭಂಡಾರಗಳಲ್ಲಿಯ ಗ್ರಂಥಗಳ ಅವಲೋಕನ ಸಾಧ್ಯವಿತ್ತು.

ದಕ್ಷಿಣ ಕನ್ನಡ ಜಿಲ್ಲೆಯ ಗ್ರಂಥಾಲಯಗಳ ಬಗ್ಗೆ ಹಾಗೂ ಬೆಂಗಳೂರಿನಲ್ಲಿ ಈಗ ಇರುವ ಇತರ ಗ್ರಂಥಾಲಯಗಳ ಬಗ್ಗೆ ಸ್ವಲ್ಪ ಮಾಹಿತಿ ಕೊಡಬಹುದಿತ್ತು. ಒಟ್ಟಿನಲ್ಲಿ ಈ ಸಮೀಕ್ಷೆಯಿಂದ ಶ್ರೀ ಗುಂಜಾಳರು ಸ್ತುತ್ಯಕಾರ್ಯವೆಸಗಿದ್ದಾರೆ.

—ಟಿ. ವಿ. ಸುಬ್ರಹ್ಮಣ್ಯಂ

# ವಸ್ತುಕೋಶ

## ಭಾರತೀಯ ಸಾಹಿತ್ಯದಲ್ಲಿ ಗಾಂಧೀಜಿ

ಗಾಂಧಿ ಜನ್ಮಶತಾಬ್ದಿಯ ವರ್ಷದಲ್ಲಿ ನಡೆದ ಅನೇಕ ಕಾರ್ಯಕ್ರಮಗಳಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಆಶ್ರಯದಲ್ಲಿ ಮೈಸೂರಿನಲ್ಲಿ ಫೆಬ್ರವರಿಯಲ್ಲಿ ನಡೆದ ವಿಚಾರಗೋಷ್ಠಿ ಭಾರತೀಯ ಸಾಹಿತ್ಯದ ದೃಷ್ಟಿಯಿಂದ ಅತ್ಯಂತ ಮಹತ್ವದ ಕಾರ್ಯಕ್ರಮವೆಂದು ಉಲ್ಲೇಖಮಾಡಬಹು ದಾಗಿದೆ. 'ಭಾರತೀಯ ಸಾಹಿತ್ಯದಲ್ಲಿ ಗಾಂಧೀಜಿ'—ಇದು ವಿಚಾರಗೋಷ್ಠಿಯ ವಿಷಯವಾಗಿತ್ತು. ಎಲ್ಲ ಭಾರತೀಯ ಭಾಷೆಗಳ ಸಾಹಿತ್ಯದಲ್ಲಿ ಗಾಂಧೀಜಿಯವರ ತತ್ತ್ವಗಳು ಎಷ್ಟರಮಟ್ಟಿಗೆ ಪ್ರತಿಬಿಂಬಿಸಿವೆ ಎಂಬುದನ್ನು ಕಂಡುಕೊಳ್ಳುವುದೇ ಈ ವಿಚಾರಗೋಷ್ಠಿಯ ಉದ್ದೇಶವಾಗಿತ್ತು. ಇಷ್ಟು ವ್ಯಾಪಕವಾದ ಹಿನ್ನೆಲೆಯಲ್ಲಿ ಭಾರತೀಯ ಸಾಹಿತ್ಯದ ಮೇಲೆ ಆದಂತಹ (ಅಥವಾ ಆಗಿಲ್ಲದಿರುವ) ಗಾಂಧೀಜಿ ಯವರ ಪ್ರಭಾವವನ್ನು ಕಂಡುಕೊಳ್ಳುವ ಮೊಟ್ಟಮೊದಲ ಪ್ರಯತ್ನವಿದು. ಈ ದೃಷ್ಟಿಯಿಂದ ಈ ವಿಚಾರಗೋಷ್ಠಿಯ ವಿಶೇಷತೆ ಸಹಜವಾಗಿಯೇ ಗಮನಕ್ಕೆ ಬರುತ್ತದೆ.

ಈ ವಿಚಾರಗೋಷ್ಠಿಯ ಯೋಜನೆಯೂ ಅತ್ಯಂತ ವಿಚಾರಪೂರ್ಣ ಹಾಗೂ ಮಾರ್ಮಿಕವಾಗಿತ್ತು. ಇದರ ಶ್ರೇಯಸ್ಸು ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕ ರಾದ ಡಾ. ಮಾನಪ್ಪನಾಯಕರಿಗೆ ಸೇರಿದೆ. ಅವರು ವಿಷಯವನ್ನು ಎರಡು ಭಾಗ ಗಳನ್ನಾಗಿ ವಿಂಗಡಿಸಿದ್ದರು—'ಭಾರತೀಯ ಸಾಹಿತ್ಯದಲ್ಲಿ ಗಾಂಧೀಜಿ' ಮತ್ತು 'ಭಾರತೀಯ ಸಾಹಿತ್ಯದ ಮೇಲೆ ಗಾಂಧೀಜಿಯ ಪ್ರಭಾವ'. ಇವುಗಳಲ್ಲಿ ಮೊದಲನೆಯ ಭಾಗ ಮುಖ್ಯವಾಗಿ ಪರಿಚಯಾತ್ಮಕವಾಗಿದ್ದರೆ, ಎರಡನೆಯ ಭಾಗ ವಿಮರ್ಶಾತ್ಮಕವಾಗಿರಬೇಕೆಂಬುದೇ ಅಪೇಕ್ಷೆಯಾಗಿತ್ತು. ಅದಕ್ಕಾಗಿ ಪ್ರತಿಯೊಂದು ಭಾಷೆಯ ಕಡೆಯಿಂದ ಇಬ್ಬರಿಬ್ಬರು ಭಾಷಣಕಾರರನ್ನು ನಿಯೋಜಿಸಲಾಗಿತ್ತು. ಆದರೆ ಎಲ್ಲ ಭಾಷೆಗಳ ವಿಷಯದಲ್ಲೂ ಇದು ಸಫಲವಾಗಲಿಲ್ಲ. ಇದರ ದೋಷ ನಿರ್ದೇಶಕರದಲ್ಲ. ಸಾಹಿತಿಗಳ ಉದಾಸೀನತೆಯೇ ಇದಕ್ಕೆ ಕಾರಣವೆನ್ನಿಸಿತು. ಕನ್ನಡ, ತೆಲುಗು, ಮರಾಠಿ ಮತ್ತು ಹಿಂದಿ ಈ ನಾಲ್ಕು ಭಾಷೆಗಳ ವಿಷಯದಲ್ಲಿ ಈ ಯೋಜನೆಯು ಸಫಲವಾಯಿತು. ಸಂಸ್ಕೃತ, ತಮಿಳು, ಕಾಶ್ಮೀರಿ, ಮಲಯಾಳಂ, ಉರ್ದು, ಇಂಗ್ಲಿಷ್, ಅಸಾಮಿಯ ಮತ್ತು ಉಡಿಯ ಈ ಭಾಷೆಗಳ ಒಬ್ಬೊಬ್ಬ ಪ್ರತಿನಿಧಿ ಮಾತ್ರ ಹಾಜರಿದ್ದರು. ಗುಜರಾತಿ ಪ್ರತಿನಿಧಿಗಳು ಸ್ವತಃ ಹಾಜರಾಗಲಿಲ್ಲ

ವಾದರೂ ತಮ್ಮ ಪ್ರಬಂಧವನ್ನು ಕಳುಹಿಸಿದ್ದರು. ಅದನ್ನು ಓದಲಾಯಿತು. ಮೈಥಿಲಿಯ ಪ್ರತಿನಿಧಿ ಡಾ. ಜಯಕಾಂತ ಮಿಶ್ರ ಅವರು ಈ ಗೋಷ್ಠಿಯು ಮುಗಿದ ನಂತರ ಬಂದರು. ಆದ್ದರಿಂದ ಅವರಿಂದ ಆಗಬಹುದಾದ ಲಾಭವು ವಿಚಾರ ಗೋಷ್ಠಿಗೆ ದೊರಕಲಿಲ್ಲ. ಬಂಗಾಳಿ, ಸಿಂಧಿ ಮತ್ತು ಪಂಜಾಬಿ ಭಾಷೆಗಳ ಪ್ರತಿನಿಧಿ ಗಳು ಬರಲು ಒಪ್ಪಿಕೊಂಡಿದ್ದರೂ ಸಹ ಬರಲಾಗಲಿಲ್ಲ. ಆದರೂ ಅವರ ಪ್ರಬಂಧ ಗಳು ಅನಂತರ ಸಿಗಬಹುದು ಹಾಗೂ ಅವುಗಳನ್ನು ಪರಿಶಿಷ್ಟದ ರೂಪದಲ್ಲಿ ವಿಚಾರ ಗೋಷ್ಠಿಯ ವಿವರಣೆಯ ಪುಸ್ತಕದಲ್ಲಿ ಸೇರಿಸಬಹುದು ಎಂದು ತಿಳಿಯುತ್ತೇನೆ. ಈ ವಿವರಣೆಯ ಪುಸ್ತಕವು ಯಾವಾಗ ಪ್ರಕಟವಾಗುವುದೋ ಆಗ ಭಾರತೀಯ ಸಾಹಿತ್ಯದಲ್ಲಿ ಗಾಂಧೀಜಿಯ ಪ್ರಭಾವದ ಒಂದು ಸಮಗ್ರ ಚಿತ್ರವನ್ನು ನೋಡ ಬಹುದು ಎಂದು ಆಶಿಸುತ್ತೇನೆ.

ಮೈಸೂರು ವಿಶ್ವವಿದ್ಯಾನಿಲಯದ ಆವರಣಕ್ಕೆ 'ಮಾನಸಗಂಗೋತ್ರಿ' ಎಂಬ ಮಹದರ್ಥಪೂರ್ಣವಾದ ಹಾಗೂ ಕಾವ್ಯಮಯವಾದ ಹೆಸರನ್ನು ಕೊಟ್ಟಿದ್ದಾರೆ. ಮಾನಸಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯ ಕಟ್ಟಡದಲ್ಲಿ ಈ ವಿಚಾರ ಗೋಷ್ಠಿಯು ಕಳೆದ ಫೆಬ್ರವರಿ ೧೮ರಂದು ಪ್ರಾರಂಭವಾಯಿತು. ಪ್ರಾರಂಭದಲ್ಲಿ ಪರಂಪರಾಗತ ಸ್ವಾಗತಗೀತೆಗೆ ಬದಲಾಗಿ ಗಾಂಧೀಜಿಗೆ ಪ್ರಿಯವಾಗಿದ್ದ ಭಜನೆ 'ವೈಷ್ಣವ ಜನತೋ ತೇನೆ ಕಹಿಯೆ' ಹಾಡಲಾಯಿತು. ಆಗ ಅಲ್ಲಿ ಸೇರಿದ್ದ ಎಲ್ಲ ಜನರೂ ಎದ್ದು ನಿಂತರು. ಪ್ರಾರಂಭದ ಈಶಸ್ತುತಿ ಅಥವಾ ಮಾತೃಭಾಷಾ ಗೌರವದ ಗೀತೆ ಹಾಡುವಾಗ ಗೌರವ ಸೂಚಿಸುವುದಕ್ಕಾಗಿ ಎಲ್ಲರೂ ಎದ್ದುನಿಲ್ಲುವ ಈ ಪದ್ಧತಿ ದಕ್ಷಿಣದ ಎಲ್ಲ ಕಡೆಗಳಲ್ಲೂ ಇದೆ ಎಂದು ಕಾಣುತ್ತದೆ. (ಮದರಾಸಿನಲ್ಲಿ ಒಂದು ಸಭೆಯಲ್ಲಿ ನಾನು ಇದನ್ನು ನೋಡಿದ್ದೆ).

## ಉಲ್ಲೇಖನೀಯ ಭಾಷಣ

ಸಂಸ್ಥೆಯ ನಿರ್ದೇಶಕರಾದ ಡಾ. ನಾಯಕ್‌ರವರು ಪ್ರತಿನಿಧಿಗಳ ಸ್ವಾಗತ ಭಾಷಣ ಮಾಡಿದರು. ಆ ಭಾಷಣ ಎಷ್ಟು ವಿವರಣೆಗಳನ್ನೊಳಗೊಂಡಿತ್ತೆಂದರೆ, ಅದನ್ನೊ ಗೋಷ್ಠಿಯ ಒಂದು ಉತ್ಕೃಷ್ಟ ಪ್ರಬಂಧವೆಂದು ಹೇಳಿದರೂ ಅಡ್ಡಿಯಿಲ್ಲ. ಅವರು ಹೆಚ್ಚು ಕಡಿಮೆ ಎಲ್ಲ ಭಾರತೀಯ ಭಾಷೆಗಳನ್ನೂ ಸಂಕ್ಷೇಪವಾಗಿ ತೆಗೆದುಕೊಂಡು ಆಯಾ ಭಾಷೆಗಳ ಸಾಹಿತ್ಯಗಳ ಮೇಲೆ ಗಾಂಧೀಜಿಯ ಪರಿಣಾಮವೇನಾಯಿತು ಎಂಬುದರ ಸುಂದರ ವಿವೇಚನೆ ಮಾಡಿದ್ದರು. ಗಾಂಧೀಜಿಯವರಿಂದಲೇ ಭಾರತೀಯ ಲೇಖಕರು ಶ್ರೀಮಂತ ಹಾಗೂ ಮಧ್ಯಮ ವರ್ಗದ ಸಮಾಜದಿಂದ ಬಡ ಹಾಗೂ ಗ್ರಾಮೀಣ ಸಮಾಜದ ಕಡೆ ಹೊರಳಿದರು, ಇದು ಅವರ ದೊಡ್ಡ ಕೊಡುಗೆ ಯಾಗಿದೆ ಎಂಬುದನ್ನು ಡಾ. ನಾಯಕರು ತಮ್ಮ ಭಾಷಣದಲ್ಲಿ ನಮೂದಿಸಿದರು. ಇಡೀ ಗೋಷ್ಠಿಯಲ್ಲಿ ಅವರ ಭಾಷಣ ಇದಿಷ್ಟೇ. ಇದಾದ ಮೇಲೆ ಅವರು ಮತ್ತೆ

ಒಂದು ಬಾರಿಯಾದರೂ ಬಾಯಿ ತೆರೆಯಲಿಲ್ಲ. ಇದರಲ್ಲಿ ಅವರ ವಿನಯ ಇದ್ದಿತ್ತು, ಅಲ್ಲದೆ ತಮ್ಮ ವಿದ್ವತ್ತಿನ ಪ್ರದರ್ಶನ ಮಾಡದಿರುವ ಪರಂಪರಾಗತ ಸಂಯಮವೂ ಅವರಲ್ಲಿದ್ದಿತು. ಇಂತಹ ಸಮರ್ಥರಾದರೂ ಮೌನದಿಂದಿರುವ ಸಂಚಾಲಕರು ಕೆಲವೇ ಜನರು ನೋಡಲು ಸಿಗುವರು.

ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾದ ಪ್ರೊ. ಜವರೇಗೌಡ ಅವರು ವಿಚಾರಗೋಷ್ಠಿಯನ್ನು ಉದ್ಘಾಟಿಸಿದರು. ಅವರೂ ಸಹ ಕನ್ನಡ ಸಾಹಿತ್ಯದ ಮೇಲೆ ಗಾಂಧೀಜಿಯವರ ಪ್ರಭಾವದ ವಿವೇಚನೆ ಮಾಡಿದರು. ಈ ವಿಚಾರ ಗೋಷ್ಠಿಯ ಮೂಲಕಲ್ಪನೆ ಅವರದೇ ಆಗಿತ್ತು. ಆಗ ಅವರು ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿದ್ದರು. ಅನಂತರ ಅವರು ಕುಲಪತಿಗಳಾದ ಕಾರಣ ಅವರ ಸ್ಥಾನದಲ್ಲಿ ಬಂದ ಡಾ. ನಾಯಕರು ಆ ಕಲ್ಪನೆಯನ್ನು ಸಾಕಾರಗೊಳಿಸುವ ಕಾರ್ಯವನ್ನು ಪೂರ್ಣಮಾಡಿದರು.

ಕಾಶ್ಮೀರದ ಪ್ರತಿನಿಧಿಗಳಾದ ಪ್ರೊ. ಜಯಾಲಾಲ್ ಕೌಲ್ ಅವರು ಪ್ರತಿನಿಧಿಗಳ ಕಡೆಯಿಂದ ಕನ್ನಡ ಅಧ್ಯಯನ ಸಂಸ್ಥೆ ಹಾಗೂ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಧನ್ಯವಾದಗಳನ್ನು ಸಮರ್ಪಿಸಿದರು, ಹಾಗೂ ಭಾರತೀಯ ಸಾಹಿತ್ಯದ ಮೇಲಿನ ಗಾಂಧೀಜಿಯವರ ಪ್ರಭಾವವು ಬಹಳ ಕಾಲ ನಿಲ್ಲಬಹುದೆಂಬ ಆಶೆಯನ್ನು ವ್ಯಕ್ತಪಡಿಸಿದರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿನ 'ಗಾಂಧಿ ಭವನ' ಎಂಬ ಸಂಸ್ಥೆಯ ನಿರ್ದೇಶಕರಾದ ಡಾ. ತಿಪ್ಪೇರುದ್ರಸ್ವಾಮಿಯವರು ಆಗಮಿಸಿದವರೆಲ್ಲರಿಗೂ ಕೃತಜ್ಞತೆಯನ್ನು ವ್ಯಕ್ತಪಡಿಸಿದರು. ಇಲ್ಲಿಗೆ ಉದ್ಘಾಟನೆಯ ಸಂಭ್ರಮವು ಮುಗಿಯಿತು.

## ಎರಡು ಸ್ಪಷ್ಟ ವಿಚಾರ--ಪ್ರವಾಹಗಳು

ಈ ವಿಚಾರಗೋಷ್ಠಿಯಲ್ಲಿ ಎರಡು ಸ್ಪಷ್ಟ ವಿಚಾರ ಪ್ರವಾಹಗಳು ಕಂಡುಬಂದವು: ತಮ್ಮ ಸಾಹಿತ್ಯದ ಮೇಲೆ ಗಾಂಧೀಜಿ ಮತ್ತು ಗಾಂಧಿ ವಿಚಾರಗಳ ಪ್ರಭಾವ ಬಿದ್ದಿರುವುದು ನಿಶ್ಚಯ ಎಂಬುದನ್ನು ಪ್ರತಿಪಾದಿಸುವ ಭಾಷಣಕಾರರು ಮತ್ತು ಗಾಂಧೀಜಿಯವರ ಪ್ರಭಾವ ಇಲ್ಲವೇ ಇಲ್ಲ ಎಂದು ಹೇಳುವ ಇನ್ನೊಂದು ಗುಂಪಿನ ಭಾಷಣಕಾರರು. ಮುಖ್ಯವಾಗಿ ಯಾವ ಭಾಷೆಗಳ ಇಬ್ಬರು ಪ್ರತಿನಿಧಿಗಳು ಬಂದಿದ್ದರೋ ಅವರಲ್ಲಿ ಈ ದ್ವಂದ್ವ ಹೆಚ್ಚು ಸ್ಪಷ್ಟವಾಗಿ ಕಾಣುತ್ತಿತ್ತು. 'ಭಾರತೀಯ ಸಾಹಿತ್ಯದಲ್ಲಿ ಗಾಂಧೀಜಿ'—ಈ ವಿಷಯದ ಮೇಲೆ ಯಾರು ಪ್ರಬಂಧಗಳನ್ನು ಓದಿದರೋ ಅವರು ಗಾಂಧೀಜಿಯವರ ಬಗ್ಗೆ ತಮ್ಮ ಸಾಹಿತ್ಯದಲ್ಲಿ ಯಾರು ಏನು ಬರೆದಿದ್ದಾರೆ ಎಂಬುದರ ಪರಿಚಯಕೊಟ್ಟು ಆ ಆಧಾರದ ಮೇಲೆ ಆಯಾ ಸಾಹಿತ್ಯದ ಮೇಲೆ ಗಾಂಧೀಜಿಯವರ ಹೆಚ್ಚು ಅಥವಾ ಕಡಿಮೆ ಪ್ರಭಾವ ಬಿದ್ದಿರುವ ವಿಚಾರವನ್ನು ಸಿದ್ಧಪಡಿಸಿದರು. ಉದಾಹರಣೆಗೆ, ನಾನು 'ಮರಾಠಿ

ಸಾಹಿತ್ಯದಲ್ಲಿ ಗಾಂಧೀಜಿ' ಎಂಬ ನನ್ನ ಪ್ರಬಂಧದಲ್ಲಿ ಸಾನೆ ಗುರುಜೀ, ವಿ. ಸ. ಖಾಂಡೇಕರ್, ವಾ. ಮ. ಜೋಷಿ, ಪ್ರೇಮಾ ಕಂಟಕ್, ಮಾಮಾ ವರೇರ್‌ಕರ್, ಬೊರ್‌ಕರ್, ಕುಸುಮಾಗ್ರಜ್, ಮಾಡ್‌ಗೂಳ್‌ಕರ್, ವಿನೋಬಾ, ಕಾಲೇಲ್‌ಕರ್. ಜಾವ್‌ಡೇಕರ್, ಭಾಗವತ್, ಧರ್ಮಾಧಿಕಾರಿ ಇತ್ಯಾದಿ ಲೇಖಕರ ರಚನೆಗಳ ಉಲ್ಲೇಖಮಾಡಿ ಅವರ ಪ್ರಭಾವ ಮರಾಠಿ ಸಾಹಿತ್ಯದ ಮೇಲೆ ಹೆಚ್ಚಾಗಿ ಬಿದ್ದಿರುವುದನ್ನು ಸಿದ್ಧಪಡಿಸುವ ಪ್ರಯತ್ನ ಮಾಡಿದೆ. ಇದಕ್ಕೆ ವಿರುದ್ಧವಾಗಿ ಪ್ರೊ. ವಸಂತ ದಾವತರ್ ಅವರು ಮರಾಠಿ ಸಾಹಿತ್ಯದ ಮೇಲೆ ಗಾಂಧೀಜಿಯ ಪ್ರಭಾವ ಹೆಚ್ಚು ಕಡಿಮೆ ಬಿದ್ದೇ ಇಲ್ಲ ಎಂಬುದನ್ನು ತಮ್ಮ ಪ್ರಬಂಧದಲ್ಲಿ ಹೇಳಿದರು. ಆ ಪ್ರಬಂಧದ ಹಿನ್ನೆಲೆ ಹೀಗಿತ್ತು: 'ನಿಜವಾದ ಲೇಖಕ ಯಾವಾಗಲೂ ವ್ಯಕ್ತಿವಾದಿಯಾಗಿರುತ್ತಾನೆ; ಅವನು ಇತರರ ಪ್ರಭಾವವನ್ನು ಸ್ವೀಕರಿಸುವುದಿಲ್ಲ. ಆದ್ದರಿಂದ ಗಾಂಧೀಜಿಯ ಪ್ರಭಾವ ಸಾಹಿತ್ಯದ ಮೇಲೆ ಬೀಳುವ ಪ್ರಶ್ನೆಯೇ ಏಳುವುದಿಲ್ಲ'.

ಸೃಜನಾತ್ಮಕ ಸಾಹಿತ್ಯದ ಬಗ್ಗೆ ಅವರ ಈ ಅಂಶವು ವಿಚಾರಣೀಯವಾದದ್ದೇ. ಆದರೆ ಚಿಂತನಾತ್ಮಕ ಅಥವಾ ವೈಚಾರಿಕ ರಚನೆಗಳಿಗೆ ಅದು ಹೆಚ್ಚಿನಮಟ್ಟಿಗೆ ಅನ್ವಯಿಸುವುದಿಲ್ಲ. ಅವರ ಈ ವಿಚಾರವನ್ನು ಒಪ್ಪಿದ್ದೇ ಆದರೆ ಸಾಹಿತ್ಯದ ಮೇಲೆ ಯಾವುದೇ ಪ್ರಭಾವ ಬೀಳಲು ಸಾಧ್ಯವಿಲ್ಲ. ಮತ್ತು ಇಂತಹ ವಿಚಾರಗೋಷ್ಠಿಗಳಲ್ಲಿ ಯಾವ ಅರ್ಥವೂ ಉಳಿಯುವುದಿಲ್ಲ.

ಕನ್ನಡ ಸಾಹಿತ್ಯದ ಬಗ್ಗೆ ಪ್ರೊ. ಎಂ. ರಾಮರಾವ್ ಹಾಗೂ ಡಾ. ಯು. ಆರ್. ಅನಂತಮೂರ್ತಿಯವರ ಪ್ರಬಂಧಗಳು ಅತ್ಯಂತ ಉತ್ತಮವಾಗಿದ್ದುವು. ಪ್ರೊ. ರಾಮರಾವ್ ಅವರು ಕನ್ನಡದಲ್ಲಿ ಪ್ರಕಟವಾಗಿರುವ ಗಾಂಧೀ ಸಾಹಿತ್ಯದ ವಿವರಣಾತ್ಮಕ ಪರಿಚಯವನ್ನು ಕೊಟ್ಟರು; ಆದರೆ ಡಾ. ಯು. ಆರ್. ಅನಂತಮೂರ್ತಿಯವರು ಕನ್ನಡ ಸಾಹಿತ್ಯ ಮತ್ತು ಕನ್ನಡ ಸಾಹಿತಿಗಳು ಗಾಂಧಿ ವಿಚಾರಧಾರೆಯ ಪ್ರಭಾವದಿಂದ ಹೇಗೆ ಅಲಿಪ್ತರಾಗಿ ಉಳಿದಿದ್ದಾರೆ ಎಂಬುದನ್ನು ವರ್ಣಿಸಿದರು. ಬೇಂದ್ರೆ, ಮಾಸ್ತಿ ಮುಂತಾದ ಲೇಖಕರ ಮೇಲೆ ಗಾಂಧೀಜಿಯ ಪ್ರಭಾವವಲ್ಲ, ಅರವಿಂದರ ಅಧ್ಯಾತ್ಮ ಹಾಗೂ ಗೂಢವಾದದ ಪ್ರಭಾವವಿದೆ ಎಂಬುದನ್ನು ಅವರು ತೋರಿಸಿಕೊಟ್ಟರು. ಶ್ರೀ ಶಿವರಾಮ ಕಾರಂತರು ಸ್ವತಃ ಗಾಂಧಿವಾದಿಗಳಾಗಿದ್ದರೂ ಅವರೇ ನಿಜವಾದ ಅರ್ಥದಲ್ಲಿ ಗಾಂಧಿ ವಿಚಾರಧಾರೆಗೆ ತಮ್ಮ ಕಾದಂಬರಿಗಳಲ್ಲಿ ಸ್ಥಾನ ಕೊಟ್ಟಿರುವರೆಂದು ಅವರು ತಿಳಿಸಿದರು. ಮಾರ್ಕ್ಸ್‌ವಾದಿ ಲೇಖಕರು ಹೇಗೆ ಜೀವಂತ ಕಾದಂಬರಿಗಳ ನಿರ್ಮಾಣ ಮಾಡಿದರೋ, ಹಾಗೆ ಗಾಂಧಿವಾದಿ ಲೇಖಕರು ಮಾಡಲಿಲ್ಲ ಎಂದು ಅವರು ಕಳಕಳಿಯನ್ನು ವ್ಯಕ್ತಪಡಿಸಿದರು. ಗಾಂಧೀಜಿಯವರ ವ್ಯಕ್ತಿತ್ವ ಹಾಗೂ ಕಾರ್ಯ ಇಷ್ಟು ದೊಡ್ಡದಾದರೂ, ಕನ್ನಡ ಸಾಹಿತ್ಯದ ಮೇಲೆ ಅವುಗಳು ತಮ್ಮ ಮುದ್ರೆಯನ್ನೇಕೆ ಒತ್ತಲಾಗಲಿಲ್ಲ ಎಂಬುದು ಒಂದು ಸಮಸ್ಯೆಯಾಗಿದೆ ಎಂಬುದನ್ನು ಅವರು ಒಪ್ಪಿಕೊಂಡರು. ಡಾ. ಅನಂತಮೂರ್ತಿ

ಯವರ ಪ್ರಬಂಧವು ಭಾಷೆ, ವಿವರಣೆ ಹಾಗೂ ಅಭಿವ್ಯಕ್ತಿಯ ಶೈಲಿ—ಈ ಎಲ್ಲ ದೃಷ್ಟಿಗಳಿಂದಲೂ ಉತ್ತಮ ಮಟ್ಟದ್ದಾಗಿತ್ತು.

**ಇತರ ಭಾಷೆಗಳಲ್ಲಿನ ದ್ವಂದ್ವ**

ಹಿಂದಿ (ಡಾ. ಪ್ರಭಾಕರ ಮಾಚವೆ ಮತ್ತು ಡಾ. ನಗೇಂದ್ರ) ಮತ್ತು ತೆಲುಗು (ಡಾ. ಆಡಾಪ್ಪ ರಾಮಕೃಷ್ಣರಾವ್ ಮತ್ತು ಶ್ರೀ ವಿ. ಆರ್. ನಾರ್ಲಾ) ಈ ಎರಡು ಭಾಷೆಗಳ ಬಗ್ಗೆ ಹೀಗೆ ದ್ವಂದ್ವ ಇದ್ದುದು ಕಂಡುಬಂದಿತು. ಆಶ್ಚರ್ಯದ ನಿಜವಾದ ಆಘಾತವಾದದ್ದು ಗುಜರಾತಿಯನ್ನು ಕುರಿತ ಪ್ರಬಂಧಕಾರರಿಂದ. ಗಾಂಧೀಜಿ ಸ್ವತಃ ಗುಜರಾತಿಯಾಗಿದ್ದ ಕಾರಣ ಗುಜರಾತಿ ಸಾಹಿತ್ಯದ ಮೇಲೆ ಅವರ ಪೂರ್ಣ ಪ್ರಭಾವ ಬಿದ್ದಿರಬೇಕಾದದ್ದೆ ಎಂದು ಎಲ್ಲರೂ ತಿಳಿದಿದ್ದರು. ಪ್ರೊ. ಎಸ್. ಆರ್. ಭಟ್ ಇವರು ತಮ್ಮ ಪ್ರಬಂಧದಲ್ಲಿ ಹೆಚ್ಚುಕಡಿಮೆ ಈ ರೀತಿ ಸೂಚಿಸಿಯೂ ಇದ್ದರು. ಆದರೆ ಪ್ರೊ. ಪ್ರಫುಲ್ಲ ದಾವೆ ಅವರು ಪ್ರೊ. ಭಟ್ ಅವರು ಬಾರದಿದ್ದ ಕಾರಣ ಅವರ ಪ್ರಬಂಧವನ್ನು ಓದುವ ಮೊದಲು ಈ ರೀತಿ ಸ್ಪಷ್ಟವಾಗಿ ಹೇಳಿದರು—'ಗಾಂಧೀಜಿಯವರ ಪ್ರಭಾವ ಗುಜರಾತಿ ಸಾಹಿತ್ಯದ ಮೇಲೆ ಆಗಿಂದಾಗ್ಗೆ ಹತ್ತು ವರ್ಷಗಳ ಕಾಲ (೧೯೩೦–೪೦) ಇತ್ತು; ಅನಂತರ ಗುಜರಾತಿ ಸಾಹಿತ್ಯಕಾರರು ಗಾಂಧೀಜಿ ಮತ್ತು ಗಾಂಧಿ ವಿಚಾರಗಳು—ಇವುಗಳನ್ನು ಗಮನಿಸುವುದನ್ನೇ ಬಿಟ್ಟು ಬಿಟ್ಟರು. ಈ ದಿನ ಗುಜರಾತಿ ಸಾಹಿತ್ಯದಲ್ಲಿ ಗಾಂಧೀಜಿಯವರ ಚಿಹ್ನೆಯೇ ಉಳಿದಿಲ್ಲ. ಇಷ್ಟೇ ಅಲ್ಲ, ಗಾಂಧಿ ವಾದದ ಪ್ರತಿಕ್ರಿಯೆಯೇ ಅಲ್ಲಿ ಕಂಡುಬರುತ್ತದೆ. ಸರಳ, ಸಾಮಾನ್ಯ ಭಾಷೆಗೆ ಬದಲಾಗಿ ಕಠಿಣ, ಆಡಂಬರ ಪೂರ್ಣ ಭಾಷೆಯನ್ನು ಬಳಸಲಾಗುತ್ತಿದೆ. ಪವಿತ್ರವಾದ, ಮಡಿಯಾದ ವಿಚಾರಗಳ ಸ್ಥಾನವನ್ನು ಲೈಂಗಿಕ ಮತ್ತು ವಿಷಯಲಂಪಟ ವಿಚಾರಗಳು ಪಡೆದಿವೆ.' ಅವರ ಈ ವಿವೇಚನೆ ಶ್ರೋತೃಗಳಿಗೆ ನಿಜವಾಗಿಯೂ ಹೊಸದೆನ್ನಿಸಿತು. ಗಾಂಧೀಜಿಯವರ ಪ್ರಭಾವ ಗುಜರಾತಿಯ ಮೇಲೆ ಬೀಳದಿರುವುದಕ್ಕೆ ಒಂದು ಕಾರಣವನ್ನೂ ಪ್ರೊ. ದಾವೆ ಅವರು ತಿಳಿಸಿದರು. ಅದು ಬಹಳ ತಮಾಷೆಯಾಗಿತ್ತು. ಅವರ ಅಭಿಪ್ರಾಯ ದಲ್ಲಿ ಗಾಂಧೀಜಿಯವರು ತಮ್ಮ ಸಮಕಾಲೀನರ ಸಾಹಿತ್ಯವನ್ನು ಓದಿರಲಿಲ್ಲ; ಆ ಸಾಹಿತ್ಯದ ಪರಿಚಯ ಅವರಿಗಿರಲಿಲ್ಲ. ಆದ್ದರಿಂದ ಅವರ ಶಬ್ದಸಂಪತ್ತು ಸೀಮಿತ ವಾಗಿತ್ತು. ಮತ್ತು ಆದರ ಪ್ರಭಾವ ಗುಜರಾತಿ ಸಾಹಿತ್ಯದ ಮೇಲೆ ಏನೂ ಆಗಲಿಲ್ಲ.

ಹೆಚ್ಚು ಕಡಿಮೆ ಇಂತಹುದೇ ವಿಚಾರವನ್ನು ಡಾ. ನಗೇಂದ್ರ (ಹಿಂದಿ), ಮತ್ತು ಶ್ರೀ ನಾರ್ಲಾ (ತೆಲುಗು) ಅವರುಗಳೂ ಸಹ ವ್ಯಕ್ತಪಡಿಸಿದರು. ಈ ದೃಷ್ಟಿ ಯಿಂದ ಡಾ. ಅನಂತಮೂರ್ತಿ, ಪ್ರೊ. ದಾವತರ್, ಪ್ರೊ. ದಾವೆ, ಡಾ. ನಗೇಂದ್ರ ಮತ್ತು ಶ್ರೀ ನಾರ್ಲಾ ಇವರುಗಳು ಬಹಳಮಟ್ಟಿಗೆ ಏಕಾಭಿಪ್ರಾಯವುಳ್ಳವರಾಗಿ

ದ್ದರು ಎಂದು ಹೇಳಬಹುದು. ಇವರಲ್ಲಿ ಕೆಲವರು ಗಾಂಧಿ ವಿರೋಧಿಗಳಾಗಿರುವ ಸಂಭವವಿದೆ. ಆದರೆ ಕೆಲವರಿಗೆ ಗಾಂಧಿ ವಿಚಾರಗಳ ಪರಿಚಯವೇ ಇಲ್ಲವೆಂದು ಅನ್ನಿಸಿತು. ಆದಕಾರಣ ಅವರ ಪ್ರತಿಪಾದನೆಯಲ್ಲಿ ಸತ್ಯವಿದ್ದರೂ ಅದು ಸಮತೂಕವನ್ನು ಪಡೆದಿತ್ತು ಎಂದು ಹೇಳಲು ಬರುವುದಿಲ್ಲ. ಆದರೆ ಡಾ. ಅನಂತ ಮೂರ್ತಿಯವರು ಇದಕ್ಕೆ ಅಪವಾದವಾಗಿದ್ದರು.

**ತಂತಿಯ ಮೇಲಿನ ಕಸರತ್ತು**

ಕಾಶ್ಮೀರಿ, ಉರ್ದು ಮತ್ತು ಸಂಸ್ಕೃತ—ಈ ಭಾಷೆಗಳ ಸಾಹಿತ್ಯದಲ್ಲಿ ಗಾಂಧೀಜಿಯವರ ವಿಚಾರಗಳ ಚಿತ್ರಣವು ಆ ಮಟ್ಟದಲ್ಲಿ ಬಹಳ ಕಡಿಮೆ ಆಗಿರುವುದು ಸಹಜವಾಗಿದೆ. ಆದರೆ ಈ ಮೂರು ಸಾಹಿತ್ಯಗಳ ಪ್ರತಿನಿಧಿಗಳಾಗಿದ್ದ ಪ್ರೊ· ಜಯಾಲಾಲ್ ಕೌಲ್, ಶ್ರೀ ಸಜ್ಜಾದ್ ಜಹೀರ್ ಮತ್ತು ಡಾ. ವಿ. ರಾಘವನ್ ಇವರುಗಳು ಗಾಂಧೀಜಿಯ ಪ್ರಭಾವ ತಮ್ಮ ತಮ್ಮ ಸಾಹಿತ್ಯಗಳ ಮೇಲೆ ಇರುವುದಾಗಿ ಪ್ರತಿಪಾದಿಸಲು ನಿಶ್ಚಯಮಾಡಿದ್ದರೆಂದು ತೋರಿತು. ಅದಕ್ಕಾಗಿ ಅವರುಗಳು ತಂತಿಯ ಮೇಲೆ ಕಸರತ್ತು ಮಾಡಬೇಕಾಯಿತು. ಅಂದರೆ ಡಾ. ರಾಘವನ್ ಅವರು 'ಭಾರತ ಪಾರಿಜಾತ' 'ಪಾರಿಜಾತ ಸೌರಭಃ' (ಸ್ವಾಮಿ ಭಗದಾಚಾರ್ಯ)'ಸತ್ಯಾಗ್ರಹ ಗೀತಾ' ಮತ್ತು 'ಉತ್ತರ ಸತ್ಯಾಗ್ರಹ ಗೀತಾ' (ಶ್ರೀಮತಿ ಕ್ಷಮಾರಾವ್) 'ಗಾಂಧಿ ಗೀತಾ' (ತಾಡಪತ್ರೀಕರ) 'ಗಾಂಧಿ ಚರಿತ' (ಸಾಧುಶರಣ ಶರ್ಮಾ) ಇತ್ಯಾದಿ ಅನೇಕ ಗ್ರಂಥಗಳ ಹೆಸರುಗಳನ್ನಾದರೂ ಕೊಡುತ್ತಾ ಬಂದರು. ಆದರೆ ಪ್ರೊ. ಜಯಾಲಾಲ್ ಕೌಲ್ ಮತ್ತು ಸಜ್ಜಾದ್ ಜಹೀರ್ ಅವರು ಮುಖ್ಯವಾಗಿ ಕವಿತೆಗಳ ಉಲ್ಲೇಖವನ್ನೇ ಮಾಡುತ್ತಾಹೋದರು. ವಾಸ್ತವವಾಗಿ ಭಾರತದಲ್ಲಿನ ಪ್ರತಿಯೊಂದು ಭಾಷೆಯಲ್ಲೂ ಆಯಾಯಾ ಭಾಷೆಯ ಬಹುತೇಕ ಎಲ್ಲ ದೊಡ್ಡ ಕವಿಗಳೂ ಗಾಂಧೀಜಿಯವರ ಮೇಲೆ (ವಿಶೇಷವಾಗಿ ಅವರ ಬಲಿದಾನದ ಮೇಲೆ) ಕವಿತೆಯನ್ನು ಬರೆದಿದ್ದಾರೆ. ಅದನ್ನು ಗಾಂಧೀಜಿಯವರ ಪ್ರಭಾವ ಎನ್ನಬೇಕೆ ಅಥವಾ ಹೇಗೆ ಎಂಬುದರ ಬಗ್ಗೆ ಮತಭೇದವಿತ್ತು. ಆದರೂ ಸಹ ಅದರ ಆಧಾರವನ್ನೇ ಪ್ರಮುಖವಾಗಿ ತೆಗೆದುಕೊಳ್ಳಲಾಗಿತ್ತು. ಮಧುರೆ ವಿಶ್ವವಿದ್ಯಾನಿಲಯದ ಉಪಕುಲಪತಿ ಡಾ. ಮೀನಾಕ್ಷಿಸುಂದರಂ ಅವರು ತಮ್ಮ ಪ್ರಬಂಧದಲ್ಲಿ ಗಾಂಧೀಜಿಯವರಿಂದ ತಮಿಳು ಭಾಷೆಗೆ ಲೋಕಪ್ರಿಯ ಸ್ಥಾನ ಪ್ರಾಪ್ತವಾಯಿತು ಎಂಬುದನ್ನು ಹೇಳುವುದರಲ್ಲೇ ಸಮಯ ಕಳೆದರು. ಅದಕ್ಕಾಗಿ ವೃತ್ತಪತ್ರಿಕೆಗಳು, ವಾರ ಪತ್ರಿಕೆಗಳು, ಮಾಸ ಪತ್ರಿಕೆಗಳು—ಇವುಗಳ ವರ್ಣನೆಯನ್ನೇ ಅವರು ಹೆಚ್ಚಾಗಿ ಮಾಡಿದರು. ಪ್ರೊ. ಗುಪ್ತನ್ ನಾಯರ್ (ಮಲಯಾಳಂ), ಡಾ. ಮಹೇಶ್ವರ ನಿಯೋಗ (ಅಸಮಿಯಾ), ಡಾ. ದೇವಿಪ್ರಸನ್ನ ಪಟ್‌ನಾಯಕ್ (ಉಡೀಸಾ), ಡಾ. ಎಂ. ಕೆ. ನಾಯಕ್ (ಇಂಗ್ಲಿಷ್)—ಇವರುಗಳ ಪ್ರಬಂಧಗಳು ವಿವರಣೆಯ ದೃಷ್ಟಿಯಿಂದ ಸುಂದರವಾಗಿದ್ದವು. ಆಗ್ರಾದ ಡಾ. ಬ್ರಿಜರಾಜ್

ಚೌಹಾನ್ ಹಾಗೂ ಕೊಲ್ಹಾಪುರದ ಡಾ. ವಿಲಾಸ್ ಸಾಂಗ್‌ವೇ—ಈ ಸಮಾಜ ಶಾಸ್ತ್ರಜ್ಞರು ವಿಶೇಷ ಆಹ್ವಾನದ ಮೇಲೆ ವಿಚಾರಗೋಷ್ಠಿಯಲ್ಲಿ ಭಾಗವಹಿಸಿದ್ದರು. ಅವರು ವಿಚಾರಗೋಷ್ಠಿಗೆ ಪುಷ್ಟರೂಪವನ್ನು ಕೊಡುವುದರಲ್ಲಿ ಸಹಾಯಕರಾದರು.

ಸಾರಾಂಶವೇನೆಂದರೆ, ಈ ವಿಚಾರಗೋಷ್ಠಿಯು ಭಾರತೀಯ ಸಾಹಿತ್ಯದ ಮೇಲೆ ಗಾಂಧೀಜಿಯವರ ಪ್ರಭಾವವನ್ನು ಕಂಡುಕೊಳ್ಳುವ ಒಂದು ಸುಂದರವಾದ ಪ್ರಯತ್ನವಾಗಿತ್ತು ಎಂದು ನಿಸ್ಸಂಶಯವಾಗಿ ಹೇಳಬಹುದು. ಶಾಸ್ತ್ರೀಯವಾಗಿ ಇದನ್ನು ಕಂಡುಕೊಳ್ಳಬೇಕೆಂದು ಆ ಗೋಷ್ಠಿಯಲ್ಲಿ ತಿಳಿದುಕೊಳ್ಳಲಾಯಿತು. ಇದು ಗೋಷ್ಠಿಯಿಂದ ಉಂಟಾದ ಮತ್ತೊಂದು ಲಾಭ.

ಮೂಲ: ಶ್ರೀಪಾದ ಜೋಷಿ
('ಕೇಸರಿ' ಮರಾಠಿ ಪತ್ರಿಕೆ)

ಕನ್ನಡ ಅನುವಾದ: ಕುಸುಮ ಗೀತಾ



ಮೈಸೂರಿನಲ್ಲಿ ಡಾ. ಹಿರೇಮಠ ಸನ್ಮಾನ: ಡಾ. ಹಾ. ಮಾ. ನಾಯಕರ ಸ್ವಾಗತ



ಕುಲಪತಿ ಪ್ರೊ. ದೇಜಗೌ ಅವರಿಂದ ಶಾಲು ಸಮರ್ಪಣೆ

# ಸಂಪಾದಕೀಯ

## ಸಾಹಿತ್ಯ ಅಕಾಡೆಮಿ ಬಹುಮಾನ

ಡಾ. ಎಚ್. ತಿಪ್ಪೇರುದ್ರಸ್ವಾಮಿಯವರ 'ಕರ್ಣಾಟಕ ಸಂಸ್ಕೃತಿ ಸಮೀಕ್ಷೆ'ಗೆ ೧೯೬೯ರ ಸಾಲಿನ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿರುವುದು ಕನ್ನಡಿಗ ರೆಲ್ಲರಿಗೆ ಹೆಮ್ಮೆಯ ಸಂಗತಿಯಾಗಿದೆ. ಈ ಪ್ರಶಸ್ತಿಯನ್ನು ನೀಡುವುದರ ಮೂಲಕ ಸಾಹಿತ್ಯ ಅಕಾಡೆಮಿ ಕೇವಲ ಒಂದು ಗ್ರಂಥವನ್ನಲ್ಲ, ಕರ್ಣಾಟಕ ಸಂಸ್ಕೃತಿಯನ್ನೆ ಗೌರವಿಸಿದೆ ಎನ್ನುವುದು ನಮ್ಮ ಹೆಮ್ಮೆಯನ್ನು ಮತ್ತೂ ಹೆಚ್ಚಿಸುವ ಒಂದು ವಿಶೇಷಾಂಶ.

'ಕರ್ಣಾಟಕ ಸಂಸ್ಕೃತಿ ಸಮೀಕ್ಷೆ' ತನ್ನ ಹೆಸರೇ ಸೂಚಿಸುವಂತೆ ಕರ್ಣಾಟಕ ಸಂಸ್ಕೃತಿಯ ಎಲ್ಲ ಮುಖಗಳನ್ನೂ ಸ್ಥೂಲವಾಗಿಯಾದರೂ ಸಮಗ್ರವಾಗಿ ವಿವೇಚಿಸುವ ಬೃಹದ್ಗ್ರಂಥ. ಡಾ. ತಿಪ್ಪೇರುದ್ರಸ್ವಾಮಿಯವರ ಹಲವಾರು ವರ್ಷಗಳ ಸಾರಸ್ವತ ತಪಸ್ಸಿನ ಪಕ್ವಫಲವಾಗಿ ಮೂಡಿದ ಈ ಕೃತಿ ರಾಷ್ಟ್ರೀಯ ಪ್ರಶಸ್ತಿಗೆ ಅರ್ಹವಾದುದು ಸಹಜವೇ.

ಡಾ. ಸ್ವಾಮಿಯವರದು ಬಹುಮುಖ ಪ್ರತಿಭೆ; ವೈವಿಧ್ಯಪೂರ್ಣವೂ ಸಮೃದ್ಧವೂ ಆದ ವಾಙ್ಮಯ ವ್ಯವಸಾಯ. 'ತಪೋರಂಗ', 'ಪರಿಪೂರ್ಣದೆಡೆಗೆ', 'ಕದಳಿಯ ಕರ್ಪುರ', 'ವಿಜಯಕಲ್ಯಾಣ' ಮುಂತಾದ ಕೃತಿಗಳು ಅವರ ಸೃಜನ ಶಕ್ತಿಗೆ ಸಾಕ್ಷಿಯಾಗಿದ್ದರೆ, 'ಶರಣರ ಅನುಭಾವಸಾಹಿತ್ಯ', 'ವಚನಗಳಲ್ಲಿ ವೀರಶೈವ ಧರ್ಮ' ಮುಂತಾದುವು ಅವರ ಸಂಶೋಧನ ಸಾಮರ್ಥ್ಯಕ್ಕೆ, ವಿದ್ವತ್ತಿಗೆ ನಿದರ್ಶನವಾಗಿವೆ. 'ಕರ್ಣಾಟಕ ಸಂಸ್ಕೃತಿ ಸಮೀಕ್ಷೆ'ಗಾಗಿ ಮಾತ್ರವಲ್ಲದೆ ತಮ್ಮ ಒಟ್ಟು ಸಾಹಿತ್ಯದ ದೃಷ್ಟಿಯಿಂದಲೂ ಡಾ. ತಿಪ್ಪೇರುದ್ರಸ್ವಾಮಿಯವರು ಸಾಹಿತ್ಯ ಅಕಾಡೆಮಿಯ ಬಹುಮಾನಕ್ಕೆ ಯೋಗ್ಯರಾಗಿದ್ದಾರೆ. ಶ್ರೀಯುತರನ್ನು ಎಲ್ಲ ಕನ್ನಡಿಗರ ಪರವಾಗಿ ಅಭಿನಂದಿಸಿ, ಇಂಥ ಮಹತ್ವದ ಕೃತಿಗಳು ಇನ್ನೂ ಹಲವಾರು ಅವರಿಂದ ರಚಿತವಾಗಲೆಂದು ಹಾರೈಸುತ್ತೇವೆ.

'ಕರ್ಣಾಟಕ ಸಂಸ್ಕೃತಿ ಸಮೀಕ್ಷೆ'ಯನ್ನು ಅಕಾಡೆಮಿ ಉಳಿದೆಲ್ಲ ಭಾರತೀಯ ಭಾಷೆಗಳಿಗೆ ಅನುವಾದಗೊಳಿಸಿ, ನಮ್ಮ ಶ್ರೀಮಂತ ಪರಂಪರೆಯ ಅರಿವು ಇತರರಿಗೆ ಉಂಟಾಗುವಂತೆ ಮಾಡಲೆಂದೂ ಈ ಸಂದರ್ಭದಲ್ಲಿ ಆಶಿಸಬಹುದು.

## ಡಾ. ಆರ್. ಸಿ. ಹಿರೇಮಠ : ಐವತ್ತು

ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಶಾಖೆಯ ಪ್ರಾಧ್ಯಾಪಕಮುಖ್ಯರಾಗಿರುವ

ಡಾ. ಆರ್. ಸಿ. ಹಿರೇಮಠ ಅವರಿಗೆ ಈ ವರ್ಷದ ಆರಂಭದ ದಿನಗಳಲ್ಲಿ ಐವತ್ತು ತುಂಬಿತು. ಅವರ ಅಭಿಮಾನಿಗಳೂ ಶಿಷ್ಯರೂ, ಶ್ರೀಯುತರು ಕನ್ನಡ ಭಾಷೆ ಸಾಹಿತ್ಯಗಳ ಮುನ್ನಡೆಗಾಗಿ ಹಲವು ವರ್ಷಗಳಿಂದ ಹೃತ್ಪೂರ್ವಕವಾಗಿಯೂ ಸಮರ್ಥರೀತಿಯಿಂದಲೂ ಶ್ರಮಿಸಿರುವುದನ್ನು ನೆನೆದು ಅವರ ಐವತ್ತನೆಯ ಹುಟ್ಟು ಹಬ್ಬದ ಒಸಗೆಯನ್ನು ಧಾರವಾಡ, ಮೈಸೂರು ಮೊದಲಾದ ಕಡೆಗಳಲ್ಲಿ ವಿಜೃಂಭಣೆ ಯಿಂದ ಆಚರಿಸಿದರು. ಕನ್ನಡವನ್ನು ತಮ್ಮ ಜೀವನದ ಉಸಿರನ್ನಾಗಿ ತಿಳಿದು, ಬಾಳಿನ ಗುರಿಯನ್ನಾಗಿ ಹಿಡಿದು, ದಣಿವರಿಯದೆ ದುಡಿಯುತ್ತ ಬಂದಿರುವ ಈ ಮಹನೀಯರ ವಿಚಾರದಲ್ಲಿ ಕನ್ನಡ ಜನದ ಕೃತಜ್ಞತೆ ಅಭಿಮಾನಗಳ ಸಂಕೇತ ವಾಗಿ ಆ ಉತ್ಸವಗಳು ಜರುಗಿದವು. ಕವಿಪೂಜೆ, ವಿದ್ವಜ್ಜನ ಸತ್ಕಾರಗಳು ನಮ್ಮ ದೇಶದ ಸಂಸ್ಕೃತಿಯಲ್ಲಿ ಬಹುಕಾಲದಿಂದ ನಡೆದುಕೊಂಡು ಬಂದಿರುವ ಸಂಪ್ರದಾಯ ವಾದ್ದರಿಂದ, ಪ್ರಸ್ತುತ ಡಾ. ಆರ್. ಸಿ. ಹಿರೇಮಠರ ಸನ್ಮಾನ ಸಮಾರಂಭಗಳು ಸೂಕ್ತವೂ ಸಕಾಲಿಕವೂ ಆದವಾಗಿವೆ ಎನ್ನಬಹುದು.

ಡಾ. ಆರ್. ಸಿ. ಹಿರೇಮಠರ ಸಾಹಿತ್ಯಿಕ ವ್ಯವಸಾಯ ದೀರ್ಘಕಾಲಿಕ ವಾದುದು, ಬಹುಮುಖವಾದುದು. ಬಹುಕಾಲದ ವ್ಯಾಸಂಗ, ಚಿಂತನೆ ಮತ್ತು ಸಂಶೋಧನೆಗಳ ಫಲವಾಗಿ ಅದು ಉತ್ತಮ ಫಲಗಳನ್ನು ಕೊಟ್ಟಿದೆ. ಕಾವ್ಯ, ನಾಟಕ, ವಿಮರ್ಶೆ, ಗ್ರಂಥಸಂಪಾದನೆ, ಸಂಶೋಧನೆ, ಅನುವಾದ—ಹೀಗೆ ವಿವಿಧ ರಂಗಗಳಲ್ಲಿ ಅವರ ಕೃತಿರಚನೆ ನಡೆದಿದೆ. ಭಾಷಾವಿಜ್ಞಾನ, ಗ್ರಂಥಸಂಪಾದನೆ ಗಳಂತಹ ಶಾಸ್ತ್ರವಿಷಯಗಳಲ್ಲಿ ಅವರು ತಮ್ಮ ವಿಶೇಷವಾದ ಆಸಕ್ತಿಯನ್ನೂ ಪರಿಣತಿಯನ್ನೂ ತೋರಿಸಿರುವಂತೆಯೇ ಕಾವ್ಯನಾಟಕಗಳಂತಹ ಸೃಜನಾತ್ಮಕ ಸಾಹಿತ್ಯದಲ್ಲಿಯೂ ತಮಗಿರುವ ಆದರವನ್ನು ತೋರಿಸಿದ್ದಾರೆ. ಇಂಗ್ಲಿಷಿನಲ್ಲಿಯೂ ಕೃತಿರಚನೆ ಮಾಡುವುದರ ಮೂಲಕವಾಗಿ ಕನ್ನಡದ ಹಿರಿಮೆಯನ್ನು ಕನ್ನಡೇತರ ವಾದ ವಿದ್ವದ್ವಲಯಕ್ಕೆ ಕೂಡ ಪರಿಚಯಿಸಿದ್ದಾರೆ. ಹೀಗೆ ಅವರಿಂದ ಕನ್ನಡ ನಾಡು ನುಡಿಗಳಿಗೆ ಸಂದಿರುವ ಕಾಣಿಕೆ ಮಹತ್ತ್ವದ್ದಾಗಿದೆ.

ತಮ್ಮ ವಿದ್ವತ್ತು, ಸ್ನೇಹಸೌಜನ್ಯಗಳಿಂದ ಸರ್ವರಿಗೂ ಆದರಣೀಯರಾಗಿರುವ ಡಾ. ಆರ್. ಸಿ. ಹಿರೇಮಠ ಅವರನ್ನು ಈ ಸಂದರ್ಭದಲ್ಲಿ 'ಪ್ರಬುದ್ಧ ಕರ್ಣಾಟಕ'ವು ಅವರ ಐವತ್ತು ವರ್ಷಗಳ ಸಾರ್ಥಕ ಜೀವನಕ್ಕಾಗಿ ಅಭಿನಂದಿಸಿ, ಅವರಿಗೆ ಸಕಲ ಸೌಭಾಗ್ಯವನ್ನೂ ಸಂತೋಷದಿಂದ ಹಾರೈಸುತ್ತದೆ. ಇನ್ನು ಮುಂದೆಯೂ ಅವರು ಕನ್ನಡ ಭಾಷೆ ಸಾಹಿತ್ಯಗಳ ಹಾಗೂ ಕನ್ನಡ ನಾಡಿನ ಸರ್ವತೋಮುಖವಾದ ಅಭಿವೃದ್ಧಿಗೆ ಅತಿಶಯವಾಗಿ ಶ್ರಮಿಸಿ, ಕನ್ನಡಿಗರ ಅಕ್ಕರೆ ಆದರಣೆಗಳಿಗೆ ವಿಶೇಷ ವಾಗಿ ಪಾತ್ರರಾಗಲಿ ಎಂಬುದಾಗಿ ಆಶಿಸುತ್ತದೆ.

### ಸುಬೋಧ ರಾಮರಾಯರ ನಿಧನ

ಕನ್ನಡಿಗರಿಗೆ ವಿಪುಲಪರಿಮಾಣದಲ್ಲಿ ಸುಜ್ಞಾನವನ್ನೊದಗಿಸಿದ ಪುಣ್ಯಚೇತನವೊಂದು

ಕಣ್ಮರೆಯಾದಂತಾಯಿತು, ಸುಬೋಧ ರಾಮರಾಯರ ನಿಧನದಿಂದ. 'ಸುಬೋಧ' ಪತ್ರಿಕೆ, ಸುಬೋಧ ಕುಸುಮಾಂಜಲಿ ಗ್ರಂಥಮಾಲೆ, ಹರಿದಾಸ ಕೀರ್ತನತರಂಗಿಣಿ– ಈ ಮೂರು ಮುಖಗಳಲ್ಲಿ ಶ್ರೀಯುತರು ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯವನ್ನೊದಗಿಸಿ ಶ್ರೇಯೋಭಾಗಿಗಳಾದವರು. ಪೌರಾಣಿಕ ಮತ್ತು ಚಾರಿತ್ರಿಕ ಮಹಾಪುರುಷರ ಆದರ್ಶಪೂರ್ಣ ಜೀವನಕಥೆಗಳನ್ನುಳ್ಳ ನೂರ ನಲವತ್ತು ಪುಸ್ತಕಗಳನ್ನು ಅವರು ತಮ್ಮ ಸುಬೋಧ ಕುಸುಮಾಂಜಲಿ ಗ್ರಂಥಮಾಲೆಯಲ್ಲಿ ಪ್ರಕಟಿಸಿ, ಕನ್ನಡ ಜನತೆಗೆ ಸುಬೋಧ ಭಂಡಾರವೊಂದು ಬಹಳ ಕಡಮೆ ಬೆಲೆಯಲ್ಲಿ ದೊರೆಯುವಂತೆ ಮಾಡಿದುದು ಕೃತಜ್ಞತೆಯಿಂದ ನೆನೆಯಬೇಕಾದ ವಿಷಯವಾಗಿದೆ. ಸಾಹಿತ್ಯಕ್ಕಾಗಿ ಸಾಹಿತ್ಯವಲ್ಲ, ಅದು ಬದುಕಿನ ಮೇಲ್ಮೆಗಾಗಿ, ಶೀಲ ನಿರ್ಮಾಣಕ್ಕಾಗಿ ಎಂಬ ನಂಬಿಕೆ ಜೀವಂತವಾಗಿರುವವರೆಗೂ ರಾಮರಾಯರ ನೆನಪು ಅಮರವಾಗಿ ಉಳಿಯುತ್ತದೆ.

ಈ ಮಹನೀಯರ ನಿಧನಕ್ಕಾಗಿ ವಿಷಾದಿಸಿ, ಅವರ ಆತ್ಮಕ್ಕೆ ಚಿರಶಾಂತಿ ಕೋರುತ್ತೇವೆ. ಗೊತ್ತುಗುರಿಯಿಲ್ಲದಂತೆ ತೋರುವ ಇಂದಿನ ದಿನಗಳಲ್ಲಿ ಅಂಥ ದೊಡ್ಡವರ ದಾರಿ ತಾರಕವಾಗಿರಲೆಂದು ಹಾರೈಸಬೇಕಾಗಿದೆ.

**ಹೊಸ ಸಂಪಾದಕರು**

ಇದುವರೆಗೆ, ಸುಮಾರು ಮೂರು ವರ್ಷಗಳ ಕಾಲ, 'ಪ್ರಬುದ್ಧ ಕರ್ಣಾಟಕ'ದ ಸಂಪಾದಕರಲ್ಲಿ ಒಬ್ಬರಾಗಿದ್ದು, ಪತ್ರಿಕೆಯ ಏಳಿಗೆಗಾಗಿ ದುಡಿದ ಡಾ. ಎಚ್. ತಿಪ್ಪೇರುದ್ರಸ್ವಾಮಿಯವರು ಇದೀಗ ಸಂಪಾದಕತ್ವದಿಂದ ನಿವೃತ್ತರಾಗುತ್ತಿದ್ದಾರೆ. ಅವರಿಂದ ಸಂದ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸಿ, ಅವರನ್ನು ಬೀಳ್ಕೊಡುತ್ತೇವೆ.

ನೂತನ ಸಂಪಾದಕರಾಗಿ ನೇಮಕಗೊಂಡಿರುವ ಶ್ರೀ ಟಿ. ವಿ. ವೆಂಕಟಾಚಲ ಶಾಸ್ತ್ರಿಯವರನ್ನು ಸ್ವಾಗತಿಸುವುದು ಸಂತೋಷದ ಕೆಲಸವಾಗಿದೆ. ಶ್ರೀಯುತರು ಹೆಸರಾಂತ ವಿದ್ವಾಂಸರು ಮತ್ತು ಸಂಶೋಧಕರು. 'ಕನ್ನಡ ಛಂದಸ್ಸು' ಹಾಗೂ 'ಮಹಾಕಾವ್ಯಲಕ್ಷಣ' ಅವರ ಪಾಂಡಿತ್ಯಸಿದ್ಧಿಗೂ 'ಬದ್ಧಪ್ರಮಿಶಾತ್ಯೂಸ್' ಅವರ ಭಾಷಾಂತರ ಶಕ್ತಿ ಮತ್ತು ಹಳಗನ್ನಡ ಪ್ರಭುತ್ವಕ್ಕೂ ದ್ಯೋತಕವಾಗಿವೆ. 'ಕನ್ನಡ ದಲ್ಲಿ ನೇಮಿನಾಥಪುರಾಣಗಳು' ಎಂಬ ಮಹಾಪ್ರಬಂಧವನ್ನೂ 'ಶ್ರೀವತ್ಸ ನಿಘಂಟು' ಎಂಬ ಕೋಶವನ್ನೂ ಶಾಸ್ತ್ರಿಯವರು ಸಿದ್ಧಗೊಳಿಸಿದ್ದಾರೆ; ಅವು ಪ್ರಕಟವಾದಂದು ಕನ್ನಡ ವಿದ್ವತ್ತಿನ ಕ್ಷೇತ್ರ ಹಿಗ್ಗುವುದರಲ್ಲಿ ಸಂಶಯವಿಲ್ಲ.

ಶ್ರೀ ವೆಂಕಟಾಚಲಶಾಸ್ತ್ರಿಯವರು ತಮ್ಮ ಸಂಪಾದಕತ್ವದ ಅವಧಿಯಲ್ಲಿ 'ಪ್ರಬುದ್ಧ ಕರ್ಣಾಟಕ'ದ ಪುರೋಭಿವೃದ್ಧಿಗೂ ಯಶಸ್ಸಿಗೂ ಶ್ರಮಿಸಿ ಉಜ್ವಲವಾದ ದಾಖಲೆಗಳನ್ನು ನಿರ್ಮಿಸುವರೆಂಬ ಭರವಸೆ ನಮಗಿದೆ. ಅವರನ್ನು ಹಾರ್ದಿಕವಾಗಿ ಸ್ವಾಗತಿಸುತ್ತೇವೆ.

# ಸಾದರ ಸ್ವೀಕಾರ

ಸಪ್ತಸ್ವರ (ಕತೆಗಳು), ಲೇ: ಕೆ. ಎಂ. ಸೀತಾರಾಮಯ್ಯ; ಪ್ರ: ಸುಜಾತ ಸಾಹಿತ್ಯ, ೧೩೭೪/೧ B, ಒಂದನೆಯ ಕ್ರಾಸ್, ಜಯನಗರ, ಶಿವಮೊಗ್ಗ; ಪುಟ: ೧೬೨; ಬೆಲೆ: ರೂ. ೨–೫೦.

ಚಿತ್ರಾನ್ನ (ಚುಟಕಗಳು), ಕವಿ: ಜಿ. ಎಸ್. ಅನ್ನದಾನಿ; ಪ್ರ: ಮಿತ್ರಭಾರತಿ ಪ್ರಕಾಶನ; ವಿಜಾಪುರ; ಪುಟ: ೫೦; ಬೆಲೆ: ರೂ. ೨–೦೦.

ಹತ್ತು–ಮತ್ತೊಂದು (ವಿದ್ಯಾರ್ಥಿಗಳ ಬರಹಗಳು), ಸಂ: ಎಂ. ಚಂದ್ರಶೇಖರ್; ಪ್ರ: ಕನ್ನಡ ಅಧ್ಯಯನ ಗೋಷ್ಠಿ, ಆಚಾರ್ಯ ಪಾಠಶಾಲಾ ಸಂಜೆ ಕಾಲೇಜು, ಬೆಂಗಳೂರು–೧೯; ಪುಟ: ೪೪; ಬೆಲೆ: ರೂ. ೦–೭೫; ೧೯೭೦.

ಅಜಿತ ಪುರಾಣ ಸಂಗ್ರಹ, ಸಂ: ತ. ಸು. ಶಾಮರಾಯ, ನಂಜೇಗೌಡ; ಪ್ರ: ತ. ವೆಂ. ಸ್ಮಾರಕ ಗ್ರಂಥಮಾಲೆ, ಕೃಷ್ಣಮೂರ್ತಿ ಪುರಂ, ಮೈಸೂರು–೪: ಪುಟ: xxxxi + ೧೦೬; ಬೆಲೆ: ರೂ. ೩–೦೦ (೫–೦೦); ೧೯೬೯.

ಅಂತರಂಗದ ಹಾಡು (ಕವನ ಸಂಕಲನ), ಕವಿ: ಡಿ. ಲಿಂಗಯ್ಯ: ಪ್ರ: ದಿನಕರ ಪ್ರಕಾಶನ, ಪೀಹಳ್ಳಿ, ಕೊಡಿಯಾಲ ಪೋಸ್ಟ್, ಮಂಡ್ಯ ಮಾರ್ಗ; ಪುಟ: ೭೨; ಬೆಲೆ: ರೂ. ೩–೦೦ (೬–೦೦).

ಕನ್ನಡ ವಿಶ್ವಕೋಶ (ಸಂಪುಟ ಒಂದು), ಪ್ರಧಾನ ಸಂಪಾದಕರು: ಪ್ರೊ. ಡಿ. ಜವರೇಗೌಡ; ಪ್ರ: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು; ಪುಟ: xii + ೯೫೫; ಬೆಲೆ: ರೂ. ೪೦–೦೦; ೧೯೬೯.

ಕಥೆ ಮತ್ತು ಕಥಾವಸ್ತು, ಲೇ: ಎಸ್. ಎಲ್. ಭೈರಪ್ಪ; ಪ್ರ: ಸಾಹಿತ್ಯ ಭಂಡಾರ, ಹುಬ್ಬಳ್ಳಿ–೨೦; ಪುಟ: ೧೬೨; ಬೆಲೆ: ರೂ. ೩–೫೦; ೧೯೬೯.

ಮತದಾನ (ಕಾದಂಬರಿ), ಲೇ: ಎಸ್. ಎಲ್. ಭೈರಪ್ಪ; ಪ್ರ: ಸಾಹಿತ್ಯ ಭಂಡಾರ, ಹುಬ್ಬಳ್ಳಿ–೨೦; ಪುಟ: ೨೩೪; ಬೆಲೆ: ರೂ. ೫–೦೦; ದ್ವಿತೀಯ ಮುದ್ರಣ, ೧೯೬೯.

## ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-ಇವರ ಪ್ರಕಟಣೆಗಳು

*Sunyasampadane*, (Vol. III), Ed: S. S. Bhoosnurmath, Prof. Armando Menezes; p. 451; Price: Rs. 20–00; 1969.

ಗಾಂಧೀ ತತ್ವ ವಿಶ್ಲೇಷಣೆ (ಆರು ಉಪನ್ಯಾಸಗಳು), ಪುಟ: ೧೨೭; ಬೆಲೆ: ರೂ. ೧–೫೦; ೧೯೭೦

ಬೀಜಗಣಿತ ಕಲನಶಾಸ್ತ್ರ ಪರಿಚಯ (ಪಠ್ಯಪುಸ್ತಕ), ಲೇ: ಕೆ. ಎಸ್. ಅನೂರ ಮತ್ತಿತರರು, ; ಪುಟ: ೨೭೪: ಬೆಲೆ: ೪-೫೦ ; ೧೯೬೯.

ಜಗತ್ತಿನ ಇತಿಹಾಸ (ಪಠ್ಯಪುಸ್ತಕ), ಲೇ: ಜಿ. ಎಸ್. ದೀಕ್ಷಿತ, ಡಿ. ಟಿ. ಜೋಶಿ; ಧಾರವಾಡ; ಪುಟ: ೩೨೬ ; ಬೆಲೆ: ರೂ. ೪-೫೦; ೧೯೬೯.

ಬ್ಯಾಂಕುಗಳ ರಾಷ್ಟ್ರೀಕರಣ, ಲೇ: ಎಸ್. ಜಿ. ಕರಭಂಟನಾಳ; ಪುಟ: ೬೨; ಬೆಲೆ: ೨೫ ಪೈಸೆ: ೧೯೭೦.

ಮಿರ್ಜಾ ಘಾಲಿಬ್, ಲೇ: ಅಬ್ದುಲ್ ಮಜೀದ್ ಖಾನ್; ಪುಟ: ೭೪; ಬೆಲೆ: ೨೫ ಪೈಸೆ; ೧೯೬೯.

* * *

ಮಾತೃ ಸಂಹಿತೆ (ವಚನಗಳು), ಲೇ: ಗುಂಡ್ಮಿ ಚಂದ್ರಶೇಖರ ಐತಾಳ; ಪ್ರ: ಲೇಖಕರು, ಕನ್ನಡ ಅಧ್ಯಾಪಕರು, ಸ್ನಾತಕೋತ್ತರ ಅಧ್ಯಯನ ಕೇಂದ್ರ, ಮಂಗಳೂರು ; ಪುಟ: ೩೬ ; ಬೆಲೆ: ರೂ. ೩-೦೦ ; ೧೯೭೦.

ಚೇತನ (ಕವನ ಸಂಗ್ರಹ), ಕವಿ: ಕಯ್ಯಾರ ಕಿಞ್ಞಣ್ಣ ರೈ; ಪ್ರ: ಗೀತಾ ಬುಕ್ ಹೌಸ್, ಮೈಸೂರು; ಪುಟ: ೯೨; ಬೆಲೆ: ರೂ: ೫-೦೦ (೯-೦೦) ; ೧೯೭೦.

ಹಸಿರ ಹಾಡು (ಕವನ ಸಂಗ್ರಹ), ಕವಿ: ಆರ್. ಸಿ. ಮುದ್ದೇಬಿಹಾಳ್; ಪ್ರ: ಮಿತ್ರ ಭಾರತಿ ಪ್ರಕಾಶನ. ವಿಜಾಪುರ; ಪುಟ: ೫೬ ; ಬೆಲೆ: ರೂ. ೧-೨೫ ; ೧೯೬೯.

ವಾರ್ತಾ ಸಂಸ್ಥೆಗಳು, ಲೇ: ಧ್ರುವರಾಜ ಮುತಾಲಿಕ ದೇಸಾಯಿ; ಪ್ರ: ಲೇಖಕರು, ಶಿಖರೆ ಕಂಪೌಂಡ, ದೇಶಪಾಂಡೆ ನಗರ, ಹುಬ್ಬಳ್ಳಿ-೨೦ ; ಪುಟ: ೫೮ ; ಬೆಲೆ: ರೂ. ೧-೫೦; ೧೯೬೯.

## ಗೀತಾ ಪ್ರಕಾಶನ, ಕಾಸರಗೋಡು-ಇವರ ಪ್ರಕಟಣೆಗಳು

ಭಾರತ ಕಥಾಮೃತ (ನೀತಿ ಕಥೆಗಳು), ಲೇ: ಸಿರಿಬಾಗಿಲು ವೆಂಕಪ್ಪಯ್ಯ; ಪ್ರ: ೮೪; ಬೆಲೆ: ರೂ. ೧-೨೫.

ಸಿದ್ಧಾರ್ಥ (ಚಾರಿತ್ರಿಕ ಸಂಗೀತ ನಾಟಕ), ಲೇ: ಗೋಪಾಲಕೃಷ್ಣ ಭಟ್ಟ; ಪುಟ: ೪೦; ಬೆಲೆ: ರೂ. ೧-೦೦.

ಪಾನ-ಪೂಜೆ (ಉಮರನ ಅನುವಾದ), ಲೇ: ಎಂ. ರಾಧಾಕೃಷ್ಣರಾವ್ ;; ಪುಟ: ೩೮; ಬೆಲೆ: ರೂ. ೨-೨೫.

* * *

ಬಸವಾದಿ ಗಣಚರಿತ್ರೆ ಮತ್ತು ಗಣವಚನ ಮಂಜರಿ, ಲೇ: ಡಾ. ಎಸ್. ಎಂ. ಹುಣಶ್ಯಾಳ; ಪ್ರ: ವಿಜಯ ಪ್ರಕಾಶನ, ರಾಯಚೂರು ; ಪುಟ: ೧೩೬+೧೬೦ ; ಬೆಲೆ: ರೂ. ೩-೦೦; ೧೯೬೮.

ಸೂಕ್ತಿ ಮಂಜರಿ (ಕಂದ ಪದ್ಯಗಳು), ಲೇ: ಕ. ಪು. ಸೀತಾರಾಮ ಕೆದಿಲಾಯ; ಪ್ರ: ಲೇಖಕರೇ, ಶಿಶಿಲ, ಬೆಳ್ತಂಗಡಿ ತಾಲೂಕು, ದ.ಕ.; ಪುಟ: ೨೨; ಬೆಲೆ: ರೂ. ೦–೫೦.

ವಿ.ಸೀ. (ಪ್ರಚಾರ ಪುಸ್ತಿಕೆ), ಲೇ: ಕೆ. ಎಸ್. ನರಸಿಂಹಸ್ವಾಮಿ; ಪ್ರ: ಮಹಾತ್ಮ ಗಾಂಧಿ ಮೆಮೋರಿಯಲ್ ಕಾಲೇಜು, ಉಡುಪಿ; ಪುಟ: ೩೮; ಬೆಲೆ: ರೂ. ೦–೫೦; ೧೯೭೦.

ಜಾಣ ಮುದ್ದಣ (ಸ್ಮಾರಕ ಪುಸ್ತಿಕೆ), ಪ್ರ: ಮಹಾತ್ಮ ಗಾಂಧಿ ಮೆಮೋರಿಯಲ್ ಕಾಲೇಜು, ಉಡುಪಿ–೨; ಪುಟ: ೬೩; ಬೆಲೆ: ೦–೫೦; ೧೯೭೦.

ಹುಲಿಯ ಹಾಲಿನ ಮೇವು (ಕಾದಂಬರಿ), ಲೇ: ಭಾರತೀಸುತ; ಪ್ರ: ಕಾವೇರಿ ಪ್ರಕಾಶನ, ಮಡಕೇರಿ–ಕೊಡಗು; ಪುಟ: ४೨೦; ಬೆಲೆ: ರೂ. ೬–೦೦; ೧೯೭೦.

ಕಂಡದ್ದನಾಡಿದರೆ (ಕವನ ಸಂಗ್ರಹ), ಕವಿ: ಈ. ವ್ಹಿ. ಬಿಳೇಕಲ್ಲ; ಪ್ರ: ಶಶಿರಾಜ ಪ್ರಕಾಶನ, ವಿದ್ಯಾನಗರ, ಹುಬ್ಬಳ್ಳಿ–೨೧; ಪುಟ: ೭೦; ಬೆಲೆ: ರೂ. ೨–೦೦; ೧೯೭೦.

ವಾಣೀ (ರನ್ನ ಮಹೋತ್ಸವ ಸ್ಮರಣ ಸಂಚಿಕೆ), ಪ್ರ: ನಾಡಹಬ್ಬ ಉತ್ಸವ ಸಮಿತಿ, ವಾಣೀ ಮಂದಿರ; ಜೋಡುಮಾರ್ಗ, ದ.ಕ.; ಪುಟ: ೯೬; ಬೆಲೆ: ರೂ. ೧–೫೦; ೧೯೬೯.

ಕನ್ನಡ ರತ್ನಾವಳಿ (ನಾಟಿಕಾನುವಾದ), ಲೇ: ಸಿ.ಪಿ.ಕೆ.; ಪ್ರ: ಸುರುಚಿ ಪ್ರಕಾಶನ, ಸರಸ್ವತೀಪುರಂ, ಮೈಸೂರು–೯; ಪುಟ: ೯೬; ಬೆಲೆ: ರೂ. ೨–೫೦ (೫–೦೦) ೧೯೭೦.

ಸಂಶೋಧನ ರತ್ನಮಾಲಿಕೆ, ಲೇ: ಟಿ. ಕೇಶವಭಟ್ಟ; ಪ್ರ: ಚಿರ ಸಾಹಿತ್ಯ ಪ್ರಕಾಶನ, 28, ಮಾಳಿಗೆ, 3ನೇ ಮೇಯಿನ್ ರಸ್ತೆ, ಎನ್.ಆರ್. ಕಾಲೋನಿ, ಬೆಂಗಳೂರು–೧೯; ಪುಟ; ೨೩೬; ಬೆಲೆ: ರೂ. ೧೦–೫೦.



wo 7684—MUPM—2,500+25 copies—18-9-70

## ‘ಪ್ರಬುದ್ಧ ಕರ್ಣಾಟಕ’ಕ್ಕೆ ವಿನಿಮಯವಾಗಿ ಬರುವ ಪತ್ರಿಕೆಗಳು

*Annals of Oriental Research*, University of Madras; *Brahmavidya*, Adyar, Madras; *Bulletin of the School of Oriental and African Studies*, London; *Journal of the Andhra Historical Research Society*, Rajahmundry; *Journal of the Karnataka Historical Research Society*, Dharwar; *Quarterly Journal of the Mythic Society*, Bangalore; *The Indian P.E.N.* Bombay; *Annals of the Venkateswara Oriental Institute*, Tirupati; *The Jaina Siddhanta Bhaskara and the Jaina Gazette*; Arrah; *Bulletin of the Deccan College Research Institute*, Poona; *Publication of the Kannada Research Office*, Dharwar; *Annals of the Bhandarkar Oriental Research Institute*, Poona; *Journal of the Karnatak University*, Dharwar; *Public Affairs*, Bangalore.

‘ಪ್ರಪಂಚ’, ಹುಬ್ಬಳ್ಳಿ; ‘ಕರ್ಮವೀರ’, ಹುಬ್ಬಳ್ಳಿ; ‘ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆ’ (ತೆಲುಗು), ಕಾಕಿನಾಡ; ‘ಜಯಕರ್ನಾಟಕ’, ಧಾರವಾಡ; ‘ಜಯಂತಿ’, ಧಾರವಾಡ, ‘ವಿದ್ಯಾದಾಯಿನಿ’, ಮೈಸೂರು; ‘ಶರಣ ಸಾಹಿತ್ಯ’, ಬೆಂಗಳೂರು; ‘ಶಿವಾನುಭವ’, ಬಿಜಾಪುರ; ‘ಸುಬೋಧ’, ಬೆಂಗಳೂರು; ‘ಜೀವನ’, ಬೆಂಗಳೂರು; ‘ಪುಸ್ತಕ ಪ್ರಪಂಚ’, ಮೈಸೂರು; ‘ಕನ್ನಡ ನುಡಿ’, ಬೆಂಗಳೂರು; ‘ಸೋವಿಯೆತ್ ದೇಶ’, ಮದ್ರಾಸು; ‘ಪ್ರಕಾಶ’, ಉಡುಪಿ; ‘ಭಾರತವಾಣಿ’ (ಹಿಂದಿ), ಧಾರವಾಡ; ‘ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ’, ಬೆಂಗಳೂರು.

